# ಮುನ್ನುಡಿ

ಶ್ರೀ

ಮುಂಬಯಿ ಸರಕಾರದ ಶಿಕ್ಷಣಖಾತೆಯವರು ನಿರ್ಧರಿಸಿದ ಅಭ್ಯಾಸ ಕ್ರಮವನ್ನನುಸರಿಸಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳ ೬ ನೆಯ ಇಯತ್ತೆಯ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಶ್ರೀ. ಲಕ್ಕುಂಡಿ ರಂಗ ರಾಯರು ಬರೆದ ಈ ಚಿಕ್ಕ ಇತಿಹಾಸವು ಸ್ವಾಗತಾರ್ಹವಾಗಿದೆ. ಇವರು ಬರೆದ ೧ ನೆಯ ಪುಸ್ತಕದಲ್ಲಿ ಪ್ರಾಗೈತಿಹಾಸಿಕ ಕಾಲದಿಂದ ಆರಂಭಮಾಡಿ ಕ್ರಿ. ಶ. ೮ ನೆಯ ಶತಮಾನದ ವರೆಗೆ ಭಾರತ ಸಂಸ್ಕೃತಿಯ ಇತಿವೃತ್ತವನ್ನು ಚಿಕ್ಕ ಬಾಲಕರ ಮನಸ್ಸಿನಲ್ಲಿ ನಡುವಂತೆ ಹೃದಯಂಗಮವಾದ ವಿಷಯ ವಿತರಣೆಯಿಂದ ನಿರೂಪಿಸಿದ್ದಾರೆ. ಅದರ ಮುಂದಿನ ಮಟ್ಟವೆಂದು ಈ ಚಿಕ್ಕ ಇತಿಹಾಸವು ಬರೆಯಲ್ಪಟ್ಟಿದೆ. ಇದರಲ್ಲಿ ೧೮ ಪ್ರಕರಣಗಳಿದ್ದು ಅವುಗಳ ವಿಷಯವ್ಯವಸ್ಥೆಯು ಈ ಕೆಳಗಿನಂತಿದೆ.

೮ ನೆಯ ಶತಮಾನದಲ್ಲಿ ಹಿಂದುಸ್ಥಾನಕ್ಕೆ ಇಸ್ಲಾಂ ಧರ್ಮದ ಸಂಪರ್ಕ ವುಂಟಾದ್ದರಿಂದ ಅದರಿಂದ ಪರಸ್ಪರರಲ್ಲಿ ಆದ ಪರಿಣಾಮಗಳನ್ನು ತಿಳಿಸಿಹೇಳು ವದು ಯುಕ್ತವಾಗುವದು. ಆ ಪ್ರಕಾರ ಇಸ್ಲಾಂಧರ್ಮದ ಹುಟ್ಟು, ಬೆಳಿಗೆ, ಮೂಲತತ್ವಗಳನ್ನು ಹೇಳಿ ಆ ಧರ್ಮೀಯರು ಉತ್ತರ ಭಾರತದಲ್ಲಿ ಪ್ರವೇಶಿಸಿ ರಾಜಸತ್ತೆಯನ್ನು ಪಡೆದು ೧೩ ನೆಯ ಶತಮಾನದ ವರೆಗೆ ರಾಜ್ಯವಾಳಿದ ರೀತಿಯನ್ನು ತಿಳಿಸಿ ಹೇಳಲಾಗಿದೆ. ೧೪ ನೆಯ ಶತಮಾನದಲ್ಲಿ ಅವರು ದಕ್ಷಿಣ ಭಾರತದಲ್ಲಿ ಕಾಲಿಟ್ಟು ಅಲ್ಲಿ ಮಂಡಲಗಳನ್ನು ಸ್ಥಾಪಿಸಿ ರಾಜ್ಯವಾಳಲಿಕ್ಕೆ ಹತ್ತಿದ ಸಂಗತಿಯನ್ನು ನಿರೂಪಿಸಲಾಗಿದೆ. ಮುಸಲ್ಮಾನರು ಉತ್ತರಭಾರತದಲ್ಲಿ ಪ್ರವೇಶಮಾಡಿದಾಗ ಅಲ್ಲಿ ರಾಜರಾಗಿದ್ದ ರಾಜಪುತ್ರರು (ಗೂರ್ಜರ–ಪ್ರತೀಹಾರರು) ಸಮಕಾಲಿಕರಾಗಿ ಆಳುತ್ತಿದ್ದುದರಿಂದ ಅವರ ಇತಿಹಾಸವನ್ನು ಸಂಕ್ಷೇಪವಾಗಿ ತಿಳಿಸಿಹೇಳಲಾಗಿದೆ. ದಕ್ಷಿಣದಲ್ಲಿ ಅಲ್ಲಾವುದ್ದೀನ ಖಿಲ್ಜಿಯ ದಾಳಿಯನಂತರ ಹಿಂದೂ ರಾಜ್ಯವು ನಿರ್ನಾಮವಾಗುವ ಪ್ರಸಂಗ ಬಂದಾಗ ಹುಕ್ಕಬುಕ್ಕರೆಂಬ ಇಬ್ಬರು ಯುವಕರು ಶ್ರೀ. ವಿದ್ಯಾರಣ್ಯರ ಪ್ರಭಾವದಲ್ಲಿ ವಿಜಯನಗರದ ರಾಜ್ಯವನ್ನು ಸ್ಥಾಪಿಸಿ ಆರ್ಯಸಂಸ್ಕೃತಿಯನ್ನು ಉಳಿಸಿದರು.

ಆಗಲೂ ಮುಸಲ್ಮಾನರ ಬಹಮನೀರಾಜ್ಯವು ವಿಜಯನಗರದ ರಾಜರೊಡನೆ ಇಟ್ಟುಕೊಂಡಿದ್ದ ರಾಜಕೀಯ ಸಂಪರ್ಕವನ್ನು ತಿಳಿಸಿಹೇಳುವದು ಅವಶ್ಯವಿದ್ದುದರಿಂದ ಅದು ಯಥಾವತ್ತಾಗಿ ಹೇಳಲ್ಪಟ್ಟಿದೆ. ಶ್ರೀ ವ್ಯಾಸಯೋಗಿಗಳ ಪ್ರಭಾವದಲ್ಲಿ ಕೃಷ್ಣದೇವರಾಯನು ರಾಜ್ಯದ ಘನತೆಯನ್ನೂ ವೈಭವವನ್ನೂ ಬೆಳೆಸಿದ ಸಂಗತಿಯು ನಿರೂಪಿಸಲ್ಪಟ್ಟಿದೆ.

ಉತ್ತರದಲ್ಲಿ ಪಠಾಣರ ಆಳಿಕೆ ದಕ್ಷಿಣದಲ್ಲಿ ವಿಜಯನಗರ ರಾಜ್ಯಗಳು ಕೊನೆಗೊಂಡಾಗ ಪ್ರಸಂಗಾನುಸಾರವಾಗಿ ಮೊಗಲರು ಭಾರತದಲ್ಲಿ ರಾಜ್ಯವನ್ನು ಕಟ್ಟಿಕೊಂಡು ಪ್ರಬಲರಾಗಿದ್ದರು. ಅವರ ರಾಜ್ಯವು ಸುಮಾರು ೨೦೦ ವರ್ಷ ಒಳ್ಳೆಯ ವೈಭವದಿಂದ ಮೆರೆಯಿತು. ಅದೇ ಸಮಯದಲ್ಲಿ ದಕ್ಷಿಣದಲ್ಲಿ ಪಾಳಯಗಾರರಾಗಿ ರಾಜ್ಯವಾಳುತ್ತಿದ್ದ ಮುಸಲ್ಮಾನರ ಆಳಿಕೆಯೂ ನಡೆದಿತ್ತು. ಹೀಗೆ ಉತ್ತರ ದಕ್ಷಿಣಭಾರತವೆಲ್ಲ ಮ್ಲೇಂಛಸಂಸ್ಕೃತಿಯ ಪ್ರಭಾವಕ್ಕೆ ಒಳಪಟ್ಟು ತನ್ನ ಮೂಲಸ್ವರೂಪವನ್ನು ಮರೆಯಹತ್ತಿದಾಗ ಮಹಾರಾಷ್ಟ್ರದಲ್ಲಿ ಶಿವಾಜಿಯು ರಾಮದಾಸರ ಧರ್ಮಸ್ಫೂರ್ತಿಯಲ್ಲಿ ಗೋಬ್ರಾಹ್ಮಣ ಪ್ರತಿಪಾಲಕನಾಗಿ ರಾಜ್ಯವನ್ನು ಕಟ್ಟಿದನು. ಈ ರಾಜ್ಯವು ಕ್ರಿ. ಶ. ೧೭ ನೆಯ ಶತಮಾನದಿಂದ ೧೯ ನೆಯ ಶತಮಾನದ ಮಧ್ಯದ ವರೆಗೆ ನಡೆದು ಕಡೆಗೆ ಪಶ್ಚಿಮ ದೇಶಗಳಿಂದ ಬಂದ ವ್ಯಾಪಾರಿಗಳಾದ ಯುರೋಪೀಯರ ಕೈಸೇರಿತು.

ಹೀಗೆ ೮ ನೆಯ ಶತಮಾನದಿಂದ ೧೯ ನೆಯ ಶತಮಾನದ ವರೆಗೆ ಸಂಭವಿಸಿದ ರಾಜಕೀಯ ಪರಿಸ್ಥಿತಿಯನ್ನು ಈ ಚಿಕ್ಕಪುಸ್ತಕವು ಸಂಕ್ಷೇಪವಾಗಿ ಹೇಳುವದಲ್ಲದೆ ಆ ಅವಧಿಯಲ್ಲಿ ಪರಸ್ಪರ ಸಂಪರ್ಕದಿಂದ ಉಂಟಾದ ಸಾಂಸ್ಕೃತಿಕ ಪರಿಣಾಮಗಳನ್ನು ತಿಳಿಸಲಾಗಿದೆ. ಅದಲ್ಲದೆ ವಿವಿಧ ಪರಿಸ್ಥಿತಿಗಳ ಪ್ರಭಾವದಿಂದ "ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ। ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ॥" ಎಂದು ಭಗವಾನ್ ಶ್ರೀ ಕೃಷ್ಣನು ಹೇಳಿದಂತೆ ದೈವಸಂಕಲ್ಪದಿಂದ ಧರ್ಮಪ್ರವರ್ತನೆಗಾಗಿ ಅವತಾರ ತಾಳಿದ್ದ ಬಸವೇಶ್ವರ, ಮಧ್ವಾಚಾರ್ಯ, ವೈಷ್ಣವದಾಸಕೂಟ, ಮಹಾರಾಷ್ಟ್ರದ ಸಾಧುಸಂತರು, ಗುರುನಾನಕರ ಶೀಖಪಂಥ ಇತ್ಯಾದಿ ವಿಭೂತಿಗಳ ಪ್ರಯೋಜನ, ಉದ್ದೇಶ, ಕಾರ್ಯಗಳು ನಿರೂಪಿಸಲ್ಪಟ್ಟಿವೆ.

ಅಂತು ಈ ಚಿಕ್ಕ ಪುಸ್ತಕದಲ್ಲಿ ಮುಸಲ್ಮಾನರ ಸಂಪರ್ಕದಲ್ಲಿ ಹಿಂದುಸ್ಥಾನದ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ನೈತಿಕ ಜನಜೀವನದಲ್ಲಿ ಹೇಗೆ ಮಾರ್ಪಾಟು ಉಂಟಾಯಿತೆಂಬುದನ್ನು ಹೇಳುತ್ತ ರಾಜಪುತ್ರರು,ವಿಜಯನಗರದ ರಾಜರು, ಮರಾಠಾ ಅರಸರು ಇವರ ರಾಜಕೀಯ ಸಂಪತ್ತಿನ ಉದ್ಧಾರವನ್ನೂ ಬಸವೇಶ್ವರ, ಮಧ್ವಾಚಾರ್ಯ, ವ್ಯಾಸಯೋಗಿ, ಪುರಂದರದಾಸ, ಕನಕದಾಸ, ರಾಮದಾಸ, ತುಕಾರಾಮ, ಗುರುನಾನಕ ಮುಂತಾದವರ ನೇತೃತ್ವದಲ್ಲಿ ಉಂಟಾದ ಧಾರ್ಮಿಕ ಜೀವನ ಉನ್ನತಿಯನ್ನೂ ಪ್ರಸಂಗಕ್ಕೆ ಅನುಗುಣವಾಗುವಂತೆ ಚಿಕ್ಕಮಕ್ಕಳ ಬುದ್ಧಿಗೆ ನಿಲುಕುವಂತೆ ಹೇಳಿದೆ. ಈ ಕಾಲಾವಧಿಯಲ್ಲಿ ಹಿಂದುಸ್ಥಾನದ ವಾಸ್ತುಶಿಲ್ಪ, ಸಂಗೀತ ಸಾಹಿತ್ಯಾದಿ ಕಲೆಗಳು ಪ್ರೋತ್ಸಾಹವನ್ನು ಪಡೆದು ಬೆಳೆದದ್ದನ್ನೂ ನಿರೂಪಿಸಿದೆ. ಈ ಎಲ್ಲ ಸಂಗತಿಗಳ ವಿಮರ್ಶೆಯಿಂದ ಈ ಗ್ರಂಥವು ಹಿಂದುಸ್ಥಾನದ ೧೦೦೦ ವರ್ಷಗಳ ಪ್ರಮಾಣಪರಿಶುದ್ಧವಾದ ಸಾಂಸ್ಕೃತಿಕ ಚರಿತ್ರೆಯನ್ನು ಒಳಗೊಂಡಿದೆಯೆನ್ನಬಹುದು.

ಶ್ರೀ. ಲಕ್ಕುಂಡಿ ರಂಗರಾಯರು ಈ ಅತ್ಯಂತ ವಿಶಾಲವಾದ ವಿಷಯ ಸಂಘಾತವನ್ನು ಚಿಕ್ಕ ಚಿಕ್ಕ ಪ್ರಕರಣಗಳಲ್ಲಿ ಪೃಥಕ್ಕರಿಸಿ ಸಣ್ಣ ಹುಡುಗರಿಗೆ ತಿಳಿಯುವಂತೆ ಶುದ್ಧವಾದ ಸರಳ ಕನ್ನಡ ಭಾಷೆಯಲ್ಲಿ ಹೇಳಿದ್ದಾರೆ. ತಮ್ಮ ಶಿಕ್ಷಣ ಕಲೆಯ ಅನುಭವಬಲದಿಂದ ವಿಷಯಕ್ಕೆ ತಕ್ಕಂತೆ ಅಭ್ಯಾಸನಗಳನ್ನು ಕಲ್ಪಿಸಿ, ಹೇಳಿದ ಸಂಗತಿಗಳು ಬಾಲಕರ ಚಿತ್ತವನ್ನು ಆಕರ್ಷಿಸುವಂತೆ ಅಲ್ಲಲ್ಲಿ ಚಿತ್ರಗಳನ್ನು ಹಾಕಿ, ಪ್ರಾಥಮಿಕ ಮಾಧ್ಯಮಿಕ ಶಾಲೆಗಳಲ್ಲಿ ಇತಿಹಾಸವನ್ನು ಕಲಿಸುವ ಪದ್ಧತಿಯನ್ನು ತೋರಿಸಿ ಕೊಟ್ಟಿದ್ದಾರೆ. ಇದರಿಂದ ಅವರು ಕರ್ನಾಟಕದಲ್ಲಿ ಇತಿಹಾಸ ಶಿಕ್ಷಣಕ್ಕೆ ಹೊಸಕಳೆಯನ್ನು ತಂದಿದ್ದಾರೆನ್ನಬಹುದು.

ಈ ಚಿಕ್ಕ ಪುಸ್ತಕವು ತನ್ನ ಕಾರ್ಯವನ್ನು ಸಮರ್ಥತೆಯಿಂದ ಸಾಧಿಸಬಲ್ಲದೆಂದು ನಮ್ಮ ದೃಢವಾದ ನಂಬುಗೆ ಇದೆ.

ಧಾರವಾಡ (ಮಾಳಮಡ್ಡಿ)
೨೩-೧-೧೯೩೧

ರಾ. ಸ್ವಾ. ಪಂಚಮುಖಿ, ಎಮ್. ಎ.
ವಿದ್ಯಾರತ್ನ, ಡೈರೆಕ್ಟರ, ಕನ್ನಡ ರಿಸರ್ಚ
ಇನಸ್ಟಿಟ್ಯೂಟ, ಧಾರವಾಡ.

# ಅಭಿಪ್ರಾಯಗಳು

## ಶ್ರೀ. ಕೇ. ಬಿ. ಕೀರಗಾಂವಕರರ ಅಭಿಪ್ರಾಯ

### ಜಯ ಹಿಂದ!

ಶಿಕ್ಷಣಕ್ರಮದಲ್ಲಿ ಇತಿಹಾಸಕ್ಕೆ ಒಂದು ದೊಡ್ಡ ಸ್ಥಾನವಿದೆಯಷ್ಟೇ? ಆದರೆ ಆಯಾ ದೇಶಗಳ ಗತಕಾಲವನ್ನು ಬಾಲಕರ ಮನಸ್ಸಿನ ಮೇಲೆ ಮೂಡಿಸುವ ವಿಧಾನ, ಉದ್ದೇಶ, ದೃಷ್ಟಿಕೋನ, ವಿಷಯವಿಸ್ತಾರದ ಮಿತಿಮೇರೆ ಇವು ಅನೇಕ ಬಗೆಯಾಗಿವೆ ಎಂಬುದು ಸ್ವಯಂಸ್ಪಷ್ಟ ಸಂಗತಿ. ಮಕ್ಕಳಿಗಾಗಿ ಇದುವರೆಗೆ ಬರೆಯಲಾದ ಇತಿಹಾಸದ ಉದ್ದೇಶ ದೃಷ್ಟಿಕೋನಗಳು ಬೇರೆಬೇರೆಯಾಗಿಯೇ ಇದ್ದವು. ಭಾರತೀಯರ ಪರಂಪರಾಗತ ತಪಃಪೂತ ಸ್ವಭಾವ, ಸನಾತನ ಧರ್ಮ ಇವುಗಳ ಪ್ರಭಾವಲಯದಲ್ಲಿ ವಿರಾಜಿಸಿದ ರಾಜ ರಾಜೇಶ್ವರರ ಮತ್ತು ಜನಪದದ ಉದಾತ್ತ-ಉಜ್ವಲ ಚರಿತ್ರವನ್ನು ಬಾಸಣಿಸುವ ಎತ್ತುಗಡೆಯನ್ನೇ ಇದುವರೆಗೆ ವ್ಯವಸ್ಥಿತವಾಗಿ ಮಾಡಿದ್ದುಂಟು. ಏಕೆಂದರೆ, ಇಲ್ಲಿಯವರೆಗೆ ರಚಿಸಲ್ಪಟ್ಟ ಇತಿಹಾಸಗಳೆಲ್ಲ ಪರಕೀಯರಿಂದ ರಚಿಸಲ್ಪಟ್ಟವುಗಳಾಗಿದ್ದವಲ್ಲವೇ? ಈ ಕಾರಣದಿಂದಲೇ ಇಂದಿನ ಜಯಭಾರತ ಸರಕಾರವು ಹೊಸದೃಷ್ಟಿಕೋನದಿಂದ ರಚಿತವಾದ ಇತಿಹಾಸಮುಕುರವನ್ನು ಬಾಲಕರ ಕೈಗೆ ಕೊಡಬೇಕೆನ್ನುತ್ತಿದೆ. ಇಂತಹ ಸಂದರ್ಭದಲ್ಲಿ ಶ್ರೀ. ಲಕ್ಕುಂಡಿ ರಂಗರಾಯರು ಹೊಸದೃಷ್ಟಿಕೋನದಿಂದ ರಚಿತವಾದ ತಮ್ಮ ಈ ಪುಸ್ತಕವನ್ನು ಪ್ರಕಟಿಸುತ್ತಿರುವದು ಇಷ್ಟವಾದ ಸಂಗತಿ.

ಕೇವಲ ಆಳಿದ ಅರಸರ ಹೆಸರುಗಳು, ಯುದ್ಧಗಳ ಕಾಲಗಳು, ಸೋತವರ ಗೆದ್ದವರ ಕತೆಗಳು ಇಷ್ಟನ್ನಷ್ಟೇ ಹೇಳಿದ್ದು ಇತಿಹಾಸವೆನಿಸಲು ತಕ್ಕದ್ದೇ? ಸರ್ವಥಾ ಅಲ್ಲ. ಪ್ರಾಣಸ್ಪಂದನವಿಲ್ಲದ ದೇಹಕ್ಕೆ ಬೆಲೆಯುಂಟೇ? ಮಾನವನ ಲೌಕಿಕ ಸಾಮಾಜಿಕ ರಾಜಕೀಯ ಆಂತರಿಕ ಆಧ್ಯಾತ್ಮಿಕ ವಿಕಾಸಕ್ರಮವನ್ನೂ ಆನುಷಂಗಿಕವಾಗಿ ಆತನು ತೋರಿಸಿದ ಮಾನವೀಯ ಲಕ್ಷಣಗಳನ್ನೂ ಪ್ರಸ್ಫುಟವಾಗಿ ಎತ್ತಿ ತೋರಿದಾಗ ಮಾತ್ರ ಅದು ಇತಿಹಾಸವೆಂಬ ಅಭಿಧಾನಕ್ಕೆ ತಕ್ಕದ್ದಾಗುವದು. ಈ ಸಂಗತಿಗಳನ್ನೆಲ್ಲ ಈ ಪುಸ್ತಕವು ಚಿಕ್ಕದಿದ್ದರೂ ಬಾಲಕರ ಮನಸ್ಸು ಹಿಡಿಯುವ ಬಗೆಯಲ್ಲಿ ಅಂತಸ್ತು ಅಂತಸ್ತುಗಳಾಗಿ ಪ್ರತಿಪಾದಿಸಿ ತೋರಿಸಿದೆ. ಶ್ರೀ. ಲಕ್ಕುಂಡಿಯವರ ಪರಿಣತವಾದ ಅಧ್ಯಾಪನಪ್ರತಿಭೆಯೆಲ್ಲ ಈ ಇತಿಹಾಸದ ಪುಟಪುಟದಲ್ಲಿ ಪ್ರತಿಬಿಂಬಿತವಾಗಿದೆ.

೫ ನೆಯ ಇಯತ್ತೆಗಾಗಿ ಇವರಿಂದ ರಚಿತವಾದ ಇತಿಹಾಸ ಪುಸ್ತಕವನ್ನು ಈ ಮೊದಲು ಕೂಲಂಕಷವಾಗಿ ಓದಿ ಆನಂದಪಟ್ಟಿದ್ದೆ. ಆ ಆನಂದವನ್ನು ಆಗ ನನ್ನ ಅಭಿಪ್ರಾಯರೂಪದಲ್ಲಿ ವ್ಯಕ್ತಪಡಿಸಿಯೂ ಬಿಟ್ಟಿದ್ದೆ. ಇವರ ಮೊದಲನೆಯ ಪುಸ್ತಕದಲ್ಲಿ ಪ್ರಾಚೀನಭಾರತದ ಇತಿಹಾಸವನ್ನು ಮಾತ್ರ ವಿವರಿಸಲಾಗಿತ್ತು. ಈ ಪುಸ್ತಕದಲ್ಲಿಯ ವಿವರಗಳು ನಮ್ಮ ದೇಶದಲ್ಲಿ ಮುಸಲ್ಮಾನರ ಸಂಪರ್ಕದಿಂದ ಉಂಟಾದ ಘಟನೆಗಳನ್ನೊಳಗೊಂಡದ್ದಾಗಿವೆ.

ಈ ನಮ್ಮ ಭೂಖಂಡದಲ್ಲಿ ಎಷ್ಟೋ ವೈಭವಸಂಪನ್ನ ರಾಷ್ಟ್ರಗಳು ಉದಯವಾಗಿ ಬೆಳಗಿ ಅಸ್ತವಾಗಿವೆ. ಕೆಲಕಾಲ ಏಕಚಕ್ರಾಧಿಪತ್ಯವನ್ನು ವಹಿಸಿದ ರಾಷ್ಟ್ರಗಳು ಕೂಡ ಹೇಳಹೆಸರಿಲ್ಲದೆ ಹೋಗಿವೆ. ನಮ್ಮ ಸಂಸ್ಕೃತಿ ಸಂಪ್ರದಾಯಗಳಿಗೆ ಬಗೆಬಗೆಯ ಪರಕೀಯ ಶಕ್ತಿಗಳ ಸಂಪರ್ಕವಾಗಿ ಒಮ್ಮೊಮ್ಮೆ ಆಘಾತಗೊಂಡದ್ದೂ ಉಂಟು, ಉತ್ತೇಜನ ಹೊಂದಿದ್ದೂ ಉಂಟು. ಹೀಗಿದ್ದರೂ ನಮ್ಮದೇ ಆದ ಸಂಸ್ಕೃತಿ, ಜೀವನದ ಧ್ಯೇಯ, ಆಧ್ಯಾತ್ಮಿಕ ವಿಚಾರದ ಪ್ರಣಾಲಿಗಳು ಮಹಾನದಿಗಳು ಹರಿಯುವಂತೆ ನಿಧಾನವಾಗಿ ಶಾಂತವಾಗಿ ಸಾಗಿ ಬಂದಿವೆ. ಹೀಗಾಗಿ ಅನೇಕ ಸಂಸ್ಕೃತಿ ಸಂಸ್ಕಾರ ಧರ್ಮ ಪಂಥ ನೀತಿ ನಡೆವಳಿಗಳ ತವರ್ಮನೆಯಾದ ನಮ್ಮ ಭರತಖಂಡದ ಇತಿಹಾಸವನ್ನು ಬರೆಯುವದು ದುಃಸಾಧ್ಯವೆಂಬದನ್ನು ಬೇರೆ ಹೇಳಬೇಕಾಗಿಲ್ಲ. ಆದರೂ ಈ ಮಾತನ್ನು ಇತಿಹಾಸಕಾರರಾದ ಶ್ರೀ. ಲಕ್ಕುಂಡಿಯವರು ಒಳ್ಳೆಯ ಸಮಂಜಸವಾಗಿ ನಿರೂಪಿಸಿದ್ದು ಒಂದು ದೊಡ್ಡ ಸಾಹಸಕಾರ್ಯವನ್ನು ಜರುಗಿಸಿದಂತೆಯೇ ಸರಿ ಎಂದು ಹೇಳಿದರೆ ಅದೇನೂ ಅತಿಶಯೋಕ್ತಿಯಾಗದೆಂದು ನನ್ನ ಎಣಿಕೆ.

೬ ನೆಯ ಇಯತ್ತೆಯ ಅಭ್ಯಾಸಪತ್ರಿಕೆಗೆ ಅನುಗತವಾಗಿ ಈ ಚರಿತ್ರೆಯನ್ನು ವಿವರಿಸಿದ್ದಾಗಿದೆ. ಐತಿಹಾಸಿಕ ಘಟನೆಗಳ ತುಲನಾತ್ಮಕ ಮಹತ್ತ್ವವನ್ನು ಅರಿತುಕೊಂಡು ಆಯಾ ಅರಸರ ಕಾಲದ ನಮ್ಮ ದೇಶದ ನಿಜ ಸ್ಥಿತಿಯನ್ನು ನಮ್ಮ ಮಕ್ಕಳ, ಅದೇಕೆ ದೊಡ್ಡವರ ಕಣ್ಣೆದುರೂ ಬಂದುನಿಲ್ಲುವಂತೆ ಲೇಖಕರು ದಕ್ಷತೆಯನ್ನು ವಹಿಸಿದ್ದಾರೆ.

ಕೇವಲ ಕೆಲವು ದೊಡ್ಡ ಗ್ರಂಥಗಳಿಂದ 'ನಕಲು' ಮಾಡದೆ, ಇಲ್ಲವೆ ಚಿಕ್ಕ ಮಕ್ಕಳಿಗಾಗಿ ರಚಿಸಲ್ಪಟ್ಟ ಈ ಬಗೆಯ ಪುಸ್ತಕಗಳ ಅಂಧಾನುಕರಣ

ಮಾಡದೆ ಪ್ರತಿಯೊಂದು ಸಂಗತಿಯನ್ನೂ ತಮ್ಮದನ್ನಾಗಿ ಮಾಡಿಕೊಂಡು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಇತಿಹಾಸವನ್ನು ವಿಂಗಡಿಸಿ, ವಿಶ್ಲೇಷಿಸಿ, ನಯವಾಗಿ ನೆಯಿದಿದ್ದಾರೆ. ಯಾವ ಸಂಗತಿಯೇ ಇರಲಿ, ಅದರ ಬಗೆಗೆ ಮೊದಲು ತಮಗೆ ಮನವರಿಕೆಯಾದಮೇಲೆಯೇ ಇವರು ಪರರ ಮುಂದೆ ಅದನ್ನಿಡುವರು. ಸಂದಿಗ್ಧವಾದದ್ದಾವದನ್ನೂ ಒಪ್ಪಲು ಇವರು ಸಿದ್ಧರಿಲ್ಲ. ಇದು ಇವರ ಸ್ವಭಾವವೇ ಎನ್ನಲು ಅಡ್ಡಿ ಇಲ್ಲ.

ಹೊಸಪದ್ಧತಿಯ ಮೇರೆಗೆ ಇತಿಹಾಸವನ್ನು ಕಲಿಸುವಲ್ಲಿ ಶ್ರೀ. ಲಕ್ಕುಂಡಿ ಯವರು ಸಿದ್ಧಹಸ್ತರೆಂಬುದಕ್ಕೆ ಈ ಪುಸ್ತಕದಲ್ಲಿ ಅನುಸರಿಸಿದ ಯೋಜನಾ ಕ್ರಮವೇ ಸಾಕ್ಷಿ. ಇದರಲ್ಲಿಯ ಚಿತ್ರಗಳೂ ನಕಾಶಗಳೂ ಅರ್ಥಪೂರ್ಣ ವಾಗಿದ್ದು ಅವನ್ನು ಸಂದರ್ಭಕ್ಕನುಸಾರವಾಗಿ ತಕ್ಕಷ್ಟು ಮಾತ್ರ ಹಾಕಲಾಗಿದೆ. ಇತಿಹಾಸ ಪುಸ್ತಕಗಳಲ್ಲಿ ನಾವು ಸಾಮಾನ್ಯವಾಗಿ ಕಾಣದಿದ್ದ ಕೆಲವು ವಿರಳ ಚಿತ್ರಗಳನ್ನು ಇಲ್ಲಿ ಕಾಣಬಹುದು.

ಮುಸಲ್ಮಾನ ಸಂಸ್ಕೃತಿಯ ವೈಶಿಷ್ಟ್ಯವನ್ನು ವಿವರಿಸುವಾಗ ಬಂದ ಅನೇಕ ಪಾರಿಭಾಷಿಕ ಶಬ್ದಗಳ ಅರ್ಥನಿರೂಪಣೆಯನ್ನು ಅಲ್ಲಲ್ಲಿ ಸೇರಿಸಿ ಓದು ಗರಿಗೆ ಅನುಕೂಲ್ಯವನ್ನೊದಗಿಸಿಕೊಟ್ಟಿದ್ದಾರೆ. ಪ್ರತಿ ಪ್ರಕರಣದ ಕೊನೆಗೆ ಕೊಟ್ಟ ಅಭ್ಯಸನಗಳೂ ಪಠ್ಯಪುಸ್ತಕದೃಷ್ಟಿಯಿಂದ ಒಳ್ಳೆಯ ಉಪಯುಕ್ತ ವಾಗಿಯೇ ಇವೆ.

ಪುಸ್ತಕದ ಕೊನೆಯ ಭಾಗದಲ್ಲಿ ಧರ್ಮಗುರುಗಳು ಮತ್ತು ಸಾಧುಸಂತರು ಇವರ ಜೀವನಚರಿತ್ರೆಗಳನ್ನು ಪ್ರತ್ಯೇಕಿಸಿ ಕೊಟ್ಟದ್ದು ಈ ಪುಸ್ತಕದ ಇನ್ನೊಂದು ವೈಶಿಷ್ಟ್ಯ. ಈ ಮಹಾವಿಭೂತಿಗಳು ಆಯಾ ದೇಶಗಳಲ್ಲಿ ಕಾಲಮಾನ ಪರಿಸ್ಥಿತಿಗಳ ಸಂಘಾತದಲ್ಲಿ ಮೈದಾಳಿ ಬಂದ ಅಲೌಕಿಕ ವ್ಯಕ್ತಿಗಳೇ ಸರಿ.

ಶಿಕ್ಷಣಪ್ರಪಂಚದಲ್ಲಿ ಕೆಲಸ ಮಾಡುವವರೆಲ್ಲ ಈ ಪುಸ್ತಕವು ನೀಡುವ ನೆರವನ್ನು ಒಳ್ಳೆಯ ಆದರದಿಂದಲೂ ಕೃತಜ್ಞತೆಯಿಂದಲೂ ಬರಮಾಡಿ ಕೊಳ್ಳುವರೆಂದು ನಾನು ಹಾರೈಸುತ್ತೇನೆ.

ಪದವೀಧರರ ಜೀವನ ಶಿಕ್ಷಣ<br>ಕೇಂದ್ರ, ಧಾರವಾಡ. } **ತೇರಗಾಂವಕರ ಕೃಷ್ಣರಾಯ.**

## ಪ್ರೊ. ಬಸವನಾಳರ ಅಭಿಪ್ರಾಯ

ಶ್ರೀಮಾನ್ ಲಕ್ಕುಂಡಿ ರಂಗರಾಯರು ಬರೆದ "ಭಾರತೀಯ ಇತಿಹಾಸ ಪ್ರಕಾಶ" ಎದರಡನೆಯ ಪುಸ್ತಕವನ್ನು ಒಳ್ಳೆ ಕುತೂಹಲದಿಂದ ಓದಿದ್ದೇನೆ. ಈ ಪುಸ್ತಕದ ಕೆಲ ವೈಶಿಷ್ಟ್ಯಗಳನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಲು ನನಗೆ ಸಂತೋಷವೆನಿಸುತ್ತಿದೆ. ಈ ಪುಸ್ತಕವು ಪ್ರಾಥಮಿಕ ಮತ್ತು ಮಧ್ಯಮಿಕ ಶಾಲೆಗಳ ಆರನೆಯ ವರ್ಗದ ವಿದ್ಯಾರ್ಥಿಗಳಿಗಾಗಿ ಬರೆದುದು, ಹೊಸ ಅಭ್ಯಾಸಪತ್ರಿಕೆಗೆ ಅನುಸಾರವಾಗಿಯೆ ಬರೆಯಲಾಗಿದೆ—ಎಂಬುದು ವಿಷಯಗಳ ಪರಿವಿಡಿಯಿಂದಲೇ ಗೊತ್ತಾಗುತ್ತಿದೆ. ಇದರಿಂದಾಗಿ ಶಿಕ್ಷಕರಿಗೂ ವಿದ್ಯಾರ್ಥಿಗಳಿಗೂ ವಿಷಯಗಳನ್ನು ಏಕಾಗ್ರತೆಯಿಂದ ಸಾಗಿಸಲು ಅನುಕೂಲವಾಗಿದೆಯೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಇತಿಹಾಸವು ಒಂದು ಮಹಾಸಾಗರದಂತೆ; ಅದರಲ್ಲಿ ಅನರ್ಘ್ಯ ಮುತ್ತುಗಳೂ ಅಲ್ಪ ಪ್ರಮಾಣದಲ್ಲಿ ದೊರಕುವಂತೆ, ಬೆಲೆಗೆ ಬಾರದ ಶಂಕು, ಕವಡಿ ಚಿಪ್ಪುಗಳೂ ಅಸಂಖ್ಯವಾಗಿ ದೊರಕುವುವು. ಬಲ್ಲವರು ಮುತ್ತುಗಳನ್ನು ಆಯ್ದುಕೊಂಡು ಉಳಿದುವುಗಳನ್ನು ಬಿಸುಡುವರು. ಆಯ್ದುಕೊಳ್ಳುವುದಕ್ಕಿಂತಲೂ ಬಿಸುಡುವುದರಲ್ಲಿಯೇ ಬಲ್ಲಿದತನ ಪ್ರಕಟವಾಗುತ್ತಿದೆ. ಈ ಸತ್ಯವನ್ನರಿತ ಶ್ರೀ. ಲಕ್ಕುಂಡಿಯವರು ಚಿಕ್ಕ ಮಕ್ಕಳ ಮನೋಭೂಮಿಕೆಯ ಸೂಕ್ಷ್ಮತೆಯನ್ನನುಲಕ್ಷಿಸಿ ಐತಿಹಾಸಿಕ ಸತ್ಯಕ್ಕೆ ಕುಂದು ತಾರದಂತೆ ವಿಷಯ ಸಂಗ್ರಹವನ್ನು ಮಾಡಿದ್ದಾರೆ. ವಿಶಾಲವಾದೀ ಭಾರತ ದೇಶದಲ್ಲಿ ಸದ್ಯಕ್ಕೆ ಅಸ್ತಿತ್ವದಲ್ಲಿರುವ ಭಿನ್ನ ಭಿನ್ನ ಧರ್ಮದವರಲ್ಲಿ ಸೌಹಾರ್ದವು ನೆಲೆಸಬೇಕಾದುದು ಅತ್ಯಗತ್ಯವಾದುದರಿಂದ, ಈ ಪುಸ್ತಕದ ಪರಿವಿಡಿಯಲ್ಲಿ ಬರುವ ಮುಸ್ಲಿಮ್ ರಾಜ್ಯಗಳ ಚರಿತ್ರೆಯ ನಿಜವಾದ ಮರ್ಮವನ್ನೂ, ಇಸ್ಲಾಮ್ ಧರ್ಮದ ನೈಜ ಭವ್ಯತೆಯನ್ನೂ, ಇಸ್ಲಾಮ್ ಸಂಸ್ಕೃತಿಯ ಸತ್ಯವಾದ ತಿರುಳನ್ನೂ ಎತ್ತಿ ತೋರಿಸಿದ್ದಾರೆ. ಆ ಕಾಲದ ಇತಿಹಾಸದಲ್ಲಿ ದೊರಕುವ, ಹಿಂದೂ ಮುಸ್ಲಿಮರಲ್ಲಿದ್ದ ಸಹಕಾರ ಸಹಾನುಭೂತಿಗಳ ಅನೇಕ ಉದಾಹರಣೆಗಳನ್ನೂ ಕೊಟ್ಟಿದ್ದಾರೆ; ಸತ್ಯದ ದೃಷ್ಟಿಯಿಂದ ಕಟು ಸಂಗತಿಗಳನ್ನು ಹೇಳುವಾಗ, ಸೌಮ್ಯವಾದ ಭಾಷೆಯನ್ನು ಬಳಸಿದ್ದಾರೆ.

ಶ್ರೀ. ಲಕ್ಕುಂಡಿಯವರು ನುರಿತ ಶಿಕ್ಷಕರಾದುದರಿಂದ ವಿದ್ಯಾರ್ಥಿಗಳ ಕುತೂಹಲವನ್ನು ಕೆರಳಿಸುವ ದೃಷ್ಟಿಯಿಂದ ಅನೇಕ ಹೊಸ ಚಿತ್ರಗಳನ್ನು ಸೇರಿಸಿರುವರು. ಅಭ್ಯಸನಗಳನ್ನು ಕೊಡುವಲ್ಲಿ ವೈವಿಧ್ಯವಿದೆ. ಭಾಷೆ ಸರಳವಾಗಿದೆಯಾದರೂ ಶೈಲಿ ಚಿತ್ತಾಕರ್ಷಕವಾಗಿದೆ. ಭಿನ್ನಾಭಿಪ್ರಾಯ ವಿದ್ದಲ್ಲಿ ಅವುಗಳನ್ನು ಅಡಿಟಿಪ್ಪಣಿಯಲ್ಲಿ ಸೂಚಿಸಲಾಗಿದೆ. ಒಟ್ಟಿನಲ್ಲಿ ಸಂದಿಗ್ಧತೆಗೆ ಎಡೆಯಿಲ್ಲದಂತೆ ನೋಡಿಕೊಳ್ಳಲಾಗಿದೆ.

ಬಾಲಕರ ಶಿಕ್ಷಣಕ್ರಮದಲ್ಲಿ ಇತಿಹಾಸಕ್ಕೆ ಅತಿ ಮಹತ್ತ್ವದ ಸ್ಥಾನ ವಿದೆ. ಸ್ವಂತದ ಬಗೆಗೆ ಸದಭಿಮಾನ, ಇತರರ ಬಗೆಗೆ ಸಹಾನುಭೂತಿ, ವಿಶಾಲಭಾವನೆ, ಉತ್ತಮ ನಾಗರಿಕತೆ—ಇವೆಲ್ಲ ಚಿಕ್ಕ ಮಕ್ಕಳಲ್ಲಿ ಚೆನ್ನಾಗಿ ಅಂಕುರಿಸಿ ಫಲಿಸಬೇಕಾದರೆ ಇತಿಹಾಸವೆ ಮುಖ್ಯ ಸಾಧನ. ಆದರೆ ಅಂತಹ ಗುರಿಯನ್ನಿಟ್ಟುಕೊಂಡು ಬರೆದ ಇತಿಹಾಸ ಪುಸ್ತಕವೂ ಶಿಕ್ಷಕರ ಮತ್ತು ಬಾಲಕರ ಕೈಗೆ ಬೀಳಬೇಕು. ಈ ಪುಸ್ತಕ ಅಂತಹ ಪುಸ್ತಕಗಳಲ್ಲಿ ಒಂದೆಂದು ಹೇಳಲು ನನಗೆ ಆನಂದವೆನಿಸುತ್ತಿದೆ.

**ಧಾರವಾಡ.**
೬–೩–೧೯೫೧.

**ಶಿ. ಶಿ. ಬಸವನಾಳ.**

# ಲೇಖಕನ ಪ್ರಾರಂಭದ ನಾಲ್ಕು ಮಾತುಗಳು

ಇಂದಿನ ಭಾರತದ ಪರಿಸ್ಥಿತಿಯಲ್ಲಿ ಪ್ರಸ್ತುತ ಪುಸ್ತಕದಲ್ಲಿ ಅಡಕವಾಗಿರುವ ಇತಿಹಾಸಕಾಲ ( ಕ್ರಿ. ಶ. ಸುಮಾರು ೭–೧೮ ಶತಮಾನಗಳ ಕಾಲ ) ವನ್ನು ಕುರಿತು ಬರೆಯುವದು ತುಸು ಕಷ್ಟದ ಕೆಲಸ. ಏಕೆಂದರೆ, ಮೇಲೆ ಹೇಳಿದ ೧೦–೧೧ ಶತಮಾನಗಳಲ್ಲಿ ಆಗಿಹೋದ ಐತಿಹಾಸಿಕ ಸಂಗತಿಗಳನ್ನು ಲೇಖಕನು ತುಸು ಆಳವಾಗಿ ಅಭ್ಯಸಿಸಿ, ಯೋಗ್ಯವಿಷಯಗಳನ್ನು ಸಂಗ್ರಹಿಸಿ, ಅವುಗಳನ್ನು ಯೋಗ್ಯರೀತಿಯಾಗಿ ಚಿತ್ರಿಸಿ, ಜನರಲ್ಲಿ ಪರಸ್ಪರ ಸ್ನೇಹಭಾವ (ಸೌಹಾರ್ದತೆ), ಪ್ರೀತಿ ವಿಶ್ವಾಸಗಳು ತಲೆದೋರುವಂತೆ ಮಾಡಬಹುದು. ಇದರಿಂದ, ಭಾರತವು ಏಕರಾಷ್ಟ್ರ, ಭಾರತೀಯರೆಲ್ಲರೂ ಒಬ್ಬ ತಾಯಿಯ ಮಕ್ಕಳೆಂಬ ಭಾವನೆಯು ಸಹಜವಾಗಿ ಎಲ್ಲರಲ್ಲೂ ಒಡಮೂಡುವದು ಖಂಡಿತ.

ಭಾರತೀಯರು ತಮ್ಮ ಸಂಕುಚಿತ ಮನೋಭಾವನೆಗಳನ್ನು ತೊಡೆದೊಗೆದು ವಿಶಾಲಹೃದಯರಾಗಬೇಕಾದುದು ಈ ಕಾಲದಲ್ಲಿ ಅತ್ಯವಶ್ಯ. ಇಂದಿನ ಬಾಲಕರು ಮುಂದಿನ ನಾಗರಿಕರು. ಭಾರತದ ಪ್ರಾಚೀನ ಗೌರವಕ್ಕನುಸಾರವಾಗಿ ಇಂದಿನ ಬಾಲಕರನ್ನು ಭಾರತೀಯ ಸಮಾಜದ ಉಪಯುಕ್ತ ನಾಗರಿಕರನ್ನಾಗಿ ಮಾಡುವದೇ ಇಂದಿನ ಶಿಕ್ಷಣದ ಸಾಮಾನ್ಯ ಗುರಿ. ಇದರಲ್ಲಿ ಶಾಲೆಗಳಲ್ಲಿಯ ಶಿಕ್ಷಕ–ಶಿಕ್ಷಿಕೆಯರ ಹೊಣೆಗಾರಿಕೆಯನ್ನು ಕಡೆಗಣಿಸುವಂತಿಲ್ಲ. ಅಂತೆಯೇ ಪ್ರಾಥಮಿಕ ಹಾಗು ಮಾಧ್ಯಮಿಕ ಶಾಲೆಗಳಲ್ಲಿಯ ಬಾಲಕ-ಬಾಲಿಕೆಯರ ಹಾಗೂ ಶಿಕ್ಷಕ-ಶಿಕ್ಷಿಕೆಯರ ಕೊರತೆಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಈ ಚಿಕ್ಕ ಪುಸ್ತಕವನ್ನು ಮೇಲೆ ಹೇಳಿದ ಶಾಲೆಗಳಲ್ಲಿಯ ೬ ನೆಯ ಇಯತ್ತೆಯ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಉಪಯೋಗವಾಗಲೆಂದು ರಚಿಸಲಾಗಿದೆ. ಈ ಪುಸ್ತಕವು, ಸಂಬಂಧಿಸಿದ ವಿದ್ಯಾರ್ಥಿ–ವಿದ್ಯಾರ್ಥಿನಿಯರಿಗೂ, ಶಿಕ್ಷಕ–ಶಿಕ್ಷಿಕೆಯರಿಗೂ ಮತ್ತು ವಿದ್ಯಾಭಿಮಾನಿಗಳಾದ ಶಿಕ್ಷಣಾಧಿಕಾರಿಗಳಿಗೂ ಶಿಕ್ಷಣ ತಜ್ಞರಿಗೂ ತುಸುಮಟ್ಟಿಗಾದರೂ ಉಪಯುಕ್ತವೆನಿಸಿದರೆ, ನಾನು ಕೃತಕೃತ್ಯನೆಂದೂ ನನ್ನ ಅಳಿಲುಸೇವೆಯು ಸಫಲವಾಯಿತೆಂದೂ ಭಾವಿಸುವೆನು.

ಭಾರತೀಯ ಇತಿಹಾಸ ಪ್ರಕಾಶ–೧ ನೆಯ ಪುಸ್ತಕವನ್ನು ಬರೆಯುವಾಗ ಅನುಸರಿಸಿದ ರೀತಿಯಂತೆಯೇ ಈ ಪುಸ್ತಕದ ರಚನೆಯಲ್ಲೂ ಮುಂಬಯಿ ಸರಕಾರವು ಗೊತ್ತುಪಡಿಸಿದ ಹೊಸ ಅಭ್ಯಾಸಪತ್ರಿಕೆಯಲ್ಲಿಯಂತೆ ಪ್ರಕರಣಗಳನ್ನು ಕಲ್ಪಿಸಲಾಗಿದೆ. ಯಾವ ವಿಷಯವೂ ನುಸುಳಿ ಹೋಗದಂತೆ ಎಚ್ಚರಪಡಲಾಗಿದೆ. ಭಾರತದ ಗತಿಸಿಹೋದ ಇತಿಹಾಸದಲ್ಲಿ ದ್ವೇಷಾಸೂಯೆಗಳನ್ನು ಹುಟ್ಟಿಸಬಹುದಾದ ವಿಷಯಗಳು ಕಂಡುಬಂದಾಗ, ಐತಿಹಾಸಿಕ ಸತ್ಯತೆಯನ್ನು ಕಾಯ್ದುಕೊಂಡು, ಅವುಗಳ ನಿರೂಪಣೆಯಲ್ಲಿ ಅವನ್ನು ಉದಾತ್ತೀಕರಿಸುವ ಪ್ರಯತ್ನ ಮಾಡಲಾಗಿದೆ. ಜಾತಿಜಾತಿಗಳಲ್ಲಿ ಸೌಹಾರ್ದತೆ ಬೆಳೆಯುವಂತೆ ಶಕ್ಯವಿದ್ದಲ್ಲೆಲ್ಲ ಪ್ರಯತ್ನ ಪಡಲಾಗಿದೆ.

ಬಾಲಕ–ಬಾಲಕಿಯರ ವಯಸ್ಸು ಮತ್ತು ಬೌದ್ಧಿಕ ಪ್ರಗತಿಗಳನ್ನು ಅನುಲಕ್ಷಿಸಿ, ಪುಸ್ತಕದಲ್ಲಿಯ ಭಾಷೆಯಕಡೆಗೆ ಲಕ್ಷ್ಯಕೊಡಲಾಗಿದೆ. ಇತಿಹಾಸ ಶಿಕ್ಷಣದಲ್ಲಿ ಅವರಿಗೆ ವಿಷಯಜ್ಞಾನದೊಂದಿಗೆ ವಿಷಯಾಭಿರುಚಿಯು ಹುಟ್ಟಿ ಶಾಶ್ವತವಾಗಿ ಉಳಿಯಲೆಂದು, ಯೋಗ್ಯ ಮತ್ತು ಉಪಯುಕ್ತವಾದ ಚಿತ್ರಗಳನ್ನೂ ನಕಾಶೆಗಳನ್ನೂ ಕೊಡಲಾಗಿದೆ. ಅವರು ಪಡೆದ ಜ್ಞಾನದ ದೃಢೀಕರಣಕ್ಕಾಗಿ ಪ್ರತಿಯೊಂದು ಪ್ರಕರಣದ ಕೊನೆಯಲ್ಲಿ ಇತ್ತೀಚಿನ ನಮೂನೆಯ ಅಭ್ಯಸನಗಳಿವೆ. ಅವು ವಿದ್ಯಾರ್ಥಿಗಳ ಉತ್ಸಾಹವನ್ನು ಕೆರಳಿಸುವವೆಂದು ಆಶಿಸಲಾಗಿದೆ. ಆದರೆ ಅವು ಕೇವಲ ಮಾದರಿಗಾಗಿ ಕೊಡಲ್ಪಟ್ಟಿರುವವೆಂಬ ಸಂಗತಿಯನ್ನು ಶಿಕ್ಷಕರು ಮರೆಯಲಾಗದು. ಕೊನೆಯದಾಗಿ, ಶಿಕ್ಷಕರಿಗೆ ಉಪಯೋಗವಾಗಬಹುದೆಂಬ ಸದ್ಭಾವನೆಯಿಂದ, ಅವರಿಗೂ ಅಲ್ಲಲ್ಲಿ ಸಹಾಯ, ಸಲಹೆ ಸೂಚನೆಗಳನ್ನು ಕೊಡಲಾಗಿದೆ.

ಭಾರತೀಯ ಇತಿಹಾಸ ಪ್ರಕಾಶ, ೧ನೆಯ ಪುಸ್ತಕವನ್ನು ಓದಿದ ವಿದ್ಯಾರ್ಥಿಗಳಿಂದಲೂ ಶಿಕ್ಷಕರಿಂದಲೂ ಶಿಕ್ಷಣಾಧಿಕಾರಿಗಳಿಂದಲೂ ಸನ್ಮಿತ್ರರಿಂದಲೂ ನನಗೆ ದೊರೆತ ಅಪೂರ್ವ ಉತ್ತೇಜನದಿಂದ ಉತ್ಸಾಹಗೊಂಡವನಾಗಿ ಈ ಚಿಕ್ಕ ಪುಸ್ತಕವನ್ನು ರಚಿಸಿರುವೆನೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು,

ಪ್ರಸ್ತುತ ಪುಸ್ತಕದ ರಚನೆಯ ಕಾರ್ಯದಲ್ಲಿ ನನಗೆ ಅನೇಕ ಜನರಿಂದ ನಾನಾ ಬಗೆಯ ನೆರವು ದೊರೆತಿದೆ. ವಿಷಯಸಂಗ್ರಹದಲ್ಲಿ ಶ್ರೀ. ಎಂ. ಎಂ. ನಾಡಗೀರ, ಶ್ರೀ. ಪಿ. ಬಿ. ನರೇಗಲ್ಲ, ಚಿತ್ತಾಕರ್ಷಕ ಚಿತ್ರಗಳನ್ನು ತಯಾರಿಸಿ ಕೊಡುವಲ್ಲಿ ಶ್ರೀ. ಜಿ. ಕೆ. ಮೂರ್ತಿ, ಶ್ರೀ. ಎ. ಎನ್. ಪ್ಯಾಟಿ, ಪಡಿಯಚ್ಚು ಗಳನ್ನು ಮಾಡಿಕೊಡುವಲ್ಲಿ ಶ್ರೀ. ಬಿ. ಎನ್. ಬೆಂಗೇರಿ ಇವರೆಲ್ಲರೂ ವಿಶೇಷ ಆಸ್ಥೆಯಿಂದ ನೆರವಾಗಿರುವರು.

'ಭಾರತೀಯ ಇತಿಹಾಸ ಪ್ರಕಾಶ'ದ ಒಂದನೆಯ ಪುಸ್ತಕದಲ್ಲಿಯಂತೆ ಈ ಪುಸ್ತಕದಲ್ಲಿಯೂ ತುಂಬ ಆಸ್ಥೆವಹಿಸಿ ಶ್ರೀ. **ರಾ. ಸ್ವಾ. ಪಂಚಮುಖಿಯವರು** ವಿಮರ್ಶಾತ್ಮಕ ಮುನ್ನುಡಿಯನ್ನೂ **ಶ್ರೀ. ಕೆ. ಬಿ. ತೇರಗಾಂವಕರರು** ಹಾಗು ಪ್ರೊ. **ಶಿ. ಶಿ. ಬಸವನಾಳರು** ನನ್ನ ಹೊತ್ತಿಗೆಯನ್ನು ಆಳವಾಗಿ ಓದಿ ತಮ್ಮ ಸದಭಿಪ್ರಾಯಗಳನ್ನೂ ಕೊಟ್ಟು ಪುಸ್ತಕಕ್ಕೆ ಕಳೆಯನ್ನು ಕೊಟ್ಟಿದ್ದಾರೆ.

ಈ ಪುಸ್ತಕದ ಮುದ್ರಣ ಕಾರ್ಯದಲ್ಲಿ 'ಸರಸ್ವತೀ ಮುದ್ರಣಾಲಯ'ದ ಒಡೆಯರಾದ ಶ್ರಿ. ನಾ. ವೆ. ಕುರಡಿಯವರು ವಿಶೇಷ ಶ್ರಮವಹಿಸಿ ಪುಸ್ತಕವು ಸಕಾಲದಲ್ಲಿ ದೊರೆಯುವಂತೆ ಮಾಡಿ ನೆರವಾದರು.

ಮೇಲೆ ಹೇಳಿದ ಎಲ್ಲರಿಂದಲ್ಲದೆ ನನಗೆ ಈ ಕಾರ್ಯದಲ್ಲಿ ಅನೇಕ ಹಿರಿ ಕಿರಿಯ ಮಿತ್ರರಿಂದ ಹಲವಾರು ರೀತಿಯಲ್ಲಿ ಸಹಾಯ ಸಲ್ಲಿದೆ.

ಈ ಪ್ರಕಾರವಾಗಿ ನನಗೆ ಒಂದಿಲ್ಲೊಂದು ವಿಧವಾಗಿ ನೆರವಾದ ಮಹನೀಯರೆಲ್ಲರಿಗೂ ನನ್ನ ಅನಂತ ಕೃತಜ್ಞತೆಗಳು.

ಮುಂಬಯಿ ಸರಕಾರದ ವಿದ್ಯಾಖಾತೆಯು 'ಭಾರತೀಯ ಇತಿಹಾಸ ಪ್ರಕಾಶ'ದ ಒಂದನೆಯ ಪುಸ್ತಕವನ್ನು ಪ್ರಾಥಮಿಕ ಶಾಲೆಗಳಿಗೆ ಪಠ್ಯ ಪುಸ್ತಕ ವೆಂದು ಮಂಜೂರು ಮಾಡಿ ನನಗೆ ಇತಿಹಾಸಬರೆಹದ ಕಾರ್ಯಕ್ಕೆ ಸ್ಫೂರ್ತಿ ಕೊಟ್ಟಿದೆ. ಆದುದರಿಂದ ನಾನು ಅದಕ್ಕೆ ಅತ್ಯಂತ ಕೃತಜ್ಞನಾಗಿರುವೆನು.

ಸಾಧನಕೇರಿ, ಧಾರವಾಡ | **ರಂ. ಕೃ. ಲಕ್ಕುಂಡಿ.**

೭-೨-೧೯೫೧. | (ಆರ್. ಕೆ. ಲಕ್ಕುಂಡಿ)

# ಪರಿವಿಡಿ

# ದಯೆಯಿಟ್ಟು ತಿದ್ದಿಕೊಳ್ಳಿರಿ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧೦ | ಕೊನೆಯಸಾಲು | ದುಮುಸ್ಕಸವನ್ನು | ದಮುಸ್ಕಸವನ್ನು |
| ೧೨ | ೨೫ | ಸಹಾಸಗಳನ್ನು | ಸಾಹಸಗಳನ್ನು |
| ೫೧ | ೧೬ | ಸುಲ್ತಾನು | ಸುಲ್ತಾನನು |
| ೧೦೧ | ೬ | ಇಲ್ಲದೆ | ಅಲ್ಲದೆ |
| ೧೦೪ | ೮ | ನಾಗಿಂದಿರುಗಿದನು. | ನಾಗಿ ಹಿಂದಿರುಗಿದನು. |
| ೧೦೫ | ೧೨–೧೩ | ಮನಸಬಸದಾರರಿದ್ದರು. | ಮನಸಬದಾರರಿದ್ದರು. |
| ೧೦೬ | ೨೭ | ಅಯಿನ್–ಇ–ಅರ್ಬ್ರೀ | ಅಯಿನ್–ಇ–ಅಕ್ಬರೀ |
| ೧೧೭ | ೧೪ | ರಾಧಾನಿಯೇ | ರಾಜಧಾನಿಯೇ |
| ೧೩೬ | ೨೦ | ಕರೆಯುತ್ತಿರುರೆಂದು | ಕರೆಯುತ್ತಿರುವರೆಂದು |
| ೧೩೯ | ೨೧ | ಮಹಾವಿದ್ವಾಸಂರೂ | ಮಹಾವಿದ್ವಾಂಸರೂ |
| ,, | ೨೨ | ನಿರಂತರನಾದನು. | ನಿರತನಾದನು. |
| ೧೪೫ | ೧೬ | ಮರುದಿನ್ನ | ಮರು ದಿನ |
| ೧೫೮ | ೧೯ | ಆವನು | ಅವನು |
| ೧೬೬ | ೬ | ದುಶ್ಚ ಚಟಗಳಿರಲಿಲ್ಲ. | ದುಷ್ಟ ಚಟಗಳಿರಲಿಲ್ಲ. |
| ೧೭೦ | ೮ | ಸೈ ್ಯದ | ಸೈಯ್ಯದ |
| ೧೮೩ | ೧೩ | ಅನ್ಯ್ರತರಾವ | ಅನ್ಯತರಾವ |
| ,, | ೨೫ | ಹೋಳಕರು | ಹೋಳಕರರು |
| ೧೯೩ | ೧೧ | ನವು | ನಮ್ಮ |

# ೧ನೆಯ ಪ್ರಕರಣ

# ಇಸ್ಲಾಂಧರ್ಮದ ಹುಟ್ಟು ಹಾಗೂ ಬೆಳಿಗೆ

ಬಾಲಕರೇ, ಭಾರತ ದೇಶದಲ್ಲಿ ಹರ್ಷ ಮತ್ತು ಪುಲಿಕೇಶಿ ರಾಜ್ಯಭಾರ ಮಾಡುತ್ತಿದ್ದಾಗ, ಅರಬಸ್ತಾನದಲ್ಲಿ ಇಸ್ಲಾಂ ಎಂಬ ಹೊಸ ಧರ್ಮವೊಂದು ಉದಯಿಸಿ ರೂಪಗೊಂಡಿತು. ಅರಬರು ಈ ಧರ್ಮದೀಕ್ಷೆಯನ್ನು ತೆಗೆದುಕೊಂಡು, ಒಂದು ಶತಮಾನದೊಳಗಾಗಿಯೆ ಇದನ್ನು ಏಶಿಯಾ, ಯುರೋಪ ಮತ್ತು ಆಫ್ರಿಕಾಖಂಡಗಳ ಬಹುಭಾಗಗಳಲ್ಲಿ ಒತ್ತರದಿಂದ ಪ್ರಸಾರ ಮಾಡಿದರು. ಜೊತೆಗೆ, ತಮ್ಮದೇ ಆದ ದೊಡ್ಡ ಸಾಮ್ರಾಜ್ಯವನ್ನೂ ಕಟ್ಟಿಕೊಂಡರು! ತಮ್ಮ ಈ ಅದ್ಭುತ ಶೌರ್ಯ-ಸಾಹಸ-ಪರಾಕ್ರಮಗಳನ್ನು ಕಂಡು ಇಡಿಯ ಜಗತ್ತೇ




ಅರಬಸ್ತಾನ ಮತ್ತು ಭಾರತ — ಸಂಬಂಧಸೂಚಕ ನಕಾಶ

ಬೆರಳು ಕಚ್ಚುವಂತೆ ಮಾಡಿದರು!! ಆದುದರಿಂದ, ಇಷ್ಟು ಪ್ರತಿಷ್ಠೆಗೇರಿದ ಈ ಧರ್ಮವು ಹೇಗೆ ಹುಟ್ಟಿತು? ಹೇಗೆ ಬಲಿಯಿತು? ಹೇಗೆ ಬೆಳೆಯಿತು? ಇವೇ ಮುಂತಾದ ಸಂಗತಿಗಳನ್ನು ತಿಳಿದುಕೊಳ್ಳಬೇಕೆಂಬ ಕುತೂಹಲ ಉಂಟಾಗುವದು ಸಹಜ. ನಿಮ್ಮ ಈ ಕೆರಳಿದ ಕುತೂಹಲದ ತೃಪ್ತಿಗಾಗಿ, ಮೇಲೆ ಕಾಣಿಸಿದ ಸಂಗತಿಗಳನ್ನು ತುಸುಮಟ್ಟಿಗೆ ಈ ಪ್ರಕರಣದಲ್ಲಿ ವಿವರಿಸಲಾಗಿದೆ.

### ೧. ಹಿನ್ನೆಲೆ:— ಪ್ರಾಚೀನ ಅರಬಸ್ತಾನ.

ಅರಬಸ್ತಾನವು ವಿಶಾಲ ದೇಶವಾದರೂ ಅದು ಮರುಭೂಮಿಯಿಂದ ತುಂಬಿದ ಬೆಂಗಾಡು ಸೀಮೆ. ಅದು ಜಗತ್ತಿನ ಅತಿ ಉಷ್ಣ ಮತ್ತು ಶುಷ್ಕ ದೇಶಗಳಲ್ಲೊಂದು. ಅಲ್ಲಿ ತೀರ ತುಸು ಮಳೆ. ಖಜ್ಜೂರ, ಉತ್ರತ್ತಿ ಮತ್ತು ಇತರ ಕೆಲವು ಜಾತಿಯ ಹಣ್ಣುಹಂಪಲುಗಳೆ ಅಲ್ಲಿಯ ಮುಖ್ಯ ಬೆಳೆಗಳಾಗಿದ್ದವು. ಮಧ್ಯದ ತಪ್ಪಲುಪ್ರದೇಶದಲ್ಲಿ ಮಾತ್ರ, ಅಲ್ಲಲ್ಲಿ ಫಲವತ್ತಾದ ತುಸು ಭೂಮಿ. ಅರಬಸ್ತಾನದಲ್ಲಿ ಒಕ್ಕಲುತನ ಕಷ್ಟಸಾಧ್ಯ. ಅಂತೆಯೆ ಅಂದಿನ ಅರಬರು ಬಹುಮಟ್ಟಿಗೆ ಪಶುಪಾಲಕರು; ಕುರಿಗಾಹಿಗಳು. ಒಂಟೆಯು ಅವರಿಗೆ ಬಹು ಉಪಯುಕ್ತ ಪ್ರಾಣಿ.



ಪ್ರಾಚೀನ ಅರಬರ ಜೀವನದ ಒಂದು ದೃಶ್ಯ.

**ಜನಜೀವನ:**— ಆ ಕಾಲದ ಅರಬರು ಧನಿಕರಲ್ಲ. ಸಾಮಾನ್ಯವಾಗಿ, ಸಂಸ್ಕೃತಿ (ನಾಗರಿಕತೆ) ಯಲ್ಲಿಯೂ ಅವರಲ್ಲಿ ಹೆಚ್ಚಿನ ಪ್ರಗತಿಯಿದ್ದಂತೆ ಕಾಣುವ

ದಿಲ್ಲ. ಗಾಢ ಅಜ್ಞಾನ ಮತ್ತು ಅನೇಕ ಮೂಢಭಾವನೆಗಳು ಅವರಲ್ಲಿ ಬೇರೂರಿದ್ದವು. ಅಸಂಖ್ಯ ದುರಾಚಾರಗಳೂ ಇದ್ದವಂತೆ. ಅವರಲ್ಲಿ ಎಷ್ಟೋ ಬಣಗಳೂ ಅವುಗಳ ನಡುವೆ ಮೇಲಿಂದ ಮೇಲೆ ಉಗ್ರ ಕಾದಾಟಗಳೂ ಕಣ್ಣಿಗೆ ಬೀಳುತ್ತಿದ್ದವು. ಮುಖ್ಯವಾಗಿ, ಕಳವು, ಮದ್ಯಪಾನ, ವ್ಯಭಿಚಾರ, ಜೂಜಾಟ ಇವು ಅಂದಿನ ಅರಬರಲ್ಲಿ ಸಾರ್ವತ್ರಿಕವಾಗಿ ತೋರಿಬರುತ್ತಿದ್ದವು. ಕೊಲೆಗೆ ತಕ್ಕ ಪ್ರತಿಕಾರವನ್ನು ಅವರು ಎಂದಿಗೂ ಮಾಡದೆ ಬಿಡುತ್ತಿದ್ದಿಲ್ಲ.

ಆ ಕಾಲದ ಅರಬರು ಮೂರ್ತಿ-ಪೂಜಕರು. ಮಕ್ಕಾಪಟ್ಟಣ[೧][illegible] 'ಕಾಬಾ'[೨] ಎಂಬ ದೇವಾಲಯವೊಂದರ[illegible] ೩[illegible] ಮೂರ್ತಿಗ[illegible]ತೆ! ಅವರು ಗ್ರಹಗಳನ್ನೂ ನಕ್ಷತ್ರಗಳನ್ನೂ ಪೂಜಿಸುತ್ತಿದ್ದರೆಂದು ಕೆಲವರ [illegible].

**ಭಾರತದೊಂದಿಗೆ ಅರಬಸ್ತಾನದ ಸಂಬಂಧ: ಜಲಮಾರ್ಗವಾಗಿ ವ್ಯಾಪಾರ:** ಅಂದಿನ ಅರಬರು ವ್ಯಾಪಾರಮಾಡುವವರಲ್ಲಿ ಜಾಣರೆಂದೂ ಸಾಹಸಿಗಳೆಂದೂ ಹೆಸರಾಗಿದ್ದರು. ಇಸ್ಲಾಂ ಧರ್ಮವು ಉದಯಿಸುವ ಮೊದಲೇ, ಅವರು ಸಮುದ್ರಮಾರ್ಗವಾಗಿ ಹಡಗುಗಳಲ್ಲಿ ಭಾರತದ ಪಶ್ಚಿಮ ಕರಾವಳಿಗೆ ಬಂದು ಸರಕುಗಳನ್ನು ಕೊಳ್ಳುತ್ತಿದ್ದರು. ಬಳಿಕ, ಅವುಗಳನ್ನು ಯುರೋಪ, ಆಫ್ರಿಕಾದೇಶಗಳಿಗೆ ಒಯ್ದು ಮಾರುತ್ತಿದ್ದರು. ತ್ರಾವಣಕೋರದ ಜನರೊಂದಿಗೂ ಇವರ ಶಾಂತ-ಸಂಪರ್ಕವಿತ್ತು.[೩] ಈ ರೀತಿಯಾಗಿ ಪಶ್ಚಿಮ ಕರಾವಳಿಯ ಭಾರತೀಯರೊಂದಿಗೆ ಅರಬರ ಸಂಪರ್ಕವು ಪ್ರಾಚೀನ ಕಾಲದಿಂದಲೂ ಸಾಗಿಬಂದಿರುವದು.

## ೨. ಇಸ್ಲಾಂಧರ್ಮ[೪] ಸಂಸ್ಥಾಪಕರಾದ ಹಜರತ[೫] ಮುಹಮ್ಮದ ಪೈಗಂಬರರು :

---

೧. ಇದು ಕೆಂಪುಸಮುದ್ರದಿಂದ ಸುಮಾರು ೪೦ ಮೈಲು ಒಳನಾಡಿನಲ್ಲಿರುವದು. (ಮುಸಲ್ಮಾನರ ಯಾತ್ರಾಸ್ಥಳ.)

೨. ಇದೊಂದು ಮಕ್ಕಾದಲ್ಲಿಯ ಚಚ್ಚೌಕ ಕಟ್ಟಡ.

೩. ಅಷ್ಟೇ ಏಕೆ? ಆ ಕಾಲದಲ್ಲಿ ದಕ್ಷಿಣ-ಚೀನದ ಕಂತಾನ ಪಟ್ಟಣದ ಸಮೀಪದಲ್ಲಿ ಅರಬರ ವಸಾಹತು (ನೆಲಸುನಾಡು) ಇದ್ದಿತೆಂದು ತಿಳಿದುಬಂದಿದೆ.

೪. ಇದು ಮುಸಲ್ಮಾನರ ಧರ್ಮ. 'ಇಸ್ಲಾಂ' ಎಂದರೆ 'ಶಾಂತಿ.' ಶಾಂತಿಯು ಈ ಧರ್ಮದ ಸಾರ (ತಿರುಳು). ಇದು ಮಾನವನ ಸ್ವಾಭಾವಿಕ ಧರ್ಮವೆಂದೂ ಮನುಷ್ಯೋತ್ಕರ್ಷಕ ಧರ್ಮವೆಂದೂ ಹೇಳಲಾಗುತ್ತದೆ. ಅಲ್ಲದೆ, ಜಗತ್ತಿನ ಮಹಾಧರ್ಮಗಳಲ್ಲಿ ಕೊನೆಯದೆಂದು ಗಣಿಸಲ್ಪಟ್ಟಿದೆ.

೫. ಇದೊಂದು ದೊಡ್ಡ ಜನರಿಗೆ ಗೌರವಾರ್ಥವಾಗಿ (ಸಾಮಾನ್ಯವಾಗಿ ಅವರ ಹೆಸರಿನ ಹಿಂದೆ) ಉಪಯೋಗಿಸುವ ಶಬ್ದ.

## ಮುಹಮ್ಮದ ಪೈಗಂಬರರ ಜೀವನ ಮತ್ತು ತತ್ತ್ವಬೋಧೆ.

ಅರಬಸ್ತಾನದಲ್ಲಿ ಜನ-ಜೀವನವು ಮೇಲೆ ವಿವರಿಸಿದಂತಿದ್ದಾಗ, ಅಲ್ಲಿಯ ಮಕ್ಕಾಪಟ್ಟಣದಲ್ಲಿ ಹಜರತ ಮುಹಮ್ಮದ ಪೈಗಂಬರರು ಕ್ರಿ. ಶ. ೫೭೦ ರಲ್ಲಿ ಜನ್ಮ ತಾಳಿದರು. ಅವರದು ಕುರೇಶ (ಕುರೈಶ) ಮನೆತನವು. ಈ ಮನೆತನದವರೇ ಕಾಬಾ ಮಂದಿರದ ಮುಖ್ಯ ಪೂಜಾರಿಗಳಾಗಿದ್ದರು. ಹಜರತ ಮುಹಮ್ಮದರ ತಾಯಿ, ಹಜರತ ಬೀಬಿ ಅಮೀನಾ; ತಂದೆ, ಹಜರತ ಅಬ್ದುಲ್ಲಾ. ಬಡವರಾದರೂ ಇವರು ಸುಶೀಲ ಸತಿ-ಪತಿಗಳು. ಹಜರತ ಮುಹಮ್ಮದರು ಜನಿಸುವ ಮೊದಲೇ, ಅವರ ತಂದೆ ತೀರಿಕೊಂಡರು. ಬಾಲ್ಯದಲ್ಲಿಯೇ ಅವರ ತಾಯಿ ಕಾಲವಾದರು. ಅಂದಿನಿಂದ ಅವರನ್ನು ಜೋಪಾನ ಮಾಡುತ್ತ ಬಂದಿದ್ದ ಅವರ ಅಜ್ಜನೂ ಮುಂದೆರಡು ವರುಷಗಳಲ್ಲಿ ಕಾಲಾಧೀನನಾದನು. ಆಗಿನಿಂದ ಹಜರತ ಮುಹಮ್ಮದರು, 'ಹಜರತ ಅಬುತಾಲಿಬ' ರೆಂಬ ತಮ್ಮ ಚಿಗಪ್ಪನ ಆಶ್ರಯದಲ್ಲಿ ಬೆಳೆಯಬೇಕಾಯಿತು.

ದೈವಲೀಲೆಯನ್ನು ಕಂಡವರಾರು! ಹಜರತ ಮುಹಮ್ಮದರು, ಆ ಕಾಲದ ವಾಡಿಕೆಯಂತೆ ಬಾಲ್ಯವನ್ನು ಕುರಿ ಕಾಯುವದರಲ್ಲಿ ಕಳೆದರು. ಆ ಸಮಯದಲ್ಲಿ ಅವರು ಮಕ್ಕಾ ಪಟ್ಟಣದ ಸಮೀಪದಲ್ಲಿಯ 'ಹಿರಾ' ಬೆಟ್ಟದ ಮೇಲೂ ಆಗಾಗ ಏಕಾಂತದಲ್ಲಿ ಕಾಲ ಕಳೆಯುತ್ತಿದ್ದರು. ಪ್ರಾಯದವರಾದ ಕೂಡಲೆ, ತಮ್ಮ ಮನೆತನದ ರೂಢಿಯಂತೆ ವ್ಯಾಪಾರದಲ್ಲಿ ತೊಡಗಿದರು. **ಖುದೇಜಾ ಬೀಬಿ** ಎಂಬ ಶ್ರೀಮಂತ ವಿಧವೆಯೊಬ್ಬಳು ಇವರಿಗೆ ತನ್ನ ಸರಕುಗಳನ್ನು ಕೊಟ್ಟು ವ್ಯಾಪಾರಕ್ಕಾಗಿ ಸಿರಿಯಾ ದೇಶಕ್ಕೆ ಕಳುಹಿದಳು. ಇದರಲ್ಲಿ ಅವರು ಆಕೆಗೆ ವಿಶೇಷ ಲಾಭವನ್ನು ತಂದುಕೊಟ್ಟರು. ಇದಕ್ಕಾಗಿಯೂ ಹಾಗೂ ಅವರಲ್ಲಿಯ ಸರಳತೆ, ಪ್ರಾಮಾಣಿಕತೆಗಳಿಗಾಗಿಯೂ ಆಕೆಯು ಹಜರತ ಮುಹಮ್ಮದರನ್ನು ಮೆಚ್ಚಿದಳು. ಅವರನ್ನು ಮದುವೆಯಾಗಲೂ ಬಯಸಿದಳು! ಅವಳು ವಿಧವೆ. ಅಷ್ಟೇ ಅಲ್ಲ; ವಯಸ್ಸಿನಲ್ಲಿ ಹ. ಮುಹಮ್ಮದರಿಗಿಂತ ೧೫ ವರುಷ ಹಿರಿಯಳು! ಆದರೇನು? ಸುಶೀಲೆ, ಸುಸ್ವಭಾವದಾಕೆ, ಸಾಧ್ವಿ. ಹ. ಮುಹಮ್ಮದರು ಒಪ್ಪಿಗೆಯಿತ್ತರು. ಅವರೀರ್ವರ ಮದುವೆಯಾಯಿತು.[೧] ಸಂಸಾರವು ಸುಖಮಯವಾಗಿ ಸಾಗಿತು. ಆದರೆ ಹ. ಮುಹಮ್ಮದರು ಬಾಲ್ಯ

೧. ಆಗ ಮುಹಮ್ಮದ ಪೈಗಂಬರರು ೨೫ ವರುಷ ವಯಸ್ಸಿನವರಿದ್ದರು.

ದಿಂದಲೂ ಗಂಭೀರ ಸ್ವಭಾವದವರು, ಆಲೋಚನಾಪರರು, ಏಕಾಂತವಾಸ ಪ್ರಿಯರು. ಯಾವಾಗಲೂ ಈಶ್ವರ ಚಿಂತನೆಯಲ್ಲಿ ತೊಡಗಿರುವ ಚಿತ್ತ ಅವರದು !

ಅರಬರಲ್ಲಿಯ ಅಜ್ಞಾನ, ಮೂಢಭಾವನೆ, ಮೂರ್ತಿಪೂಜೆ, ದುರ್ವಿಚಾರ, ದುರಾಚಾರಗಳನ್ನು ಬಾಲ್ಯದಿಂದಲೂ ನೋಡಿ ನೋಡಿ ಹ. ಮುಹಮ್ಮದರ ಮನಸ್ಸು ಕಳವಳಗೊಂಡಿತ್ತು. ವ್ಯಾಪಾರವೃತ್ತಿಯಲ್ಲಿದ್ದಾಗ, ಅವರಿಗೆ ಯೆಹೂದೀ ಮತ್ತು ಕ್ರಿಸ್ತೀ ಜನರ ಸಂಪರ್ಕದಿಂದ ಆ ಧರ್ಮಗಳ ಪರಿಚಯವೂ ತುಸುಮಟ್ಟಿಗೆ ಆಯಿತು. ಅರಬರಿಗೆ ನಿಜವಾದ ಧರ್ಮವನ್ನು ಉಪದೇಶಿಸಿ ಅವರು ತಮ್ಮ ಒಳಜಗಳಗಳನ್ನು ಬಿಟ್ಟು ಒಟ್ಟುಗೂಡುವಂತೆ ಮಾಡುವದು ಹ. ಮುಹಮ್ಮದರಿಗೆ ತಮ್ಮ ಪ್ರಥಮ ಕರ್ತವ್ಯವೆನಿಸಿತು. ಇದರಿಂದ ಅರಬಸ್ತಾನವು ಒಂದು ಉಜ್ವಲ ಮತ್ತು ಪ್ರಭಾವಶಾಲಿಯಾದ ರಾಷ್ಟ್ರವಾಗುವದೆಂದೂ ಅವರಲ್ಲಿ ಆತ್ಮವಿಶ್ವಾಸವಿತ್ತು.

ಈ ಬಗೆಯ ಮನಸ್ಸಿನ ಪರಿಸ್ಥಿತಿಯಲ್ಲಿದ್ದ ಹ. ಮುಹಮ್ಮದರಿಗೆ ಅವರ ೪೦ ನೆಯ ವಯಸ್ಸಿನಲ್ಲಿ ನಿಜ ಧರ್ಮ ಪ್ರಸಾರದ ಬಗೆಗೆ ಈಶ್ವರನಿಂದ ಅಪ್ಪಣೆ ದೊರೆಯಿತು ! ಒಮ್ಮೆ ಹಿರಾಬೆಟ್ಟದ ಮೇಲೆ ಗುಹೆಯಲ್ಲಿ ಧ್ಯಾನಮಗ್ನರಾಗಿದ್ದಾಗ ಅವರಿಗೆ ದಿವ್ಯಾಕೃತಿಯೊಂದು ಕಾಣಿಸಿಕೊಂಡು ಕೆಳಗಿನಂತೆ ದೇವವಾಣಿಯನ್ನು ನುಡಿಯಿತು: "ಎಲೈ ಮುಹಮ್ಮದನೇ, ಈಶ್ವರನ ನಿಜವಾದ ಧರ್ಮವನ್ನು ಜನರಲ್ಲಿ ಪ್ರಸಾರಮಾಡಲಿಕ್ಕೆ ನಿನ್ನನ್ನು ನಿಯೋಜಿಸಲಾಗಿದೆ. ನೀನು ಅಲ್ಲಾ(ಹ) ನ (ಈಶ್ವರನ) ರಸೂಲನು (ಪೈಗಂಬರನು[೧] ಅಥವಾ ದೇವದೂತನು)." ತಟ್ಟನೆ ಆ ಆಕೃತಿಯು ಅಲ್ಲಿಂದಲ್ಲಿಯೆ ಮಾಯವಾಯಿತು ! ಸಂತೋಷೋತ್ಸಾಹಗಳಿಂದ ಕೂಡಿದ ಹ. ಮುಹಮ್ಮದ ಪೈಗಂಬರರು ಕೂಡಲೆ ಮನೆಗೆ ಬಂದು ತಮ್ಮ ಧರ್ಮಪತ್ನಿಗೆ ಎಲ್ಲ ಸುದ್ದಿಯನ್ನು ಅರುಹಿದರು. ಆ ಸಾಧ್ವಿಯೂ ಸಂತೋಷ ಭರಿತಳಾದಳು. ಪತಿಯನ್ನು ಮತ್ತೂ ಪ್ರೋತ್ಸಾಹಿಸಿದಳು. ಮತ್ತು ಪೈಗಂಬರರಿಂದ ಅವರ ಹೊಸ ಧರ್ಮದ ದೀಕ್ಷೆಯನ್ನು ಪಡೆದು, ತಾನೇ ಅವರ ಪ್ರಥಮ ಶಿಷ್ಯೆಯಾದಳು. ಬಳಿಕ, ಪೈಗಂಬರರ ಪ್ರಾಮಾಣಿಕತನವನ್ನು ಮೆಚ್ಚಿದ ಕೆಲವು ಅರಬ ಮುಂದಾಳುಗಳೂ ಅವರಿಂದ ಈ ಹೊಸ ಧರ್ಮದ ದೀಕ್ಷೆಯನ್ನು ಹೊಂದಿ ಅವರ ಪ್ರಿಯ ಶಿಷ್ಯರಾದರು. ಇದುವೆ, ಇಂದಿನ ಇಸ್ಲಾಂಧರ್ಮ. ಇದರ ಅನುಯಾಯಿಗಳೇ ಇಂದಿನ ಮುಸಲ್ಮಾನರು.

---

೧. ಈಶ್ವರನಿಂದ ಧರ್ಮೋಪದೇಶಮಾಡಲಿಕ್ಕೆ ಯೋಜಿಸಲ್ಪಟ್ಟ ಮನುಷ್ಯ.

ಈ ಧರ್ಮದ ಮೇರೆಗೆ—ಈಶ್ವರನು ಒಬ್ಬನೇ ಇರುವನು. ಅವನು ಸರ್ವಜ್ಞ, ಸರ್ವಶಕ್ತ, ನಿರಾಕಾರ. ಅವನ ಹೊರತಾಗಿ ಬೇರೆ ದೇವರಿಲ್ಲ. ಅವನೊಬ್ಬನೇ ಪೂಜೆಗೂ ಪ್ರಾರ್ಥನೆಗೂ ಯೋಗ್ಯನು. ಅನ್ಯದೇವರಿಗೆ ತಲೆಬಾಗಬಾರದು. ಮೂರ್ತಿಪೂಜೆ ಮಾಡಬಾರದು. ಮೂರ್ತಿಪೂಜಕರು ಮುಸಲ್ಮಾನರೆನಿಸಲಾರರು. ಅವರು ಕಾಫಿರರು (ನಾಸ್ತಿಕರು). ಅಲ್ಲಾ (ಹ) ನಲ್ಲಿ ಮತ್ತು ಅವನ ರಸೂಲನಲ್ಲಿ ವಿಶ್ವಾಸವಿಡುವವರೆಲ್ಲರೂ ಮುಸಲ್ಮಾನರು. ಅಲ್ಲಾ (ಹ) ನ ದೃಷ್ಟಿಯಲ್ಲಿ ಅವರೆಲ್ಲರೂ ಸರಿಸಮಾನರು. ಅವರಲ್ಲಿ ಮೇಲು ಕೀಳೆಂಬ ಭಾವನೆ ಇರಕೂಡದು.

**ಕುರಾನ** ಇದು ಮುಸಲ್ಮಾನರ ಅರಬೀ ಭಾಷೆಯ ಪವಿತ್ರ ಧರ್ಮಗ್ರಂಥ. ಇದು ಈಶ್ವರ-ಪ್ರೇರಣೆಯಿಂದ ರಚಿತವಾದುದೆಂದು ಅವರ ನಂಬಿಕೆ. ಕುರಾನದಲ್ಲಿ, ಮಾದಕಪದಾರ್ಥಗಳ[1] ಸೇವನೆ, ಜೂಜಾಟ ಮುಂತಾದವು ತ್ಯಾಜ್ಯವೆಂದು ಹೇಳಲಾಗಿದೆ. ವ್ಯಭಿಚಾರಕ್ಕೆ ಘೋರಶಿಕ್ಷೆ ವಿಧಿಸಲಾಗಿದೆ. ಒಬ್ಬ ಗಂಡಸಿಗೆ ನಾಲ್ವರಿಗಿಂತ ಹೆಚ್ಚು ಹೆಂಡಿರಿರಕೂಡದೆಂದು ನಿರ್ಬಂಧ ಹಾಕಲಾಗಿದೆ. ಇವೇ ಮುಂತಾದ ಮತ್ತೆಷ್ಟೋ ಒಳ್ಳೆಯ ಸಂಗತಿಗಳ[2] ಉಲ್ಲೇಖಗಳು ಇವರಲ್ಲಿ ಕಂಡುಬರುವವು. ಈ ಗ್ರಂಥವು ಇಸ್ಲಾಂಧರ್ಮದ ಎಲ್ಲ ಪಾರಮಾರ್ಥಿಕ, ನೈತಿಕ ಮತ್ತು ಸಾಮಾಜಿಕ ಕಟ್ಟಳೆಗಳ ತಳಹದಿ (ಆಧಾರ) ಯಾಗಿದೆ.

ಮೊಹರಂ, ರಜ್ಜಬ್, ಜಿಲ್ಹೇಜ್ (ಜುಲ್ಹಾಜ್) ಇವು ಮುಸಲ್ಮಾನರಿಗೆ ಪವಿತ್ರವಾದ ತಿಂಗಳುಗಳು. ರಮಜಾನವು ಅವರಿಗೆ ಉಪವಾಸದ ತಿಂಗಳು.[3] ಕುರಾನದ ಮೇರೆಗೆ ಉಪವಾಸವೆಂದರೆ ಆಹಾರವರ್ಜನೆ ಅಷ್ಟೇ ಅಲ್ಲ, ಯಾವ ವಿಧದ ಪಾಪವನ್ನೂ ಮಾಡದಿರುವದು.

**ಮುಸಲ್ಮಾನರ ತ್ರಿವಿಧ ವಿಶ್ವಾಸಗಳು** :— ೧. ಈಶ್ವರನಲ್ಲಿ ವಿಶ್ವಾಸ, ೨. ಈಶ್ವರಪ್ರೇರಿತ ಧರ್ಮದಲ್ಲಿ ವಿಶ್ವಾಸ, ೩. ಮರಣಾನಂತರದ ಜೀವನದಲ್ಲಿ ವಿಶ್ವಾಸ.

**ಮುಸಲ್ಮಾನರ ಮುಖ್ಯ ಕರ್ತವ್ಯಗಳು** :— ೧. ಶುಚಿಯಾಗಿರುವದು. ೨ ನಿತ್ಯ ಈಶ್ವರೋಪಾಸನೆ (ಪ್ರತಿದಿನ ಐದು ಸಲ 'ನಮಾಜ'[4] ಮಾಡುವದು).

---

೧. ಸರಾಯಿ, ಅಫು, ಗಾಂಜಿ ಇತ್ಯಾದಿಗಳ

೨. ಉದಾ : ತಂದೆತಾಯಿಗಳಿಗೆ ವಿಧೇಯರಾಗಿರಬೇಕು, ವರಿಷ್ಠಾಧಿಕಾರಿಗಳನ್ನು ಗೌರವಿಸಬೇಕು ಮುಂತಾದವುಗಳ.

೩. ಈ ತಿಂಗಳಲ್ಲಿ ಅವರು ಪ್ರತಿದಿನ ಅರುಣೋದಯದಿಂದ ಸೂರ್ಯಾಸ್ತದವರೆಗೆ ತಿನಿಸು ತೀರ್ಥಗಳನ್ನು ಸೇವಿಸಕೂಡದು.

೪. ಪ್ರಾ.ರನೆ.

೩. ದಾನಧರ್ಮ ಮಾಡುವದು (ಭೂತದಯೆ). ೪. ರಮಜಾನ ತಿಂಗಳಲ್ಲಿ ಉಪ ವಾಸ ಪಾಲಿಸುವದು. ೫. ಮಕ್ಕಾಯಾತ್ರೆ ಮಾಡುವದು.

ದಾನಶೀಲತೆ (ಭೂತದಯೆ), ಪ್ರಾರ್ಥನೆ, ಉಪವಾಸ ಮತ್ತು ಮಕ್ಕಾ ಯಾತ್ರೆ ಇವು ಇಸ್ಲಾಂ ಧರ್ಮಾಚರಣೆಯ ನಾಲ್ಕು ಆಧಾರಸ್ತಂಭಗಳು. ಮಕ್ಕಾ ಯಾತ್ರೆಯು ಪಾರಮಾರ್ಥಿಕ ಪ್ರಗತಿಯ ಕೊನೆಯ ಮಜಲು.

ಇವೇ ಮುಂತಾದ ತತ್ತ್ವಗಳನ್ನು ಮುಹಮ್ಮದ ಪೈಗಂಬರರು ಮುಂದೆ ಬಹಿರಂಗವಾಗಿ ಬೋಧಿಸತೊಡಗಿದರು. ಆದರೆ ಅವರ ಈ ಧರ್ಮ ಬೋಧನೆ ಮೂರ್ತಿ-ಪೂಜಕರಾದ ಅರಬರಿಗೆ ಸರಿಬೀಳಲಿಲ್ಲ. ಪೈಗಂಬರರಿಗೂ ಅವರ ಅನುಯಾಯಿಗಳಿಗೂ ಮಕ್ಕಾದ ಜನರು ಪರಿಪರಿಯ ಕ್ರೂರ ಪೀಡೆ ಕೊಟ್ಟರು; ಅವರನ್ನು ಅಪಮಾನಗೊಳಿಸಿದರು. ಆದರೇನು? ಪೈಗಂಬರರು ಮಹಾತ್ಮರು, ಕ್ಷಮಾಗುಣಿಗಳು, ಅತ್ಯಂತ ಸಹನಶೀಲರು. ಅವರು ಪೀಡನೆ ಗಳನ್ನು ಸಹಿಸಿದರೇ ಹೊರತು ಎಂದೂ ರೊಚ್ಚಿಗೇಳಲಿಲ್ಲ. ಇಷ್ಟರಲ್ಲಿ ಮದೀನಾ[೧] ಪಟ್ಟಣದ ಕೆಲವರು ಪೈಗಂಬರರಲ್ಲಿಗೆ ಬಂದು ಅವರಿಂದ ಧರ್ಮ-ದೀಕ್ಷೆ ಹೊಂದಿ ಹೋಗಿದ್ದರು. ಆಗಿನಿಂದ ಅಲ್ಲಿ ಇಸ್ಲಾಂ ಧರ್ಮವು ತನ್ನ ಪ್ರಭಾವವನ್ನು ಬೀರ ಹತ್ತಿತ್ತು. ಮಕ್ಕಾದಲ್ಲಿ ಪೈಗಂಬರರಿಗೂ ಅವರ ಅನುಯಾಯಿಗಳಿಗೂ ಒದಗಿದ ಸಂಕಟಗಳನ್ನು ಕೇಳಿ ಅವರ ಮನಸ್ಸು ಕರಗಿತು. ಅವರಿಗೆ ಮದೀನಾಕ್ಕೆ ಬರಲು ಕೇಳಿಕೊಂಡರು. ಪೈಗಂಬರರು ಮೊದಲಿಗೆ ತಮ್ಮ ಅನುಯಾಯಿ ಗಳನ್ನು ಅಲ್ಲಿಗೆ ಕಳಿಸಿದರು. ಕೊನೆಗೆ ತಮ್ಮ ಜೀವದಮೇಲೆ ಬಂದ ಗಂಡಾಂತರ ದಿಂದ ಪಾರಾಗಲು, ಈಶ್ವರನ ಅಪ್ಪಣೆಯಮೇರೆಗೆ ಗುಪ್ತವಾಗಿ ಮಕ್ಕಾಪಟ್ಟಣ ವನ್ನು ಬಿಟ್ಟು ಮದೀನಾ ಪಟ್ಟಣಕ್ಕೆ ಪ್ರಯಾಣ ಬೆಳೆಸಿದರು. ಕುತ್ತಿನಿಂದ ಪಾರಾಗಿ ಅಲ್ಲಿಗೆ ತಲುಪಿದರು. ಅವರು ಮಕ್ಕಾ ಪಟ್ಟಣವನ್ನು ಬಿಟ್ಟು ಹೊರಟುದು ಕ್ರಿ. ಶ. ೬೨೨, ಜುಲೈ ೧೫ ನೆಯ ದಿನಾಂಕದಲ್ಲಿ. ಆಗಿನಿಂದಲೆ ಮುಸಲ್ಮಾನರ 'ಹಿಜರಿ' ಶಕದ ಪ್ರಾರಂಭ. ಮದೀನಾದ ಜನರು ಪೈಗಂಬರ ರನ್ನು ಅತ್ಯಾದರದಿಂದ ಸ್ವಾಗತಿಸಿದರು. ಅಲ್ಲಿ ಅವರ ಅನುಯಾಯಿಗಳ ಸಂಖ್ಯೆಯು ಭರದಿಂದ ಬೆಳೆಯಿತು. ಅವರ ಕೀರ್ತಿ ಬೆಳಗಿತು. ಅನುಯಾಯಿ ಗಳೊಂದಿಗೆ ತಾವೂ ದುಡಿದು ಪೈಗಂಬರರು ಅಲ್ಲಿ ಒಂದು ಮಸೀದೆಯನ್ನು[೨]

೧. ಇದು ಮಕ್ಕಾದಿಂದ ೨೫೦ ಮೈಲು ದೂರದಲ್ಲಿರುವದು.
೨. 'ಮಸ್ಜಿದೆ ನಬವಿ' (ಮಶೀದ-ಉಲ್‌ನಬೀ.)

ಕಟ್ಟಿದರು! ಆದರೆ, ಮಕ್ಕಾದಲ್ಲಿಯ ಮೂರ್ತಿ-ಪೂಜಕರಿಗೆ ಮಾತ್ರ ಇದೆಲ್ಲ ಸಹನವಾಗಲಿಲ್ಲ. ಅವರು ಮೇಲಿಂದ ಮೇಲೆ ಮದೀನಾಪಟ್ಟಣಕ್ಕೆ ಮುತ್ತಿಗೆ ಹಾಕಿ, ಅಲ್ಲಿಯ ಮುಸಲ್ಮಾನರಿಗೆ ತೊಂದರೆ ಕೊಟ್ಟರು. ಕಾಳಗಗಳು ನಡೆದವು. ಕೊನೆಗೆ (ಕ್ರಿ. ಶ. ೬೨೯ ರಲ್ಲಿ) ಪೈಗಂಬರರು ೧೦ ಸಾವಿರ ಅನುಯಾಯಿಗಳಿಂದ ಸಮೇತರಾಗಿ ಮಕ್ಕಾದಮೇಲೆ ಸಾಗಿಹೋದರು. ಆಗ ಮಾತ್ರ ಮಕ್ಕಾ ನಿವಾಸಿಗಳು ಅಂಜಿದರು. ಪೈಗಂಬರರು ವೈರಿಗಳನ್ನು ಕ್ಷಮಿಸಿ ಮಕ್ಕಾಪಟ್ಟಣದಲ್ಲಿ ಮತ್ತೊಮ್ಮೆ ಪ್ರವೇಶಿಸಿದರು. ಅರಬರು ಪಶ್ಚಾತ್ತಾಪಹೊಂದಿ ಮುಸಲ್ಮಾನರಾದರು. ಇಡಿ ಅರಬಸ್ತಾನವು ಇಸ್ಲಾಂ ಧರ್ಮವನ್ನು ಸ್ವೀಕರಿಸಿತು. ಮುಂದೆ ಕ್ರಿ. ಶ. ೬೩೨ ರಲ್ಲಿ ಮುಹಮ್ಮದ ಪೈಗಂಬರರು ಪರಲೋಕವಾಸಿಗಳಾದರು. ಅವರಿಗೆ ಫಾತಿಮಾಬೀಬಿ ಎಂಬ ಮಗಳೂ, ಅಲಿ ಎಂಬ ಸಾಕು ಮಗನೂ ಇದ್ದರು.

ಮುಹಮ್ಮದ ಪೈಗಂಬರರ ಬಗೆಗೆ ಹಜರತ ಅಬುತಾಲಿಬರ ಹೇಳಿಕೆ: "ಪೈಗಂಬರರು ಸುಳ್ಳು ಹೇಳಿದುದನ್ನು ಇಲ್ಲವೆ ಹೀನಭಾಷೆ ನುಡಿದುದನ್ನು ಇಲ್ಲವೆ ಕೀಳುಜನರ ಸಹವಾಸಮಾಡಿದುದನ್ನು ನಾನು ಒಮ್ಮೆಯಾದರೂ ಕಂಡಿಲ್ಲ."

ಹಜರತ ಮುಹಮ್ಮದ ಪೈಗಂಬರರು ಜೀವನದಲ್ಲಿ ಆಚರಿಸಿದ ರೀತಿಯನ್ನು ತಿಳಿದುಕೊಂಡರೆ, ಇಸ್ಲಾಂ ಧರ್ಮದ ಎಲ್ಲ ವಿಷಯಗಳು ತಿಳಿದು ಬಂದಂತೆಯೆ ಸೈ.

**೩. ಖಲೀಫರು[೧]:—**

ಹಜರತ ಮುಹಮ್ಮದ ಪೈಗಂಬರರ ಅನಂತರ ಇಸ್ಲಾಂ ಮತದ ಮುಖ್ಯ ಧರ್ಮಗುರುಗಳು ಖಲೀಫರೆಂದು ಹೆಸರಾದರು. ಇವರು ಧರ್ಮ ಪ್ರಸಾರದೊಂದಿಗೆ ರಾಜ್ಯಭಾರವನ್ನೂ ಮುಂದುವರಿಸಿದರು. ಖಲೀಫರ ಆಳಿಕೆಯು ಕ್ರಿ. ಶ. ೧೨೫೮ ರಲ್ಲಿ ಸಮಾಪ್ತಿ ಹೊಂದಿತು. ಇವರಲ್ಲಿ ಬೇರೆ ಬೇರೆ ಮೂರು ವಂಶದವರು ಖಲೀಫರಾಗಿಹೋದರು: ೧. ಅರಬ ಖಲೀಫರು. (ಕ್ರಿ.ಶ. ೬೩೨-೬೬೧) ೨. ಉಮಯಿದ (ಉಮಯ್ಯಾ) ವಂಶದ ಖಲೀಫರು (ಕ್ರಿ. ಶ. ೬೬೧—೭೫೦) ೩. ಅಬ್ಬಾಸೀ (ಅಬ್ಬಾಸಿಯಾ) ವಂಶದ ಖಲೀಫರು (ಕ್ರಿ. ಶ. ೭೫೦—೧೨೫೮)

**೧. ಅರಬ ಖಲೀಫರು** (ಕ್ರಿ. ಶ. ೬೩೨—೬೬೧) :— ಇವರು ಪೈಗಂಬರರ ಅನಂತರ ಕೂಡಲೆ ಆಗಿಹೋದ ಖಲೀಫರು. ಇವರು ನಾಲ್ವರು.

೧. ಮುಹಮ್ಮದ ಪೈಗಂಬರರ ತರುವಾಯ ಅವರ ಪಟ್ಟದ ಮೇಲೆ ಕುಳಿತ ಅವರ ಅನುಯಾಯಿಗಳು.




ಖಲೀಫರ ಆಳಿಕೆಯಲ್ಲಿ ಮುಸಲ್ಮಾನ ಸಾಮ್ರಾಜ್ಯ — ಕ್ರಿ. ಶ. ೭೫೦ ರಲ್ಲಿ

ಹಜರತ ಅಬುಬಕರ, ಹಜರತ ಉಮರ, ಹಜರತ ಉಸ್ಮಾನ ಮತ್ತು ಹಜರತ ಅಲಿ (ಫಾತಿಮಾ ಬೀಬಿಯ ಗಂಡ). ಇವರೆಲ್ಲರೂ ಪೈಗಂಬರರ ಜೀವನಾವಧಿಯಲ್ಲಿಯೇ ಇಸ್ಲಾಂ ದೀಕ್ಷೆ ಪಡೆದವರು. ಅವರ ಪ್ರಿಯ ಶಿಷ್ಯರು ಮತ್ತು ಅತ್ಯಂತ ಧರ್ಮನಿಷ್ಠೆಯುಳ್ಳವರು. ಅರಬಸ್ತಾನದ ಜನರಿಂದಲೇ ಖಲೀಫರಾಗಿ

ಆರಿಸಲ್ಪಟ್ಟವರು. ಆದುದರಿಂದ ಆವರ ೩೦ ವರುಷಗಳ ಅವಧಿಯನ್ನು "ಪ್ರಜಾ ರಾಜ್ಯದ ಅವಧಿ" ಯೆಂದೆನ್ನಬಹುದು. ಅವರ ಸಮಯದಲ್ಲಿ ಧರ್ಮಪ್ರಸಾರವು ಬಹು ಭರದಿಂದ ಸಾಗಿತು. ಏಕೆಂದರೆ, ಹೊಸ ಧರ್ಮದಿಂದ ಹುರುಪುಗೊಂಡ ಅರಬರು ಜಗತ್ತಿನ ತುಂಬೆಲ್ಲ ಅದನ್ನು ಹಬ್ಬಿಸಲು ಅಪೂರ್ವ ಉತ್ಸಾಹಭರಿತರಾಗಿ ಸ್ವದೇಶದಿಂದ ಹೊರಬಿದ್ದರು. ಮುಸಲ್ಮಾನೇತರರ (ಕಾಫಿರರ) ದೇಶಗಳನ್ನು ಗೆದ್ದು, ಅಲ್ಲಿಯ ಜನರನ್ನು ಮುಸಲ್ಮಾನರನ್ನಾಗಿ ಮಾಡಿದರು.

ಸಿರಿಯಾ, ಇಜಿಪ್ತ ಮತ್ತು ಇರಾಣ ಇವು ಇವರು ಗೆದ್ದ ಮುಖ್ಯ ರಾಜ್ಯಗಳು. ಮೂರನೆಯ ಖಲೀಫರಾದ ಹಜರತ ಉಸ್ಮಾನರು ಪ್ರಚಂಡವಾದ ಹಡಗುಪಡೆಯನ್ನು ನಿರ್ಮಿಸಿ ಭೂಮಧ್ಯ ಸಮುದ್ರದ ಮೇಲೆಲ್ಲ ತಮ್ಮ ಪ್ರಭಾವ ಬೀರಿದರು.

ಮುಸಲ್ಮಾನರ ಒಳಜಗಳಗಳ ಮೂಲಕ, ನಾಲ್ಕನೆಯ ಖಲೀಫರಾದ ಹಜರತ ಅಲಿ ಅವರ ಕೊಲೆಯಾಯಿತು! ಇವರ ರಾಜಧಾನಿ ಮದೀನಾಪಟ್ಟಣ.



ದಮಸ್ಕಸದ ಮಹಾ ಮಸೀದೆ.

೨. **ಉಮಯಿದ ವಂಶದ ಖಲೀಫರು** (ಕ್ರಿ. ಶ. ೬೬೧–೭೫೦):— ಇವರು ೯೦ ವರುಷ ರಾಜ್ಯಭಾರ ಮಾಡಿದರು. ಸಿರಿವಂತಿಕೆಯ ಆಗರವೆಂದು ಹೆಸರಾಗಿದ್ದ ದಮಸ್ಕಸವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡರು.

ಅದರ ಸೌಂದರ್ಯವನ್ನು ಅತಿಶಯವಾಗಿ ಬೆಳೆಸಿದರು. ಇವರ ಆಳಿಕೆಯಲ್ಲಿ ಮುಸಲ್ಮಾನ ರಾಜ್ಯವು ಮತ್ತೂ ಭರದಿಂದ ಬೆಳೆದು ಅದು ಸಾಮ್ರಾಜ್ಯವೆನಿಸಿತು. (೯ ನೆಯ ಪುಟದಲ್ಲಿಯ ನಕಾಶೆಯನ್ನು ನೋಡಿರಿ). ಎಷ್ಟೋ ಶತಮಾನಗಳ ವರೆಗೆ ಸ್ಪೇನ ದೇಶವು ಇವರ ವಶದಲ್ಲಿ ಉಳಿದುದರಿಂದ ಅರಬಸ್ತಾನ, ಸಿರಿಯಾ ಮತ್ತು ಉತ್ತರ ಆಫ್ರಿಕೆಯ ಮುಸಲ್ಮಾನರು ಅಲ್ಲಿಗೆ ಹೋಗಿ ಒಕ್ಕಲಾಗಿ ನಿಂತರು. ಅಲ್ಲಿ ಇಸ್ಲಾಂ ಸಂಸ್ಕೃತಿಯು ಪ್ರಭಾವಶಾಲಿಯಾಯಿತು.

**೩. ಅಬ್ಬಾಸೀ ವಂಶದ ಖಲೀಫರು** (ಕ್ರಿ. ಶ. ೭೫೦–೧೨೫೮) :—



ಬಗದಾದ ಕೋಟೆಯ ಮಹಾದ್ವಾರ

ಈ ವಂಶದಲ್ಲಿ ಅಬುಲ್ ಅಬ್ಬಾಸನೆಂಬವನು ಮೊದಲನೆಯ ಖಲೀಫನು. ಅವನು ರಾಜಧಾನಿಯನ್ನು ಬಗದಾದಕ್ಕೆ ಸ್ಥಳಾಂತರಿಸಿದನು. ಇವರಲ್ಲಿ ‘ಅಲ್ ಮನಸೂರ,’ ‘ಹಾರೂನಅಲ್ ರಶೀದ’ ಮತ್ತು ‘ಮಾಮೂನ’ ರೆಂಬವರು ಸುಪ್ರಸಿದ್ಧ ಖಲೀಫರು. ಇವರ ಕಾಲಾವಧಿಯು ಮುಸಲ್ಮಾನರ ಇತಿಹಾಸದಲ್ಲಿ ‘ಸುವರ್ಣಯುಗ’ ವೆಂದು ಹೆಸರು ಪಡೆದಿದೆ. ಬಗದಾದ ಪಟ್ಟಣವು ವಿದ್ಯೆ ಮತ್ತು ಸಂಸ್ಕೃತಿಗಳ ಕೇಂದ್ರವಾಗಿ ಪರಿಣಮಿಸಿತು. ಇದರ ವೈಭವವನ್ನು ಅನೇಕರು ಮನವಾರೆ ಹೊಗಳಿರುವರು. ಬಗದಾದ ಮತ್ತು ಭಾರತಗಳ ಪರಸ್ಪರ ಸಂಪರ್ಕವು[1] ಆರಂಭವಾಯಿತು.

ಆದರೆ ೧೦ ನೆಯ ಶತಮಾನದಿಂದ ಈ ವಂಶದ ಖಲೀಫರ ಅವನತಿಯು ಪ್ರಾರಂಭವಾಯಿತು. ಅವರು ವಿಲಾಸಪ್ರಿಯರಾದರು. ಕೊನೆಕೊನೆಯ ಖಲೀಫರಂತೂ ಹೆಸರಿಗೆ ಮಾತ್ರ ಖಲೀಫರಾದರು. ಕಟ್ಟಕಡೆಗೆ, ಖಲೀಫರ ರಾಜ್ಯವು ಅವರ ಕೈಬಿಟ್ಟು ಹೋಯಿತು.

**೪. ಸಿಂಧ ಪ್ರಾಂತದಲ್ಲಿ ಅರಬರ ದಾಳಿ (ಕ್ರಿ. ಶ. ೭೧೧-೭೧೪) :—**

ಬಾಲಕರೇ, ೮ ನೆಯ ಶತಮಾನದ ಆರಂಭದಲ್ಲಿ ಮುಸಲ್ಮಾನರು ಅತ್ತ

---

೧. ರಾಯಭಾರಿಗಳ ಅದಲು ಬದಲು, ಪರಸ್ಪರರ ದೇಶಗಳಲ್ಲಿ ಪ್ರಯಾಣಿಕರ ಓಡಾಟ, ಭಾರತೀಯ ಗ್ರಂಥಗಳ (ಮುಖ್ಯವಾಗಿ ಗಣಿತ, ಖಗೋಲ ಶಾಸ್ತ್ರಗಳ) ಭಾಷಾಂತರ, ಬಗದಾದಕ್ಕೆ ಭಾರತೀಯ ವೈದ್ಯರ ಪ್ರಯಾಣ ಮುಂತಾಗಿ.

ಯುರೋಪದಲ್ಲಿ ಸ್ಪೇನ ದೇಶವನ್ನು ಗೆದ್ದು ಆಕ್ರಮಿಸಿದರಷ್ಟೆ. ಅದೇ ಸಮಯ ದಲ್ಲಿ ಅವರು, ಇತ್ತ ಭಾರತದಲ್ಲಿ ಸಿಂಧದೇಶವನ್ನು ಗೆದ್ದು ಆಕ್ರಮಿಸಿದರು.

**ದಾಳಿಯ ಪ್ರಸಂಗ**:— ಕ್ರಿ. ಶ. ೭೧೧ ರಲ್ಲಿ ಅರಬರ ಒಂದು ಹಡಗವು ಸಿಂಹಳ ದ್ವೀಪದಿಂದ ಹೊರಟು ಮಲಬಾರದ ದಂಡೆಗುಂಟ ಸಾಗುತ್ತ ಸ್ವದೇಶಕ್ಕೆ ಪಯಣ ಬೆಳೆಸಿತ್ತು. ಅದರಲ್ಲಿ ಸಿಂಹಳದ ಅರಸನು ದಮಸ್ಕಸದಲ್ಲಿಯ **ವಲೀದ**ನೆಂಬ ಖಲೀಫನಿಗೂ ಇರಾಕದಲ್ಲಿಯ **ಹಜ್ಜಾಜ**ನೆಂಬ ಅವನ ಪ್ರಾಂತಾಧಿಕಾರಿಗೂ ಕಳಿಸಿದ್ದ ಹೇರಳ ಕಾಣಿಕೆಗಳಿದ್ದವು. ಹಡಗವು ದಾರಿತಪ್ಪಿ ಸಿಂಧುನದಿಯ ಮುಖದಲ್ಲಿಯ ದೇವಲ ಬಂದರಕ್ಕೆ ತಲುಪಿತು. ಅಲ್ಲಿಯ ಜನರು ಅದನ್ನು ಸುಲಿದು ಅದರಲ್ಲಿಯ ಅರಬರನ್ನು ತಡೆಹಿಡಿದರು. ಹಜ್ಜಾಜನಿಗೆ ಇದು ತಿಳಿಯಿತು. ತನಗುಂಟಾದ ಹಾನಿಯನ್ನು ತುಂಬಿಕೊಡಬೇಕೆಂದು ಅವನು ಸಿಂಧದ ದಾಹರನೆಂಬ ರಾಜನನ್ನು ಕೇಳಿದನು. ಆದರೆ ದಾಹರನಿಗೆ ಸುಲಿಗೆಯ ಸುದ್ದಿಯೇ ಗೊತ್ತಿರಲಿಲ್ಲ! ಆದುದರಿಂದ ಸುಲಿಗೆಗಾರರು ತನ್ನವರಲ್ಲವೆಂದೂ ಹಾನಿಯನ್ನು ತುಂಬಿಕೊಡುವ ಹೊಣೆಗಾರಿಕೆ ತನ್ನದಲ್ಲವೆಂದೂ ಅವನು ಮಾರುತ್ತರ ಕೊಟ್ಟನು. ಇದರಿಂದ ಸಿಟ್ಟಿಗೆದ್ದ ಹಜ್ಜಾಜನು ಸಿಂಧದ ದಾಳಿಗಾಗಿ ತನ್ನ ಸೋದರಳಿಯನಾದ ಮುಹಮ್ಮದ ಬಿನ್ ಕಾಸಿಮನನ್ನು ದೊಡ್ಡ ಸೈನ್ಯದೊಡನೆ ಕಳುಹಿಸಿದನು. ಮುಹಮ್ಮದ ಕಾಸಿಮನು ೧೭ ವರುಷ ವಯಸ್ಸಿನ ತರುಣ! ಆದರೇನು? ದಾಳಿಯಲ್ಲಿ ಶೌರ್ಯ ಸಹಾಸಗಳನ್ನು ಚೆನ್ನಾಗಿ ಪ್ರಕಟಗೊಳಿಸಿದನು. ಶೂರ ಸೇನಾಪತಿಯೆನಿಸಿದನು.




ಮುಹಮ್ಮದ ಬಿನ್ ಕಾಸಿಮನು ಸಿಂಧದಲ್ಲಿ ಮಾಡಿದ ದಾಳಿ.
(ಕ್ರಿ. ಶ. ೭೧೧–೭೧೪)

**ದಾಳಿಯ ವಿವರಗಳು**:— ಕಾಸಿಮನು ದೇವಲದ ಮೇಲೆ ಹಲ್ಲೆಮಾಡಿ

ಅದನ್ನು ವಶಪಡಿಸಿಕೊಂಡನು. ದಾಹರನ ದಬ್ಬಾಳಿಕೆಯಿಂದ ಬೇಸತ್ತ ಜಾಟ ಕುಲದ ಕೆಲವು ಮುಖಂಡರು ಕಾಸಿಮನನ್ನು ಕೂಡಿಕೊಂಡರು! ಬಳಿಕ ಅವನು ಸಿಂಧು ನದಿಯ ಪಶ್ಚಿಮ ದಂಡೆಗುಂಟ ಮುನ್ನುಗ್ಗಿದನು. ಜಾಟರ ಸಹಾಯ ದಿಂದ ನದಿಯನ್ನು ದಾಟಿ, ಎದುರು ದಂಡೆಯ ಮೇಲಿದ್ದ ದಾಹರನ ಸೈನ್ಯದ ಮೇಲೆ ಒಮ್ಮೆಲೆ ಏರಿಹೋದನು. 'ರಾವ್ರೋರ'ದ ಒಳಿಯಲ್ಲಿ ನಿಕರದ ಕಾಳಗ ವಾಯಿತು. ದಾಹರನು ಧೈರ್ಯದಿಂದ ವೈರಿಯನ್ನು ಎದುರಿಸಿದನು. ಆದರೆ ಪರಾಕ್ರಮದಿಂದ ಕಾದುತ್ತಿರುವಾಗಲೆ ಅವನಿಗೆ ಬಾಣ ತಗಲಿ ಗಾಯ ವಾಯಿತು. ತುಸು ಹೊತ್ತಿನಲ್ಲಿಯೆ ಅವನು ಮರಣ ಹೊಂದಿದನು. ಅವನ ಸೈನ್ಯವು ಗಾಬರಿಗೊಂಡು ಚದರಿ ಹೋಯಿತು! ದಾಹರನ ಮರಣದ ಅನಂತರ, ಅವನ ರಾಣಿಯು ಕೋಟೆಯನ್ನು ಸಂರಕ್ಷಿಸಿಕೊಳ್ಳಲು ಸಾಹಸ ಮಾಡಿದರೂ ಅದು ಫಲಿಸಲಿಲ್ಲ. ಕೊನೆಗೆ ನಿರಾಶರಾಗಿ ಆಕೆಯೂ ಇತರ ಸ್ತ್ರೀಯರೂ ಜೋಹರ (ಅಗ್ನಿಪ್ರವೇಶ) ಮಾಡಿದರು![೧] ರಾವ್ರೋರವು ವೈರಿಯ ಕೈವಶವಾಯಿತು. ಬಳಿಕ ಮುಹಮ್ಮದ ಕಾಸಿಮನು ಅನುಕ್ರಮವಾಗಿ ಬ್ರಾಹ್ಮಣಾಬಾದ, ಆಲೋರ (ರಾಜಧಾನಿ) ಮತ್ತು ಮುಲ್ತಾನಗಳ ಮೇಲೆ ಏರಿಹೋದನು. ಸರದಿಯ ಮೇರೆಗೆ ಇವೂ ಅವನಿಗೆ ಶರಣುಬಂದವು. ಸಿಂಧ ಪ್ರಾಂತವು ಮುಸಲ್ಮಾನರ ರಾಜ್ಯವಾಯಿತು. ಬಳಿಕ ಕಾಸಿಮನು ಕನೋಜದ ಮೇಲೆ ಕಣ್ಣಿಟ್ಟನು. ಆದರೆ ದಾಳಿಯ ಸಿದ್ಧತೆಯಲ್ಲಿರುವಾಗಲೆ ಖಲೀಫನು ಅವನನ್ನು ತನ್ನಲ್ಲಿಗೆ ಬರಮಾಡಿಕೊಂಡನು!

**ಸಿಂಧದಲ್ಲಿ ಆಡಳಿತದ ವ್ಯವಸ್ಥೆ :—** ಸಿಂಧದ ದಾಳಿಯಲ್ಲಿ ಮುಸಲ್ಮಾನರು ಮೊದಲಿಗೆ ಪರಮತವೈರದಿಂದ ಪರಪೀಡಕರಾಗಿ ವರ್ತಿಸಿರಬಹುದು. ಆದರೆ ಆಡಳಿತವು ಶಾಂತರೀತಿಯಿಂದ ಸಾಗುವಂತೆ ಅವರು ವ್ಯವಸ್ಥೆ ಮಾಡಿದರು. ಅದರಲ್ಲಿ ಹಿಂದುಗಳಿಗೆ ಎಷ್ಟೋ ಅಧಿಕಾರಸ್ಥಾನಗಳು ದೊರೆತವು. 'ಜಿಜಿಯಾ' ಎಂಬ ಕರವನ್ನು ಕೊಡುವಂಥ ಹಿಂದುಗಳಿಗೆ ವಿತ್ತ ಜೀವಿತಗಳ ಸಂರಕ್ಷಣೆ ಮತ್ತು ಧರ್ಮಸ್ವಾತಂತ್ರ್ಯ ಕೊಡಲಾಯಿತು. ಸಿಂಧಪ್ರಾಂತವು ಮುಂದೆ ಸುಮಾರು ಮೂರು ಶತಮಾನಗಳ ವರೆಗೆ ಆರಬ ಮುಸಲ್ಮಾನರ ವಶದಲ್ಲಿ ಉಳಿಯಿತು.

೧. ಭಾರತದಲ್ಲಿ ಇದೇ ಮೊದಲನೆಯ ಜೋಹರವು.

**ಸಿಂಧದಲ್ಲಿ ಮುಸಲ್ಮಾನರ ಆಳಿಕೆಯಿಂದುಂಟಾದ ಸುಪರಿಣಾಮ ಗಳು :—** ಸಿಂಧದಲ್ಲಿ ಮುಸಲ್ಮಾನರ ಆಗಮನದಿಂದ, ಹಿಂದು ಮತ್ತು ಮುಸಲ್ಮಾನರಲ್ಲಿ ಪರಸ್ಪರ ತಿಳುವಳಿಕೆಯಾಗಹತ್ತಿತು. ಈ ಭಿನ್ನ ಧರ್ಮ ಹಾಗು ಭಿನ್ನ ಸಂಸ್ಕೃತಿಗಳು ಒಂದರ ಮೇಲೊಂದು ಪ್ರಭಾವ ಬೀರತೊಡಗಿದವು. ಆರಬರು ಭಾರತೀಯರಿಂದ ವಾಸ್ತುವಿದ್ಯೆ, ಖಗೋಲಶಾಸ್ತ್ರ, ಸಂಗೀತ ವಿದ್ಯೆಗಳನ್ನು ಕಲಿತರು. ಆದರಿಂದ ಇಲ್ಲಿಯ ವಿದ್ಯೆಗಳು ಮತ್ತು ಕಲೆಗಳು ಪಶ್ಚಿಮ ದೇಶಗಳಿಗೂ ಹಬ್ಬಿದವು. ಸಿಂಧಪ್ರಾಂತವು ಆರಬರ ಕೈವಶವಾದುದರಿಂದ ಭಾರತದ ವ್ಯಾಪಾರಕ್ಕೂ ಉತ್ತೇಜನ ದೊರೆತಂತಾಯಿತು. ಏಕೆಂದರೆ ಅವರು ಭಾರತದ ಸರಕುಗಳನ್ನು ವ್ಯಾಪಾರಕ್ಕಾಗಿ ಇತರ ಮುಸಲ್ಮಾನ ರಾಜ್ಯಗಳಿಗೆ ಕಳಿಸತೊಡಗಿದರು. ಆ ದೇಶಗಳಲ್ಲಿಯ ಸರಕುಗಳು ಸಿಂಧಕ್ಕೆ ಬರಹತ್ತಿದವು.

## ಅಭ್ಯಸನಗಳು.

೧. ಕೆಳಗೆ ಕೊಟ್ಟ ವಾಕ್ಯಗಳಲ್ಲಿ ಕೆಲವು ತೆರವಿರುವ ಸ್ಥಳಗಳಿರುವವು, ಅವುಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿರಿ :—

(ಅ) ಭಾರತದಲ್ಲಿ ಹರ್ಷ ಮತ್ತು ಪುಲಿಕೇಶಿ ಅವರು.........ನೆಯ ಶತಮಾನದಲ್ಲಿ ರಾಜ್ಯಭಾರ ಮಾಡಿದರು.

(ಆ) ಮುಸಲ್ಮಾನರಿಗೆ ಪವಿತ್ರವಾದ ತಿಂಗಳುಗಳು :–

೧ ............ ೨ ............ ೩ ............ ೪ ............

(ಇ) ರಮಜಾನವು ಮುಸಲ್ಮಾನರಿಗೆ ......... ದ ತಿಂಗಳು.

೨. ಕೆಳಗಿನ ಪ್ರಶ್ನೆಗಳಿಗೆ ಯೋಗ್ಯ ಉತ್ತರ ಕೊಡಿರಿ :–

(ಅ) ಆರಬಸ್ತಾನದಲ್ಲಿ ಒಕ್ಕಲುತನವು ಕಷ್ಟಸಾಧ್ಯ. ಏಕೆ ?

(ಆ) ಸಿಂಧದ ದಾಳಿಯಲ್ಲಿ ಜಾಟರು ದಾಹರನಿಗೆ ತಿರುಗಿಬಿದ್ದರು. ಏಕೆ ?

(ಇ) ಮುಹಮ್ಮದ ಬಿನ್ ಕಾಸಿಮನು ಕನೋಜದಮೇಲೆ ದಾಳಿ ಮಾಡಲಿಲ್ಲ, ಏಕೆ ?

೩. ಹಜರತ ಮುಹಮ್ಮದ ಪೈಗಂಬರರಲ್ಲಿ 'ಕಾಯಕ (ಶ್ರಮ) ಗೌರವ' ವಿತ್ತು. ಇದರ ಒಂದು ಉದಾಹರಣೆ ಹೇಳಿರಿ.

೪. ಪ್ರಾಚೀನ ಆರಬರನ್ನು ಅವರ ದುರಾಚಾರಗಳಿಂದ ಹೊರಳಿಸಿ ಸನ್ಮಾರ್ಗಕ್ಕೆ ಹಚ್ಚಬೇಕಾಗಿರುವದೆಂದು ಕಲ್ಪಿಸಿ, ಇದಕ್ಕಾಗಿ (ಅವರನ್ನು ಉದ್ದೇಶಿಸಿ) ಒಂದು ಚಿಕ್ಕ (ಕಾಲ್ಪನಿಕ) ಭಾಷಣವನ್ನು ರಚಿಸಿರಿ. (ಗೃಹಪಾಠಕ್ಕಾಗಿ.)

---

## ೨ನೆಯ ಪ್ರಕರಣ

# ರಾಜಪುತರು.

**ಮೊದಲುಮಾತು :—** ಉತ್ತರಭಾರತದಲ್ಲಿಯ ಹರ್ಷಚಕ್ರವರ್ತಿಯು ಕ್ರಿ. ಶ. ೬೪೭ ರಲ್ಲಿ ಮರಣಹೊಂದಿದನಷ್ಟೆ. ಅನಂತರದಲ್ಲಿ ಅಲ್ಲಿ ಚಿಕ್ಕದೊಡ್ಡ ೩೬ ರಾಜ್ಯಗಳು ತಲೆಯೆತ್ತಿದವು. ಅವೆಲ್ಲ ಏಕಕಾಲಕ್ಕೆ ಉದಯಿಸಲಿಲ್ಲ. ಆದರೂ ಎಷ್ಟೋ ರಾಜ್ಯಗಳು ಮುಂದೆ ಆರೇಳು ಶತಮಾನಗಳ ವರೆಗೆ ತಮ್ಮ ಕೀರ್ತಿಯನ್ನು ಬೆಳಗಿದವು. ಕೆಲವಂತೂ ಭಾರತದ ಉಚ್ಚ ಸಂಸ್ಕೃತಿ, ಉಜ್ವಲ ಪರಂಪರೆಗಳನ್ನು ಕಾದುಕೊಳ್ಳಲು, ಪರನಾಡುಗಳ ಆಗಂತುಕರನ್ನು ಬಲವಾಗಿ ಎದುರಿಸಿದವು. ಇವೇ, ಇತಿಹಾಸದಲ್ಲಿ ರಾಜಪುತ[1] ರಾಜ್ಯಗಳೆಂದು ಹೆಸರಾಗಿರುವವು.

ಮಧ್ಯಕಾಲದ ಭಾರತೀಯ ಇತಿಹಾಸದಲ್ಲಿ ರಾಜಪುತರು ತೋರಿಸಿದ ಸಮರ ಶೌರ್ಯದ ಮತ್ತು ಮಹಿಳಾಗೌರವದ ಕತೆಗಳು ಈಗಲೂ ಭಾರತದಲ್ಲಿ ಕೇಳಬರುತ್ತಿವೆ. ಆ ಕಾಲದಲ್ಲಿ ರಾಜಪುತರು ಭಾರತದೇಶದ ಸಂರಕ್ಷಣೆಯ ಬೆನ್ನೆಲುಬಿನಂತಿದ್ದರು. ಈಗಲೂ ಅವರು ಆದರ್ಶ ಭಾರತೀಯರಾಗಿ ಉಳಿದಿರುವರು. ಭಾರತೀಯ ಸಂಸ್ಕೃತಿ ಮತ್ತು ಭಾರತೀಯ ಪರಂಪರೆಗಳ ಅಭಿಮಾನವು ಅವರಲ್ಲಿ ಈಗಲೂ ತುಂಬಿ ತುಳುಕುತ್ತಿರುವದು. ಇದರಲ್ಲಿ ಅವರನ್ನು ಮೀರಿಸುವವರು ಭಾರತದಲ್ಲಿ ಮತ್ತಾರೂ ಇಲ್ಲವೆಂದು ಬಲ್ಲವರ ಅಭಿಪ್ರಾಯ.[2] ರಾಜಪುತರೆಂದರೆ, ಭಾರತೀಯರೆಲ್ಲರೂ ಹೆಮ್ಮೆಪಡಬೇಕಾದ ವಿಷಯ! ಆದುದರಿಂದ ಅಂದಿನ ರಾಜಪುತರ ಬಗೆಗೆ ಕೆಲವು ವಿವರಗಳನ್ನು ಕೆಳಗೆ ಕೊಡಲಾಗಿದೆ.

**ಕ್ರಿ. ಶ. ೭–೧೪ ಶತಮಾನಗಳಲ್ಲಿ ಉತ್ತರಭಾರತದಲ್ಲಿದ್ದ ರಾಜಪುತ ಕುಲ (ಬಣ) ಗಳು ಮತ್ತು ರಾಜ್ಯಗಳು :—**

---

೧. 'ರಾಜಪುತ' ಎಂಬ ಶಬ್ದವು ಸಂಸ್ಕೃತ ಭಾಷೆಯ 'ರಾಜಪುತ್ರ' ಎಂಬ ಶಬ್ದದ ಸುಲಭ ರೂಪ. ರಾಜಪುತರನ್ನು ರಜಪುತ, ರಜಪೂತ ಮತ್ತು ರಾಜಪೂತರೆಂದೂ ಕರೆಯಲಾಗುತ್ತದೆ.

೨. ಉದಾ : ಶ್ರೀ ಪಂಡಿತ ಜವಾಹರಲಾಲ ನೆಹರು ಅವರು ಈ ರೀತಿಯಾಗಿ ಅಭಿಪ್ರಾಯಪಟ್ಟಿರುವರು.

ಮೇಲೆ ಹೇಳಿದ ಅವಧಿಯಲ್ಲಿ ಪ್ರಸಿದ್ಧಿಗೆ ಬಂದ ರಾಜಪುತ ಕುಲಗಳು ಕೆಳಗಿನಂತಿವೆ:—ತೋಮರರು. ಪ್ರತಿಹಾರರು, ಚವ್ಹಾಣ(ಚಾಹುಮಾನ)ರು,




ಮಧ್ಯಯುಗದ ಆರಂಭದಲ್ಲಿ ಉತ್ತರ ಭಾರತದಲ್ಲಿದ್ದ ರಾಜಪುತ ಮನೆತನಗಳೂ ರಾಜ್ಯಗಳೂ.

ಚಂದೇಲರು, ಪರಮಾರ (ಪವಾರ)ರು, ಗುರ್ಜರ ಚಾಲುಕ್ಯರು, ಚೇದಿಯರು ಮುಂತಾದವು. (ಮೇಲಿನ ನಕಾಶ ನೋಡಿರಿ.)

**ರಾಜಪುತರ ಹುಟ್ಟು :—**

ಇದೊಂದು ಇಂದಿಗೂ ನಿರ್ಧಾರವಾಗಿ ಹೇಳಲಿಕ್ಕೆ ಬಾರದ ವಿಷಯವಾಗಿದೆ.

೧. ರಾಜಪುತರು ತಾವು ರಾಜಪುತ್ರರೆಂದೂ, ಕ್ಷತ್ರಿಯರೆಂದೂ, ಅಗ್ನಿ ಕುಲದವರೆಂದೂ, ಸೂರ್ಯವಂಶಿಗಳೆಂದೂ, ಚಂದ್ರವಂಶಿಗಳೆಂದೂ ಹೇಳಿ ಕೊಳ್ಳುತ್ತಾರೆ.

೨. (ಆದರೆ ಕೆಲವರ ಮತದ ಮೇರೆಗೆ) ಅವರು ಉತ್ತರಭಾರತದಲ್ಲಿ ಬೌದ್ಧ-ಧರ್ಮವು ಭರದಿಂದ ಪ್ರಸಾರ ಹೊಂದುತ್ತಿದ್ದಾಗ ಜಾತಿಸಂಕರವಾದೀ ತೆಂದು ಹೆದರಿ ವಿಂಧ್ಯ ಮತ್ತು ಅರವಲೀ ಬೆಟ್ಟಗಳ ಪ್ರದೇಶಗಳನ್ನು ಆಶ್ರಯಿ ಸಿದ ಕ್ಷತ್ರಿಯರು.

೩. (ಮತ್ತೂ ಕೆಲವರ ಅಭಿಪ್ರಾಯದಂತೆ) ಎಷ್ಟೋ ರಾಜಪುತರು ಹಿಂದಿನ ಶತಮಾನಗಳಲ್ಲಿ ದಾಳಿಗಾಗಿ ಭಾರತದಲ್ಲಿ ಬಂದು ಇಲ್ಲಿಯೆ ನೆಲೆಸಿದ ಹೊರನಾಡಿನವರ ಸಂತತಿಯವರು.[1]

ಅಂತೂ ರಾಜಪುತರ ಹುಟ್ಟು ಅದೇನೇ ಇರಲಿ, ಅವರೆಲ್ಲರೂ ಭಾರ ತೀಯ ಸಂಸ್ಕೃತಿಯಲ್ಲಿ ಇತರರೊಂದಿಗೆ ಸಮರಸವಾಗಿ ಕಲೆತುಹೋಗಿರುವದು ಖಂಡಿತ.[2]

ಭಾರತದಲ್ಲಿ ಮುಸಲ್ಮಾನರು ಬರುವ ವೇಳೆಗೆ ರಾಜಪುತರು ಹುಟ್ಟಿ, ಬೆಳೆದು, ಬಲಿತು ನಿಂತಿದ್ದರು. ಮುಸಲ್ಮಾನರು ಈ ಪರಾಕ್ರಮಶಾಲಿಗಳನ್ನು ಎದುರಿಸಬೇಕಾಯಿತು. ರಾಜಪುತರ ಕ್ಷಾತ್ರಧರ್ಮವು ಹಿಂದು ಧರ್ಮಕ್ಕೆ-ಬಹು ಕಾಲ ರಕ್ಷಾಕವಚವಾಯಿತು.

**ರಾಜಪುತರ ಗುಣಾತಿಶಯಗಳು :—**

ರಾಜಪುತರು ಮಹಾವೀರರು. ಇವರ ಶೌರ್ಯ, ಕೆಚ್ಚು, ಕ್ಷಾತ್ರತೇಜಗಳು ಜಗತ್ಪ್ರಸಿದ್ಧ. ಇವರಲ್ಲಿ ಸ್ವಾಭಿಮಾನ, ಕುಲಾಭಿಮಾನ, ಸ್ವಾಮಿನಿಷ್ಠೆ ಇವು ಹೆಚ್ಚು. ಸಮರಸಾಹಸಕ್ಕಾಗಿಯೇ ಇವರ ಜೀವನ ಮೀಸಲು. ಸಾಮಾನ್ಯವಾಗಿ ಇವರಲ್ಲಿ ರಣರಂಗದಿಂದ ಓಡಿಹೋಗುವ ಹೇಡಿಗಳೇ ಇರಲಿಲ್ಲ. ಕಾದಿ ಮಡಿದು ವೀರಸ್ವರ್ಗವನ್ನು ಪಡೆಯುವ ಗಂಡುಗಲಿಗಳು ಇವರು. ಅಧರ್ಮಯುದ್ಧವು ಇವರಿಗೆ ಗೊತ್ತಿರಲಿಲ್ಲ.

೧. ಶಕ, ಹೂಣ, ಸಿಥಿಯನ್ ಮುಂತಾದವರೇ ಆ ಹೊರನಾಡಿನವರು.
೨. ಶರೀರಸಂಬಂಧ ಮುಂತಾದವುಗಳಿಂದ.

ರಾಜಪುತರು ಸತ್ಯಸಂಧರು. ಕೊಟ್ಟ ಭಾಷೆಗೆ ಅವರು ಎಂದೂ ತಪ್ಪರು. ಮಹಿಳಾ-ಗೌರವ ಮತ್ತು ಪರನಾರೀ ಸಹೋದರತೆಗಳಿಗಾಗಿ ಅವರು ವಿಖ್ಯಾತರು. ಅವರಿಗೆ ಕುದುರೆಗಳ ಮೇಲೆ ಬಲು ಜೀವ. ರಾಜಪುತ ಸರದಾರನು ತನ್ನ ಖಡ್ಗ ಮತ್ತು ಕುದುರೆ ಇವೆರಡನ್ನು ಎಂದೂ ಬಿಟ್ಟಿರನು.



ರಾಜಪುತ ಸೈನಿಕ.

ರಾಜಪುತ ರಮಣಿಯು ವೀರಕುವರಿ, ವೀರಮಡದಿ, ವೀರಮಾತೆ. ಯುದ್ಧದಲ್ಲಿ ಸೋತು ಬಂದ ಗಂಡನ ಮೋರೆಯನ್ನು ಅವಳು ಎಂದೂ ನೋಡಳು. ಸಂಕಟ ಸಮಯದಲ್ಲಿ ತನ್ನ ಕಂಕಣಾರ್ಪಣದಿಂದ ವೀರ ರಾಜಪುತನ ನೆರವನ್ನು ದೊರಕಿಸುತ್ತಿದ್ದಳು. ಆಗ ಅವನು ಇವಳ ರಕ್ಷಣೆಗಾಗಿ ತನ್ನ ಪ್ರಾಣಾರ್ಪಣೆಗೂ ಸಿದ್ಧನಾಗುತ್ತಿದ್ದನು. ರಾಜಪುತ ಸ್ತ್ರೀಯರು ಮಹಾ ಪತಿವ್ರತೆಯರು. ಕಾಳಗದಲ್ಲಿ ತಮ್ಮ ಪತಿಗಳಿಗೆ ವಿಜಯದಾಸೆ ತಪ್ಪಿದರೆ, ಇವರು ಬೆಂಕಿಯಲ್ಲಿ ಧುಮುಕಿ ತಮ್ಮ ಸ್ತ್ರೀತ್ವ (ಆತ್ಮಗೌರವ)ವನ್ನು ಕಾಪಾಡಿಕೊಳ್ಳುತ್ತಿದ್ದರು. ಇದಕ್ಕೆ 'ಜೋಹರ'ವೆಂದು ಹೆಸರು. ಆ ಮೇಲೆ ಪುರುಷರು ಕೇಶರ ವರ್ಣದ ವಸ್ತ್ರ ಧರಿಸಿ, ಖಡ್ಗಪಾಣಿಗಳಾಗಿ, ಕತ್ತಿಗಳನ್ನು ಝಳಪಿಸುತ್ತ ವಾಯುವೇಗದಿಂದ ಕುದುರೆಗಳನ್ನು ಓಡಿಸುತ್ತ ರಣರಂಗದಲ್ಲಿ ಧುಮುಕುವರು. 'ಜೈಹರ' ಎಂಬ ಯುದ್ಧ ಘೋಷಣೆಯೊಂದಿಗೆ ಅತಿಪರಾಕ್ರಮದಿಂದ ಕೊನೆಯವರೆಗೂ ಹೋರಾಡಿ ಪ್ರಾಣವನ್ನರ್ಪಿಸುವರು. ಇದುವೆ ಆಗಿನ ಆರ್ಯತೇಜ! ಈ ಬಲಿದಾನ ಪದ್ಧತಿಯನ್ನು 'ಕೇಶರಿಯಾ' ಎಂದು ಕರೆಯುತ್ತಿದ್ದರು.

ರಾಜಪುತರು ಶಂಕರೋಪಾಸಕರು. 'ಭಗವಾನ್ ಏಕಲಿಂಗಜಿ' ಯು ಅವರ ಆರಾಧ್ಯ ದೇವತೆ.[೧]

೧. ಈ ದೇವಾಲಯವು ಉದಯಪುರದ ಸಮೀಪದಲ್ಲಿರುವದು.

ಸ್ತ್ರೀಯರ ಸ್ಥಾನಮಾನಗಳು — ಆಗ ಸ್ತ್ರೀಯರಿಗೆ ಸಮಾಜದಲ್ಲಿ ವಿಶೇಷ ಗೌರವವಿತ್ತು. ಶಿಕ್ಷಣಪ್ರಸಾರವು ತಕ್ಕುದಾಗಿತ್ತು. ಬಾಲಿಯರ ಶಿಕ್ಷಣದಲ್ಲಿ ನೃತ್ಯ-ಸಂಗೀತಗಳಿಗೆ ಸ್ಥಾನವಿತ್ತು.

**ಸಾಮಾಜಿಕ ರೀತಿನೀತಿಗಳು:—**

೧. ಅಫೀಮು ಸೇವನೆ :— ಒಟ್ಟಾಗಿ ಕಲೆತು ಮಿತಿಯಿಂದ ಅಫೀಮನ್ನು ಸೇವಿಸುವದು. (ಎಷ್ಟೋ ಸಲ ಕುಟುಂಬಗಳಲ್ಲಿ ಪರಸ್ಪರ ಸ್ನೇಹವುಂಟಾಗಲಿಕ್ಕೆ ಇದೊಂದು ಸಾಧನವಾಗಿತ್ತಂತೆ.)



ಕಂಕಣಾರ್ಪಣ.

೨. ಕಂಕಣಾರ್ಪಣ :— ಇದೊಂದು ಆ ಕಾಲದ ರಾಜಪುತರಲ್ಲಿಯ ವಿಶಿಷ್ಟ ಸಂಪ್ರದಾಯ. ಸಂಕಟಕ್ಕೊಳಗಾದ ರಾಜಪುತ ಸ್ತ್ರೀಯು ತನ್ನ ಸಂಕಟ ನಿವಾರಣೆಗಾಗಿ ತಾನು ಆಯ್ದುಕೊಂಡ ರಾಜಪುತ ಯುವಕನಿಗೆ ತನ್ನ ಕಂಕಣ (ತೋಳುಬಂದಿ) ವನ್ನು ಕಳಿಸುತ್ತಿದ್ದಳು. ಅದರ ಸ್ವೀಕಾರದಿಂದ ಅವನು ಆಕೆಯ ಸಹೋದರನೆಂದೆನಿಸುತ್ತಿದ್ದನು, ಮತ್ತು ಆಕೆಯ ಸಂರಕ್ಷಣೆಗಾಗಿ ತನ್ನ ಪ್ರಾಣ ಕೊಡಲೂ ಸಿದ್ಧನಾಗುತ್ತಿದ್ದನು ! (ಇದಾದರೂ ರಾಜಮನೆತನಗಳ ನಡುವೆ ಸ್ನೇಹದ ಹುಟ್ಟು-ಬೆಳಿಗೆಗಳಿಗೆ ಸಾಧನವಾಗುತ್ತಿತ್ತು).

೩. ವಸಂತಬೇಟೆ – ವಸಂತ ಕಾಲದಲ್ಲಿ ಉತ್ಸಾಹದಿಂದ ಬೇಟೆ ಯಾಡುವುದು ರಾಜಪುತ್ರರ ಪ್ರೀತಿಯ ಮನರಂಜನೆಯ ವಿಷಯವು. ಭಾಲೆ ಖಡ್ಗ ಗಳಿಂದ ಸಜ್ಜಾದ ರಾಜಪುತ್ರರು ಹುಚ್ಚು ಧೈರ್ಯದಿಂದ ಕಾನನವನ್ನು ಹೊಕ್ಕು



ವಸಂತ ಬೇಟೆ.

ಕಾಡು ಮೃಗಗಳನ್ನು ಬೆನ್ನಟ್ಟುವರು. ಜೀವದ ಹಂಗುದೊರೆದು ಬೇಟೆಯಾಡು ವರು. ತಮ್ಮ ಹೊಡೆತಗಳಿಗೆ ಸತ್ತುಬಿದ್ದ ಹುಲಿ ಸಿಂಹ ಕಾಡಾನೆಗಳನ್ನು ಕಂಡು ಹರ್ಷದಿಂದ ಉನ್ಮತ್ತರಾಗುವರು.

೪. ಅಶ್ವವಿದ್ಯೆಯ ಪಂದ್ಯಾಟಗಳು :— ಇವುಗಳಲ್ಲಿ ರಾಜಪುತ್ರರನ್ನು ಸರಿಗಟ್ಟುವವರೇ ಇರಲಿಲ್ಲವಂತೆ.

**ರಾಜ್ಯಭಾರಕ್ರಮ :—**

ಪ್ರತಿಯೊಂದು ರಾಜ್ಯಕ್ಕೂ ಒಬ್ಬ ನಿರಂಕುಶನಾದ ರಾಜನು. ಅಲ್ಲಿಯ ಭೂಮಿಗೆಲ್ಲ ಅವನೇ ಒಡೆಯನು. ಸರದಾರರಿಗೆ ಭೂಮಿಗಳು 'ಊಳಿಗ ಮಾನ್ಯ'[೧]ಗಳಾಗಿ ಅವನಿಂದ ದೊರೆಯುತ್ತಿದ್ದವು. ಸರದಾರರಲ್ಲಿ ಬೇರೆ

೧. ಯುದ್ಧಸಮಯದಲ್ಲಿ ಸೈನ್ಯದೊಂದಿಗೆ ಸಹಾಯ ಸಲ್ಲಿಸುವ ಕರಾರಿನಿಂದ ಭೂಮಿಗಳನ್ನು ಹಂಚುವ ಪದ್ಧತಿ. (ಇದಕ್ಕೆ ಇಂಗ್ಲಿಷ ಭಾಷೆಯಲ್ಲಿ ಫ್ಯೂಡಲ್ ಸಿಸ್ಟಿಮ್ — Feudal system ಎಂದೆನ್ನುವರು.)

ಬೇರೆ ದರ್ಜೆಗಳಿದ್ದವು. ಸರದಾರರಾಗಲಿ ಮಾಂಡಲಿಕರಾಗಲಿ ಹಣಕಾಸಿನ ಮೋಹಕ್ಕೆ ಬಲಿಬಿದ್ದು ತಮ್ಮ ರಾಜರಿಗೆ ವಿಶ್ವಾಸಘಾತುಕರಾಗುತ್ತಿದ್ದಿಲ್ಲ. ಅತ್ಯಂತ ಸ್ವಾಮಿನಿಷ್ಠರು ಅವರು.

ಆಡಳಿತದಲ್ಲಿ ಹಳ್ಳಿಯೇ ತೀರ ಚಿಕ್ಕ ವಿಭಾಗ. 'ದಿವಿರಾ' ಎಂಬವನು ಗ್ರಾಮಾಧಿಕಾರಿ. ಅವನು ಗ್ರಾಮದ ಲೆಕ್ಕ-ಪತ್ರಗಳನ್ನು ಬರೆದಿಡುತ್ತಿದ್ದನು. 'ನಿಯೋಗಿ' ಎಂಬ ಜಿಲ್ಲಾಧಿಕಾರಿಯು ಹಳ್ಳಿಗಳಲ್ಲಿ ಸಂಚರಿಸಿ ಇವುಗಳನ್ನು ಪರಿಶೀಲಿಸುತ್ತಿದ್ದನು. 'ಪರಿಪಾಲಕ' ನೆಂಬವನು ಪ್ರಾಂತಾಧಿಕಾರಿಯು.

**ರಾಜರಲ್ಲಿಯ ಪರಸ್ಪರ ವೈರಭಾವ :—**

ಭಾರತದ ಇತಿಹಾಸದಲ್ಲಿ, ರಾಜಪುತ ರಾಜ್ಯಗಳು ಐದು ಶತಮಾನಗಳ ವರೆಗೆ (ಕ್ರಿ. ಶ. ೭—೧೨ ಶತಮಾನಗಳು) ವೈಭವದಿಂದ ಮೆರೆದವು.[೧] ಎಷ್ಟೋ ರಾಜರು ಸಾಹಿತ್ಯ ಲಲಿತಕಲೆಗಳಿಗೆ ಉತ್ತೇಜನಕೊಟ್ಟರು. ಆದರೆ, ಬರಬರುತ್ತ ರಾಜಪುತ ರಾಜರು ಮದಾಂಧರಾದರು. ಜೊತೆಗೆ, ರಾಜರಾಜರಲ್ಲಿ ಒಳಜಗಳಗಳು ಏಳತೊಡಗಿದವು. ಪರರ ಪ್ರಬಲ ದಾಳಿಗಳ ಭೀತಿಯುಂಟಾದಾಗ ಮಾತ್ರ ಒಟ್ಟು ಗೂಡುವ ರೂಢಿಯುಂಟಾಯಿತು. ರಾಜಪುತರಲ್ಲಿ ಪ್ರಾದೇಶಿಕಾಭಿಮಾನವಿತ್ತೇ ಹೊರತಾಗಿ, ರಾಷ್ಟ್ರೀಯ ಭಾವನೆ ಇಲ್ಲವೆ ರಾಷ್ಟ್ರಾಭಿಮಾನ ಇರಲಿಲ್ಲ. ಇದೇ, ಅವರಲ್ಲಿ ಪರಸ್ಪರ ಕಲಹಗಳಿಗೆ ಕಾರಣ. ಇದೇ, ೧೧ ನೆಯ ಶತಮಾನದಲ್ಲಿ ಭಾರತಕ್ಕೆ ಆಗಂತುಕರಾಗಿ ಬಂದ ಹೊರ ನಾಡಿನವರ ವಿಜಯಗಳಿಗೆ ಕಾರಣ.

**ಪ್ರತಿಹಾರರು : ಅವರ ಭಿನ್ಮಾಳ ಮತ್ತು ಕನೋಜ ರಾಜ್ಯಗಳು : ೧ ನೆಯ ಭೋಜ.**

ಪ್ರತಿಹಾರ (ಪ್ರತೀಹಾರ) ರೆಂದರೆ ದ್ವಾರಪಾಲಕರು; ಬಾಗಿಲು ಕಾಯುವವರು. ಅವರು ರಾಜಪುತರು. ಅಷ್ಟೇ ಅಲ್ಲ; ತಾವು ಸೂರ್ಯವಂಶದ ಕ್ಷತ್ರಿಯರೆಂದು ಅವರ ಹೇಳಿಕೆ.

ಇವರಿಗೆ ಪ್ರತಿಹಾರರೆಂದು ಹೆಸರುಂಟಾದ ಬಗೆ :—

ಕ್ರಿ. ಶ. ೮ ನೆಯ ಶತಮಾನದ ಪೂರ್ವಾರ್ಧದಲ್ಲಿ ರಾಷ್ಟ್ರಕೂಟ ರಾಜನೊಬ್ಬನು ಉಜ್ಜಯಿನಿಯಲ್ಲಿ ಯಜ್ಞಮಾಡಿದನು. ಆ ಸಮಾರಂಭದಲ್ಲಿ

---

೧. ಈ ಅವಧಿಯು 'ರಾಜಪುತ ಕಾಲ' ವೆಂದು ಹೆಸರಾಗಿದೆ.

ಗುರ್ಜರರ[1] ಕೆಲವು ಮುಖಂಡರು ಯಜ್ಞಶಾಲೆಯ ದ್ವಾರಪಾಲಕರಾಗಿ ದುಡಿದು ಕಾರ್ಯವು ನಿರ್ವಿಘ್ನವಾಗಿ ಸಾಗುವಂತೆ ನೋಡಿಕೊಂಡರಂತೆ. ಅಂದಿನಿಂದ ಇವರು ಪ್ರತಿಹಾರರಾದರೆಂದು ಹೇಳಲಾಗುತ್ತದೆ. ಆದರೆ ಪ್ರತಿಹಾರರು ತಮ್ಮ ಹುಟ್ಟನ್ನು ಹೇಳಿಕೊಳ್ಳುವ ರೀತಿಯೇ ಬೇರೆ! ಅವರ ಹೇಳಿಕೆಯ ಮೇರೆಗೆ–ಸೂರ್ಯವಂಶದ ಶ್ರೀ ರಾಮಚಂದ್ರನ ತಮ್ಮನಾದ ಲಕ್ಷ್ಮಣನೇ ಅವರ ಮೂಲ ಪುರುಷನು. ರಾಮಚಂದ್ರನು ಸೀತಾ–ಲಕ್ಷ್ಮಣರೊಡನೆ ದಂಡಕಾರಣ್ಯದಲ್ಲಿ ವಾಸಮಾಡಿದಾಗ, ಲಕ್ಷ್ಮಣನು ಅಣ್ಣನ ಪರ್ಣಕುಟೀರದ ದ್ವಾರಪಾಲಕನಾಗಿದ್ದನು. ಆದುದರಿಂದಲೇ (ಅವನ ಸಂತತಿಯವರಾದ) ತಮಗೆ ಪ್ರತಿಹಾರರೆಂದು ಹೆಸರು ಬಂದಿತು ಮುಂತಾಗಿ.

ವಿದ್ವಾಂಸರ ಅಭಿಪ್ರಾಯದ ಮೇರೆಗೆ, ರಾಜಪುತರಲ್ಲಿ ಗುರ್ಜರರೆಂಬವರು ಪ್ರಾಚೀನರು.[2] ಪ್ರತಿಹಾರರು ಅವರ ಪಂಗಡಗಳಲ್ಲೊಬ್ಬರು.[3] ಇವರ ರಾಜ್ಯವು ಮೊದಲಿಗೆ ಭಿನ್ಮಾಳ (ಈಗಿನ ಭಡೋಚ) ದಲ್ಲಿತ್ತು. ಮಾರವಾಡವೂ ಪಂಜಾಬವೂ ಬರಬರುತ್ತ ಅದರಲ್ಲಿ ಸಮಾವೇಶವಾದವು. ಭಿನ್ಮಾಳದ ಪ್ರತಿಹಾರರು ಮತ್ತೆ ಕೆಲವು ಕಾಲದ ತರುವಾಯ ಕನೋಜವನ್ನು ಗೆದ್ದು ಅಲ್ಲಿಯ ಸಿಂಹಾಸನದಮೇಲೆ ಕುಳಿತರು. ತಮ್ಮ ರಾಜ್ಯವನ್ನು ವಿಸ್ತರಿಸಿ ಅದನ್ನು ಸಾಮ್ರಾಜ್ಯವನ್ನಾಗಿ ಮಾಡಿದರು. ಹರ್ಷನು ಮರಣ ಹೊಂದಿ ಎರಡು ಶತಮಾನಗಳಾದ ಬಳಿಕ ಉತ್ತರ ಭಾರತದಲ್ಲಿ ಸಮ್ರಾಟರೆಂದು ಮೆರೆದರು. ಈ ರೀತಿಯಾಗಿ ಭಿನ್ಮಾಳದ ಪ್ರತಿಹಾರರು ಕನೋಜದ ಪ್ರತಿಹಾರರಾದರು.

**ಹೆಚ್ಚಿನ ಅಭ್ಯಾಸಕ್ಕಾಗಿ :—**

**[ಕನೋಜದ ಸಂಕ್ಷಿಪ್ತ ಚರಿತ್ರೆ –(ಕನೋಜವು ಭಿನ್ಮಾಳದ ಪ್ರತಿಹಾರರ ಕೈಸೇರುವ ಮುಂಚೆ** (ಕ್ರಿ. ಶ. ೬೪೭–೮೩೬)

೧. ಪ್ರತಿಹಾರರು ಮೊದಲಿಗೆ ಗುರ್ಜರರಲ್ಲಿಯ ಒಂದು ಪಂಗಡದವರು.

೨. ಕ್ರಿ. ಶ. ೭ ನೆಯ ಶತಮಾನದ ಬಾಣಕವಿಯ 'ಹರ್ಷಚರಿತ' ದಲ್ಲಿಯೂ ಹುಯೆನ-ತ್ಸಂಗನ ವರ್ಣನೆಗಳಲ್ಲಿಯೂ ಚಾಲುಕ್ಯವಂಶದ ೨ ನೆಯ ಪುಲಿಕೇಶಿಯು ಐಹೊಳೆಯಲ್ಲಿ ಕೆತ್ತಿಸಿದ ಶಿಲಾಶಾಸನಗಳಲ್ಲಿಯೂ ಗುರ್ಜರರ ಬಗೆಗೆ ಉಲ್ಲೇಖಗಳು ಕಂಡುಬರುತ್ತವೆ.

೩. ಆದುದರಿಂದಲೆ, ಗುರ್ಜರರನ್ನು ಪಶ್ಚಿಮ-ಪ್ರತಿಹಾರರೆಂದೂ ಇತಿಹಾಸದಲ್ಲಿ ಕರೆಯಲಾಗಿದೆ.

ಹರ್ಷನ ಮರಣಾನಂತರ, ಉತ್ತರಭಾರತದಲ್ಲಿ ರಾಜಕೀಯ ಗೊಂದಲ ವುಂಟಾಯಿತು. ಅವನ ಸಾಮ್ರಾಜ್ಯವು ಒಡೆದುಹೋಗಿ ಎಷ್ಟೋ ಚಿಕ್ಕ ದೊಡ್ಡ ರಾಜ್ಯಗಳು ತಲೆಯೆತ್ತಿದವು. ಸುಮಾರು ಒಂದೂವರೆ ಶತಮಾನದ ವರೆಗೆ ಕನೋಜದ ಸಿಂಹಾಸನದಮೇಲೆ ಕುಳಿತ ಯಾವ ಅರಸರೂ ಬಲಿಷ್ಠರಿರಲಿಲ್ಲ. ಅಂತೆಯೇ, ಸಾಮಂತರಾಜರು ಸ್ವತಂತ್ರರಾದರು. ಅವರಲ್ಲಿ ಅಂತಃಕಲಹ ಗಳೆದ್ದವು. ಕೇಂದ್ರ ಸರಕಾರದ ಅಂಕಿತವು ತಪ್ಪಿಹೋದ ಬಳಿಕ ಕೇಳುವದೇನು ? ಆಳಿದುಳಿದ ಗುಪ್ತ ಸಂತತಿಯ ಅರಸರೂ ಆಮೇಲೆ ಮಹತ್ವಾಕಾಂಕ್ಷಿಗಳಾದ ಗೌಡ ಅರಸರೂ ಕನೋಜದಲ್ಲಿ ಪ್ರಭುತ್ವವನ್ನು ಸ್ಥಾಪಿಸಿದರು. ಕ್ರಿ. ಶ. ೮ ನೆಯ ಶತಮಾನದ ಆದಿಯಲ್ಲಿ ಕನೋಜದ ಪಟ್ಟವನ್ನು ಏರಿದ ಯಶೋವರ್ಮನು ಮಾತ್ರ ಗಟ್ಟಿಗನಾದ ಆರಸು. ಇವನು ಹರ್ಷನಂತೆ ರಾಜವೈಭವ ದಿಂದ ಮೆರೆದನು. ಕವಿಪೋಷಕನೆಂದು ಖ್ಯಾತಿಪಡೆದನು.[೧] ಇವನ ಅನಂತರದ ಅರಸರು ದುರ್ಬಲರು. ಇಂದ್ರಾಯುಧ (ಇಂದ್ರರಾಜ) ನೆಂಬವನು ರಾಜನಿದ್ದಾಗ ಬಂಗಾಲದ ಪಾಲ ಮನೆತನದ ಧರ್ಮಪಾಲನೆಂಬವನು ಅವನನ್ನು ಪಟ್ಟದಿಂದ ನೂಕಿ, ಚಕ್ರಾಯುಧನೆಂಬ ತನ್ನ ಮಿತ್ರನನ್ನು ಕನೋಜದ ಸಿಂಹಾಸನದ ಮೇಲೆ ಕುಳ್ಳಿರಿಸಿದನು. ಚಕ್ರಾಯುಧನು ಧರ್ಮಪಾಲನ ಕೈಗೊಂಬೆಯಾಗಿರಾಜ್ಯಭಾರ ಸಾಗಿಸಿದನು. ಭಿನ್ಮಾಳದ ಪ್ರತಿಹಾರ ರಾಜರಲ್ಲೊಬ್ಬನು[೨] ಇವನಿಂದಲೇ ಕನೋಜದ ಪಟ್ಟವನ್ನು ಕಿತ್ತುಕೊಂಡನು. ]

**ಪ್ರತಿಹಾರ ವಂಶದ ಪ್ರತಾಪಶಾಲಿಯಾದ ೧ ನೆಯ ಭೋಜ (ಮಿಹಿರ ಭೋಜ)** ಕ್ರಿ. ಶ. ೮೩೬–೮೯೦.

**ಹೆಚ್ಚಿನ ಅಭ್ಯಾಸಕ್ಕಾಗಿ :—**

[ಮುಂಚಿನ ಅರಸರು :— ೧. **೧ ನೆಯ ನಾಗಭಟ,** ಕ್ರಿ. ಶ. ೭೨೫-೭೪೦. ಇವನು ಭಿನ್ಮಾಳ ಪ್ರತಿಹಾರ ಅರಸರಲ್ಲಿ ಮೊದಲನೆಯ ಇತಿಹಾಸ ಪ್ರಸಿದ್ಧ ರಾಜನು. ಈ ಮನೆತನದ ಮೂಲಪುರುಷನಾದರೂ ಇವನೇ ಎಂದು ಹೇಳಲಾಗುತ್ತದೆ. ಇವನು ತನ್ನ ರಾಜ್ಯದ ಮೇಲೆ ಮುನ್ನುಗ್ಗಿ ಬರುತ್ತಿದ್ದ ಸಿಂಧದ ಅರಬರನ್ನೂ ದಕ್ಷಿಣಾಪಥದ ಚಾಲುಕ್ಯರನ್ನೂ ರಾಷ್ಟ್ರಕೂಟರನ್ನೂ

---

೧. ವಾಕ್ಪತಿರಾಜನೆಂಬ ಕವಿಯೂ ಸಂಸ್ಕೃತದಲ್ಲಿ ಉದ್ದಾಮ ಕವಿಯೆನಿಸಿದ ಭವಭೂತಿಯೂ ಇವನ ಆಶ್ರಯದಲ್ಲಿದ್ದರು.

೨. ಇಮ್ಮಡಿ ನಾಗಭಟ.

ಹಿಂದೂಡಿದನು. ಈ ರೀತಿಯಿಂದ ತನ್ನ ರಾಜ್ಯದ ಸ್ಥಾನ-ಮಾನಗಳನ್ನು ಕಾದುಕೊಂಡನು. ಬಳಿಕ, ಮಾರವಾಡ ಗ್ವಾಲ್ಹೇರಗಳ ವರೆಗೆ ತನ್ನ ರಾಜ್ಯ ಬೆಳೆಸಿದನು. ೨. **ವತ್ಸರಾಜ.** ಇವನು ನಾಗಭಟನ ಮೊಮ್ಮಗನು.[೧] ಬಂಗಾಲದ ವರೆಗೆ ರಾಜ್ಯ ಗೆದ್ದು ಸಮ್ರಾಟ ಪದವಿಗೇರಿದನು. ಆದರೆ ದಕ್ಷಿಣಾಪಥದ ರಾಷ್ಟ್ರಕೂಟರ **ಧ್ರುವರಾಜನು** ಇವನನ್ನು ಸೋಲಿಸಿ ಕಾಡಿಗಟ್ಟಿದನೆಂದು ಹೇಳಲಾಗುತ್ತದೆ. ೩. **ಇಮ್ಮಡಿ ನಾಗಭಟ.** ಇವನು ವತ್ಸರಾಜನ ಮಗನು. ಇವನು ಬಂಗಾಲದ ಧರ್ಮಪಾಲನನ್ನು ಸೋಲಿಸಿ, ಕನೋಜದ ಸಿಂಹಾಸನದ ಮೇಲೆ ಅವನ ಆಶ್ರಿತನಾಗಿ ಕುಳಿತಿದ್ದ ಚಕ್ರಾಯುಧನನ್ನು ಪಟ್ಟದಿಂದ ತಳ್ಳಿದನು. ಕನೋಜವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಚಕ್ರವರ್ತಿಯ ಬಿರುದುಗಳನ್ನು ಧರಿಸಿದನು.[೨] ಇವನ ರಾಜ್ಯವು ಸಿಂಧದಿಂದ ದಕ್ಷಿಣಕ್ಕೆ ಆಂಧ್ರ ದೇಶದವರೆಗೆ, ಸೌರಾಷ್ಟ್ರದಿಂದ ಪಶ್ಚಿಮಕ್ಕೆ ಬಂಗಾಲದ ವರೆಗೆ ಕಾಲು ಚಾಚಿತು. ಆದರೆ, ಪ್ರತಿಹಾರರ ಬದ್ಧವೈರಿಗಳಾದ ರಾಷ್ಟ್ರಕೂಟರ ಮುಂದೆ ಇವನ ಆಟ ಸಾಗಲಿಲ್ಲ. ರಾಷ್ಟ್ರಕೂಟರ ಮುಮ್ಮಡಿ (೩ ನೆಯ) **ಗೋವಿಂದನು** ಹಲವು ಸಾರೆ ಇವನನ್ನು ಸೋಲಿಸಿದನು. ]

## ೧ ನೆಯ ಭೋಜ—ಮಿಹಿರ ಭೋಜ

ಇವನು ಇಮ್ಮಡಿ ನಾಗಭಟನ ಮೊಮ್ಮಗ. ಮಹಾಪ್ರತಾಪಶಾಲಿಯಾದ ಅರಸನು. ಇವನ ಕಾಲದಲ್ಲಿ ಕನೋಜ ಸಾಮ್ರಾಜ್ಯವು ವೈಭವದ ಶಿಖರಕ್ಕೇರಿತು. ಬಂಗಾಲದ ದೇವಪಾಲನು ಇವನನ್ನು ಕಂಡು ನಡುಗುತ್ತಿದ್ದನಂತೆ. ಕೆಲವೊಂದು ಪ್ರಾಂತಗಳ ಹೊರತಾಗಿ ಉತ್ತರಭಾರತಕ್ಕೆಲ್ಲ ಇವನೆ ಚಕ್ರವರ್ತಿಯಾಗಿದ್ದನು.[೩]

ಮಿಹಿರ ಭೋಜನು ಅಶೋಕ ಮತ್ತು ಹರ್ಷ ಇವರ ಮೇಲ್ಪಙ್ತಿಗೆ ಸೇರಿದವನೆಂದು ಹೇಳಬಹುದು. ಇವನಲ್ಲಿ ಬಲಿಷ್ಠವಾದ ಅಶ್ವ-ಸೈನ್ಯವಿತ್ತು. ಸಾಮ್ರಾಜ್ಯದ ಭದ್ರತೆಗಾಗಿ ಗಡಿಗಳಲ್ಲಿ ಸಂರಕ್ಷಕ ಸೈನ್ಯಗಳನ್ನಿಟ್ಟಿದ್ದನು. ರಾಜ್ಯದಲ್ಲಿ ಸುಖಶಾಂತಿಗಳು ನೆಲೆಗೊಂಡಿದ್ದವು.

---

೧. ತಮ್ಮನ ಮಗನ ಮಗ.

೨. ಪರಮ ಭಟ್ಟಾರಕ, ಮಹಾರಾಜಾಧಿರಾಜ, ಪರಮೇಶ್ವರ ಮುಂತಾಗಿ.

೩. ಮತ್ತೂ ಹೆಚ್ಚು ವಿಸ್ತಾರವಾಗಗೊಡದಂತೆ ಇವನಿಗೆ ಕಾಶ್ಮೀರದ ಅರಸನೂ ರಾಷ್ಟ್ರಕೂಟರ ಧ್ರುವ ಧಾರಾವರ್ಷನೂ ಅಡ್ಡ ಬಂದರು.

## ಹೆಚ್ಚಿನ ಅಭ್ಯಾಸಕ್ಕಾಗಿ

[ ಅನಂತರ ಆಗಿಹೋದ ಅರಸರು :— **೧ನೆಯ ಮಹೇಂದ್ರಪಾಲ.** ಇವನು ಮಿಹಿರಭೋಜನ ಮಗನು. ತಂದೆಯು ಬಿಟ್ಟು ಹೋದ ಸಾಮ್ರಾಜ್ಯವನ್ನು ಕಾದುಕೊಂಡನು. ಹರ್ಷ ಯಶೋವರ್ಮರಂತೆ, ಇವನೂ ವಿದ್ಯಾಭಿಮಾನಿ. ಕವಿಗಳಿಗೆ ಆಶ್ರಯದಾತನು.[೧]

ಮಹೇಂದ್ರಪಾಲನ ಮರಣದ ಅನಂತರ ಪ್ರತಿಹಾರ ಸಾಮ್ರಾಜ್ಯವು ಕಳೆಗುಂದಹತ್ತಿತು. ಇವನ ಮಗನಾದ **ಮಹೀಪಾಲನು** ರಾಷ್ಟ್ರಕೂಟರ ಮುಮ್ಮಡಿ ಇಂದ್ರನಿಂದ ಸಂಪೂರ್ಣವಾಗಿ ಪರಾಭವ ಹೊಂದಿದನು. ಕನೋಜವು ಇಂದ್ರನ ಕೈವಶವಾಯಿತು. ಆದರೂ ಮಹೀಪಾಲನು ತನ್ನ ಸಾಮಂತ ರಾಜನ ಸಹಾಯದಿಂದ ಅದನ್ನು ಮರಳಿ ಗಳಿಸಿದಂತೆ ಕಾಣುತ್ತದೆ. ಅದೇನೇ ಇರಲಿ, ಪ್ರತಿಹಾರರು ರಾಷ್ಟ್ರಕೂಟರಿಂದ ತಮಗೆ ಬಿದ್ದ ಪೆಟ್ಟಿನ ಮೂಲಕ ಮುಂದೆ ಚೇತರಿಸಿಕೊಳ್ಳಲಿಲ್ಲವೆಂಬುದು ಖಂಡಿತ. ಮತ್ತೂ ಮುಂದಿನ ಅರಸರ ಕಾಲದಲ್ಲಿ ಅವರ ಸಾಮಂತರಾಜರು ಸ್ವತಂತ್ರರಾದರು; ಮುಖ್ಯವಾಗಿ ಗುಜರಾತದಲ್ಲಿ ಚಾಳುಕ್ಯರು, ಮಾಳವಾದಲ್ಲಿ ಪರಮಾರರು, ಯಮುನಾ ನರ್ಮದಾ ನದಿಗಳ ನಡುವಿನ ಪ್ರದೇಶದಲ್ಲಿ ಚಂದೇಲರು ಮತ್ತು ಚೇದಿ ಮನೆತನದವರು. ]

೧೧ನೆಯ ಶತಮಾನದಲ್ಲಿ[೨] ಕನೋಜದ ರಾಜ್ಯಪಾಲನು ಘಜನೀ ಮಹಮೂದನಿಗೆ ಶರಣು ಬಂದನು! ಪ್ರತಿಹಾರರ ಸಾಮ್ರಾಜ್ಯವು ನಷ್ಟವಾಯಿತು. ಅದು ಕಪ್ಪಕಾಣಿಕೆಯನ್ನು ಸಲ್ಲಿಸುವ ಚಿಕ್ಕ ರಾಜ್ಯವಾಗಿ ಉಳಿಯಿತು.

### ಅಭ್ಯಸನಗಳು.

೧. ಮುಸಲ್ಮಾನರು ದಾಳಿಗಾಗಿ ಉತ್ತರ ಭಾರತಕ್ಕೆ ಬರುವ ಸಮಯದಲ್ಲಿ, ಅಲ್ಲಿದ್ದ ಮುಖ್ಯ ರಾಜಪುತ ರಾಜ್ಯಗಳ ಹೆಸರು ಬರೆಯಿರಿ.

೨. ಕಾಲ್ಪನಿಕ-ಸಂಭಾಷಣೆಗಾಗಿ: ಕಾಳಗದಲ್ಲಿ ರಾಜಪುತ ಸರದಾರನೊಬ್ಬನು ಮರಣಕ್ಕಂಜಿ, ಹಿಂತಿರುಗಿ ಮನೆಗೆ ಓಡಿ ಬಂದಿರುವನು! ಮನೆಯಲ್ಲಿ ಅವನ ಹೆಂಡತಿಗೂ ಅವನಿಗೂ ನಡೆಯಬಹುದಾದ ಸಂಭಾಷಣೆ ಏನಿರಬಹುದು? (ಶಿಕ್ಷಕರಿಗೆ **ಸೂಚನೆ:—** ಈ ಸಂಭಾಷಣೆಯು ಉಪಯುಕ್ತವೂ ಸ್ವಾರಸ್ಯಪೂರ್ಣವೂ ಆಗುವದು. ಇದನ್ನು ವರ್ಗದಲ್ಲಿಯೆ ಬಾಲಕ ಬಾಲಿಕೆಯರು ಜರುಗಿಸುವಂತೆ ಪ್ರಯತ್ನಿಸಬಹುದು.)

---

೧. ರಾಜಶೇಖರನೆಂಬ ಕವಿಯು ಇವನ ಆಸ್ಥಾನದಲ್ಲಿದ್ದನು.

೨. ಕ್ರಿ. ಶ. ೧೦೧೮ ರಲ್ಲಿ.

೩. ಕಾಲ್ಪನಿಕ-ಪತ್ರಲೇಖನಕ್ಕಾಗಿ: ಸಂಕಟದಲ್ಲಿ ಸಿಕ್ಕುಬಿದ್ದಿರುವ ರಾಜಪುತ ಸ್ತ್ರೀಯೊಬ್ಬಳು ಸಹಾಯಕ್ಕಾಗಿ ಒಬ್ಬ ರಾಜಪುತ ಸರದಾರನಿಗೆ ತನ್ನ ಕಂಕಣವನ್ನು ಕಳಿಸಿರುವಳು. ನೀವೇ ಆ ರಾಜಪುತ ಸರದಾರನೆಂದು ಭಾವಿಸಿ, ಆಕೆಗೆ ಯೋಗ್ಯವಾದ ಚಿಕ್ಕದೊಂದು ಪತ್ರ ಬರೆಯಿರಿ. ( ಗೃಹಪಾಠ )

೪. ಕವಿತೆ :

ಎಲ್ಲೆಲ್ಲು ಕುಸುಮಿಸಿದ ಜೀವನದ ಸಿರಿ-ಚೆಲ್ವು,  
ಕಾನನವೆ ನಂದನವು ! ಯೌವನದ ಒಗರಿನಲಿ  
ವಜ್ರವಾಜಿಗಳನೇರಿ, ರಾಜಪುತರು ತಾವು  
ಬೇಟೆಯಾಡುತಲಿಹರು. ಭಾಲೆಗಳ ತೂರುತಲಿ  
ಹುಲಿಯ ನೆತ್ತರ ಹೀರಿ, ಸಿಂಹಗಳ ಸಂಹರಿಸಿ,  
ಕಾಡಾನೆಗಳ ಕೊಂದು, ಹರ್ಷೋನ್ಮಾದದಲಿ  
ಕೇಕೆ ಹಾಕುತಲಿಹರು. ಆ ಬಿಂಕ, ಆ ಕೆಚ್ಚು  
ಆ ಕ್ಷಾತ್ರತೇಜಗಳು ಭಾರತಕೆ ಇಂದೆಲ್ಲಿ !

(ಅ) ಮೇಲಿನ ಕವಿತೆಯನ್ನು ಸರಿಯಾಗಿ ಅನ್ನಲಿಕ್ಕೆ ಕಲಿಯಿರಿ. (ಆ) ಕವಿತೆಯಲ್ಲಿ ಯಾವ ಸಂದರ್ಭದ ವರ್ಣನೆ ಇದೆ ? (ಇ) ಕವಿತೆಯಲ್ಲಿಯ ವಿವರಗಳನ್ನು ನಿಮ್ಮ ಮಾತಿನಲ್ಲಿ ಸಂಕ್ಷೇಪವಾಗಿ ಬರೆಯಿರಿ.

## ೩ನೆಯ ಪ್ರಕರಣ

# ಉತ್ತರ ಭಾರತದಲ್ಲಿ ಮುಸಲ್ಮಾನ ಸತ್ತೆಯ ಸ್ಥಾಪನೆ

### ಘಜನಿಯ ಮಹಮೂದ ಹಾಗೂ ದಿಲ್ಲಿಯ ಪಠಾಣ ಅರಸರು.

**ಹಿನ್ನೆಲೆ :—** ಮುಹಮ್ಮದ ಬಿನ್ ಕಾಸಿಮನ ದಾಳಿಯಿಂದ ಸಿಂಧದೇಶವು ಮುಸಲ್ಮಾನರ ಕೈವಶವಾಯಿತಷ್ಟೆ. ಆದರೆ, ಬಳಿಕ ಸುಮಾರು ಮೂರು ಶತಮಾನಗಳ ವರೆಗೆ ಭಾರತದ ಯಾವ ಭಾಗದ ಮೇಲೂ ಮುಸಲ್ಮಾನರಿಂದ ಹೇಳಿಕೊಳ್ಳುವಂತಹ ದಾಳಿಗಳಾಗಲಿಲ್ಲ.[೧] ೧೧ನೆಯ ಶತಮಾನದ ಆದಿಯಿಂದ

೧. ಕಾಸಿಮನ ಅನಂತರ, ಮುಸಲ್ಮಾನರು ಭಡೋಚ, ಗುಜರಾತ, ಮಾಳವಾಗಳನ್ನು ಗೆಲ್ಲಲಿಕ್ಕೂ ದಕ್ಷಿಣಾಪಥದಲ್ಲಿ ಪ್ರವೇಶಿಸಲಿಕ್ಕೂ ಮಾಡಿದ ಪ್ರಯತ್ನಗಳು ವಿಫಲವಾದವು. ಪ್ರತಿಹಾರರ ನಾಗಭಟನು ಅವರನ್ನು ಉಜ್ಜಯಿನಿಯಿಂದ ಹೊಡೆದೋಡಿಸಿದನು. ಮಿಹಿರ ಭೋಜನ ಸಾಹಸದಿಂದ, ಕಚ್ಛದೇಶವೂ ಅವರ ಕೈವಶವಾಗಲಿಲ್ಲ (ಕ್ರಿ. ಶ. ೮೮೩ ರಲ್ಲಿ).

ಮಾತ್ರ ಅವು ಮತ್ತೆ ಆರಂಭವಾದವು. ಆದರೆ ಈ ಮುಸಲ್ಮಾನ ದಾಳಿಗಾರರು ವಾಯುವ್ಯದ ಶೀತಹವೆಯ ಗುಡ್ಡಗಾಡು ಪ್ರದೇಶಗಳಿಂದ ಭಾರತದಲ್ಲಿ ಒಳನುಗ್ಗಿದರು. ಇವರು ಅರಬರಿಗಿಂತ ಹೆಚ್ಚು ಭೀಕರ ಸ್ವರೂಪದ ದಾಳಿ ಮಾಡಿದರು. ಇವರಲ್ಲಿ ಘಜನೀ ಮಹಮೂದನೇ ಮೊದಲಿಗನು. ಅವನವು ಮಹತ್ತ್ವದ ದಾಳಿಗಳು. ಇವೇ ಮುಂದೆ ಉತ್ತರ ಭಾರತದಲ್ಲಿ ಮುಸಲ್ಮಾನ ರಾಜಸತ್ತೆಗೆ ಹಾದಿ ಮಾಡಿಕೊಟ್ಟವು. ಇದರ ವಿವರಗಳನ್ನು ಈ ಪ್ರಕರಣದಲ್ಲಿ ಕಾಣುವಿರಿ.

## ಘಜನೀ ಮಹಮೂದನು.

**ಹೆಚ್ಚಿನ ಅಭ್ಯಾಸಕ್ಕಾಗಿ :—**

[ಪೂರ್ವ ಪರಿಚಯ :– ೧೦ ನೆಯ ಶತಮಾನದಲ್ಲಿ ಬಗದಾದ ಖಲೀಫರ ಸಾಮ್ರಾಜ್ಯವು ಕುಗ್ಗಹತ್ತಿತು. ಅದರಲ್ಲಿ ಬೇರೆ ಬೇರೆ ಸ್ವತಂತ್ರ ರಾಜ್ಯಗಳುಂಟಾದವು. ಅಫಗಾನಿಸ್ತಾನವು ಅವುಗಳಲ್ಲೊಂದು. ಅಲಪ್ತಗೀನನೆಂಬ ತುರ್ಕ ಸರದಾರನೊಬ್ಬನು[೧] ಘಜನಿಯಲ್ಲಿ ರಾಜ್ಯ ಸ್ಥಾಪಿಸಿ ಸ್ವತಂತ್ರವಾಗಿ ಆಳಹತ್ತಿದನು(ಕ್ರಿ. ಶ. ೯೬೨ ರಲ್ಲಿ). ಬಳಿಕ, ಘಜನಿಯ ಆಳಿಕೆಯು ಅವನ ಗುಲಾಮನಾದ ಸುಬುಕ್ತಗೀನನ ಕೈಸೇರಿತು.[೨] ಇವನು ಗುಲಾಮನಾದರೂ ಅತಿಶಯ ಬುದ್ಧಿವಂತ, ಗಟ್ಟಿಗ. ತನ್ನ ರಾಜ್ಯ ಬೆಳೆಯಿಸಿದನು. ಆದರೆ ಇದರಲ್ಲಿ ಇವನಿಗೂ ಲಾಹೋರ ರಾಜ್ಯದ ಜಯಪಾಲನೆಂಬ ರಾಜನಿಗೂ ಹೋರಾಟಗಳಾದವು.[೩] ವಾಯುವ್ಯದಿಕ್ಕಿನಿಂದ ಭಾರತದ ದಾಳಿಗಾಗಿ ಪ್ರಯತ್ನಿಸಿದ ಮುಸಲ್ಮಾನರಲ್ಲಿ ಸುಬುಕ್ತಗೀನನೇ ಮೊದಲಿಗನು.[೪] ಮಹಮೂದನು ಸುಬುಕ್ತಗೀನನ ಮಗ. ತಂದೆಯ ಮರಣದ ಬಳಿಕ ಘಜನಿಯ ಪಟ್ಟವನ್ನೇರಿದನು.]

ಮಹಮೂದನು ಘಜನಿಯ ಪಟ್ಟವನ್ನೇರಿದ ಕೂಡಲೆ (ಕ್ರಿ. ಶ. ೯೯೮ ರಲ್ಲಿ) ಸುಲ್ತಾನನೆಂಬ ಪದವಿಯನ್ನು ಧರಿಸಿದನು. ಸುಲ್ತಾನನೆಂದರೆ ಸ್ವತಂತ್ರ ಅರಸನು. ಬಗದಾದ ಖಲೀಫನು ಅವನಿಗೆ ಅರಸೊತ್ತಿಗೆಯ ವಸ್ತ್ರಗಳನ್ನೂ

---

೧. ಇವನು ಮೊದಲಿಗೆ ಬುಖಾರಾದ ಅಮೀರನಲ್ಲಿ ಪ್ರತಿಹಾರ (ದ್ವಾರಪಾಲಕ) ನಿದ್ದನು.

೨. ಇವನು ಅಲಪ್ತಗೀನನ ಅಳಿಯನೂ ಅಹುದು. ಕ್ರಿ ಶ. ೯೭೭ ರಲ್ಲಿ.

೩. ಜಯಪಾಲನು ಬ್ರಾಹ್ಮಣಶಾಹೀ ಮನೆತನದವನು. ಅವನ ರಾಜ್ಯದಲ್ಲಿ ಈಗಿನ ಅಫಗಾನಿಸ್ತಾನದ ಕೆಲವು ಭಾಗವು ಸೇರ್ಪಡೆಯಾಗಿತ್ತು.

೪. ಆದರೆ ಅವನು ಸಿಂಧು ನದಿಯನ್ನು ದಾಟಿ ಬರಲಿಲ್ಲ.

'**ಧರ್ಮಸಂರಕ್ಷಕ**' ಮುಂತಾದ ಬಿರುದುಗಳನ್ನು ಕಳಿಸಿದನು. ಮಹಮೂದನು ಮೊದಲೇ ಮುಸಲ್ಮಾನ ಮತದ ಕಟ್ಟಾಭಿಮಾನಿ. ಈಗಂತೂ ಕೇಳುವದೇನು? ಅವನು ನಾಸ್ತಿಕರ[1] ವಿರುದ್ಧ 'ಧರ್ಮಯುದ್ಧ' ಹೂಡುವ ಸಂಕಲ್ಪ ಮಾಡಿದನಂತೆ. ಇದಕ್ಕಾಗಿಯೇ ಅವನು ಭಾರತದ ಮೇಲೆ ದಾಳಿಗಳನ್ನು ಕೈಕೊಂಡನೆಂದೂ ಹೇಳಲಾಗುತ್ತದೆ! ಆದರೆ ಇತ್ತೀಚಿನ ಅಭಿಪ್ರಾಯವು ಬೇರೆಯಾಗಹತ್ತಿದೆ. ಅದೇನೆಂದರೆ, "ಮಹಮೂದನು ಧರ್ಮಪ್ರಸಾರಕನಲ್ಲ. ಭಾರತದ ದಾಳಿಗಳಲ್ಲಿ, ಗೆಲವು, ಕೀರ್ತಿ ಮತ್ತು ಸುಲಿಗೆ ಇವುಗಳ ಗಳಿಕೆಯೇ ಅವನ ಉದ್ದೇಶವಿತ್ತು. ಅವನಲ್ಲಿ ತನ್ನದೊಂದು ಸಾಮ್ರಾಜ್ಯ ಕಟ್ಟುವ ಹಿರಿಯಾಸೆಯಿತ್ತು.[2]"



ಘಜನಿಯ ಸುಲ್ತಾನ ಮಹಮೂದನು.

**ಅಂದಿನ ಭಾರತದ ಪರಿಸ್ಥಿತಿ :—** ಬೌದ್ಧರು ಕ್ರಮೇಣ ಹಿಂದು ಧರ್ಮದಲ್ಲಿ ಕೂಡಿಕೊಂಡಿದ್ದರು. ಆದುದರಿಂದ ಹಿಂದು ಧರ್ಮಕ್ಕೆ ಹೊಸಕಳೆ ಏರಿತ್ತು. ವ್ಯಾಪಾರವು ಚೆನ್ನಾಗಿ ನಡೆದಿತ್ತು. ದೇಶದಲ್ಲಿ ಧನ–ಸಮೃದ್ಧಿ ಇತ್ತು. ಆದರೆ ನಾಲ್ಕೈದು ಶತಮಾನಗಳ ಶಾಂತತೆಯ ಪರಿಣಾಮವಾಗಿ, ಜನರಲ್ಲಿ ಭಾರತವು ಏಕದೇಶವೆಂಬ ಭಾವನೆಯು ಮರೆತುಹೋಗಿತ್ತು. ರಾಜಪುತರಾಜರಂತೂ ಮದಾಂಧರಾಗಿದ್ದರು. ಒಳಜಗಳಗಳಲ್ಲಿ ತೊಡಗಿದ್ದರು. ದಕ್ಷಿಣದಲ್ಲಿ ಮಾತ್ರ ದೇಶಾಭಿಮಾನವುಳ್ಳ ಪ್ರಬಲ ರಾಜ್ಯಗಳಿದ್ದವು.[3]

**ಮಹಮೂದನ ದಾಳಿಗಳು** (ಕ್ರಿ. ಶ. ೧೦೦೧–೧೦೨೭) :— ಮೇಲಿನ ಅವಧಿಯಲ್ಲಿ ಮಹಮೂದನು ಭಾರತದಲ್ಲಿ ೧೭ (?) ಸಲ ದಾಳಿ ಮಾಡಿದನು. ಈ ದಾಳಿಗಳ

೧. ಮುಸಲ್ಮಾನರಲ್ಲದ (ಏಕೆಂದರೆ, ಮುಸಲ್ಮಾನರ ವಿಚಾರದಮೇರೆಗೆ, ಇಸ್ಲಾಂ ಧರ್ಮದಲ್ಲಿ ವಿಶ್ವಾಸವಿಲ್ಲದ) ವರೆಲ್ಲ ನಾಸ್ತಿಕರು.

೨. ಮಹಮೂದನ ದಾಳಿಗಳು ಹೆಚ್ಚುಸಲ ಸ್ವಪ್ರಯೋಜನಕ್ಕಾಗಿ (ತುರ್ಕಸಾಮ್ರಾಜ್ಯದ ತಳಹದಿಯನ್ನು ಗಟ್ಟಿಮಾಡಿ ಬಲಪಡಿಸುವದಕ್ಕಾಗಿ) ಕೈಕೊಂಡ ದಾಳಿಗಳೆಂದು ಶ್ರೀ. ಹುಮಾಯೂನ ಕಬೀರ ಅವರು ತಮ್ಮ ಗ್ರಂಥದಲ್ಲಿ ಅಭಿಪ್ರಾಯಪಟ್ಟಿರುವರು.

೩. ಚೋಳ, ಪಾಂಡ್ಯ ಮುಂತಾದವು.

ಪಲ್ಲವಿಯೆಲ್ಲ ಒಂದೇ—ರಕ್ತಪಾತ, ದೇವಾಲಯಗಳ ನಾಶ, ಅಪಹಾರ, ಲೂಟಿ, ಜನರ ಧರ್ಮಾಂತರ! ಲಾಹೋರ, ನಾಗರಕೋಟಿ, ಮುಲ್ತಾನ, ಠಾಣೇಶ್ವರ, ಸೋಮನಾಥಗಳು ಇವನ ದಾಳಿಗಳಿಗೆ ತುತ್ತಾದವು. ಪಂಜಾಬ ಸಿಂಧದೇಶಗಳು




ಘಜನೀ ಮಹಮೂದನ ದಾಳಿಗಳು

ಇವನ ಸ್ವಾಧೀನವಾದವು. ಮುಸಲ್ಮಾನರ ಮಿತಿಮೀರಿದ ಮತಾಭಿಮಾನ, ಅವರ ಮಿಂಚಿನ ಯುದ್ಧಕಲೆ ಮತ್ತು (ಉತ್ತರ) ಭಾರತೀಯರಲ್ಲಿಯ ರಾಷ್ಟ್ರಾಭಿಮಾನದ

ಅಭಾವ-ಇವೇ ಮಹಮೂದನ ವಿಜಯಕ್ಕೆ ಕಾರಣಗಳೆಂದು ಹೇಳಬಹುದು. ಆದರೂ ಹಿಂದುಗಳು ಇವನನ್ನು ಮೂರು ಸಲ ಬಲವಾಗಿ ಎದುರಿಸಿದರು.

**ಮುಖ್ಯ ದಾಳಿಗಳು :—**

೧. ಕ್ರಿ. ಶ. ೧೦೦೧ ರಲ್ಲಿ ಲಾಹೋರ (ಪಂಜಾಬ) ದ ಅರಸನಾದ ಜಯಪಾಲನು ಇವನನ್ನು ಎದುರಿಸಿದನು. ಪೇಶಾವರದಲ್ಲಿ ತುಮುಲ ಯುದ್ಧವಾಯಿತು. ಜಯಪಾಲನು ಸೋತು ಸೆರೆಸಿಕ್ಕನು. ಎರಡೂವರೆ ಲಕ್ಷ ದೀನಾರ್[1] ಗಳನ್ನೂ ಎಷ್ಟೋ ಆನೆಗಳನ್ನೂ ಅವನು ಸುಲ್ತಾನನಿಗೆ ಅರ್ಪಿಸಬೇಕಾಯಿತು. ಪೇಶಾವರ, ಓಹಿಂದಗಳು ಜಯಪಾಲನ ಕೈಬಿಟ್ಟವು. ಅವಮಾನದಿಂದ ಜಯಪಾಲನು ಬೆಂಕಿಯಲ್ಲಿ ಹಾರಿ ಪ್ರಾಣಬಿಟ್ಟನು. ಜಯಪಾಲನ ಸೈನ್ಯವು ಪ್ರಚಂಡವಿತ್ತು.[2]

೨. ಕ್ರಿ. ಶ. ೧೦೦೮ ರಲ್ಲಿ ಮಹಮೂದನು ಲಾಹೋರದ ಮೇಲೆ ಮತ್ತೆ ದಂಡೆತ್ತಿ ಬಂದನು. ಆಗ ಆನಂದಪಾಲನು (ಜಯಪಾಲನ ಮಗ) ಇವನನ್ನು ಎದುರಿಸಲು ರಾಜಪುತರಾಜರನ್ನೆಲ್ಲ ಹುರಿದುಂಬಿಸಿದನು. ಭಾರತದ ಧರ್ಮ, ಸಂಸ್ಕೃತಿ, ಸ್ವಾತಂತ್ರ್ಯಗಳ ಸಂರಕ್ಷಣೆಗಾಗಿ ಅವರೆಲ್ಲ ಒಂದಾದರು. 'ಗೆಲ್ಲುವೆವು ಇಲ್ಲವೆ ಮಡಿಯುವೆವು,' ಎಂದು ಗಂಗಾಜಲದ ಸಾಕ್ಷಿಯಾಗಿ ಆಣೆ ಮಾಡಿದರು! ಸ್ತ್ರೀಯರು ತಮ್ಮ ವಸ್ತ್ರ ಒಡವೆಗಳನ್ನು ಮಾರಿ ಸೈನ್ಯಕ್ಕೆ ಧನ ಸಹಾಯ ಮಾಡಿದರು. ಕಡುಬಡವರೂ ತಮ್ಮ ಅಳಿಲು-ಸೇವೆ ಸಲ್ಲಿಸಿದರು. ರಾಜಪುತರ ವೀರಾವೇಶವನ್ನು ಕಾಳಗದಲ್ಲಿ ಕಂಡು ಮಹಮೂದನು ಬೆರಗಾದನು. ಅವನ ಸೈನಿಕರು ಭೀತಿಗೊಂಡರು. ಆದರೆ, ಅಷ್ಟರಲ್ಲಿ ಆನಂದಪಾಲನ ಆನೆಗೆ ಬಾಣ ನಟ್ಟು ಅದು ರಣಾಂಗಣದಿಂದ ಓಡಹತ್ತಿತು. ಅದನ್ನು ಕಂಡ ಅವನ ಸೈನಿಕರು ತಮಗೆ ಸೋಲಾಯಿತೆಂದು ಭಾವಿಸಿದರು; ಪಲಾಯನ ಮಾಡಿದರು! ಸುಲ್ತಾನನು ಜಯಶಾಲಿಯಾದನು.

೩. ಕ್ರಿ. ಶ. ೧೦೨೫ ರಲ್ಲಿ ಮಹಮೂದನು ಸೋಮನಾಥವನ್ನು[3] ಮುತ್ತಿದನು. ಹಿಂದುಗಳು ಕಲಿತನದಿಂದ ಕಾದಿದರೂ ಜಯವಾಗಲಿಲ್ಲ. ಮಹಮೂದನು ಆವೇಶದಿಂದ ಸೋಮನಾಥನ ಗುಡಿಯೊಳಗೆ ನುಗ್ಗಿದನು.

---

೧. ಇದು, ಆ ಕಾಲದ ಬಂಗಾರದ ನಾಣ್ಯ. ಅದರ ಬೆಲೆ, ೮-೧೦ ರೂಪಾಯಿಗಳು.

೨. ೩೦೦ ಆನೆಗಳು; ೧೨,೦೦೦ ರಾವುತರು, ೩೦,೦೦೦ ಕಾಲಾಳುಗಳು.

೩. ಇದು ಸೌರಾಷ್ಟ್ರ (ಕಾಥೇವಾಡ) ದಲ್ಲಿದೆ. ಇಲ್ಲಿಯ ದೇವಾಲಯಕ್ಕೆ ೧೦,೦೦೦ ಹಳ್ಳಿಗಳ ಉಂಬಳಿಯಿತ್ತು!

ಅಲ್ಲಿ ವಜ್ರಕೆತ್ತಿದ ೫೬ ಕಂಬಗಳು! ಚೊಕ್ಕ ಚಿನ್ನದ ಬಲವಾದ ಸರಪಳಿಗಳು! ಗರ್ಭಗುಡಿಯಲ್ಲಿ ದೊಡ್ಡ ಸೋಜಿಗ—ಯಾವ ಆಸರವೂ ಇಲ್ಲದೆ (ಬರೀ ಅಂತ ರಾಳದಲ್ಲಿ) ನಿಂತ ಈಶ್ವರಲಿಂಗ!![೧] ಅರ್ಚಕರು, "ಇಲ್ಲಿದ್ದ ಚಿನ್ನ ಮುತ್ತು ರತ್ನ ಗಳನ್ನೆಲ್ಲ ತೆಗೆದುಕೊ. ವಿಗ್ರಹವನ್ನು ಒಡೆಯಬೇಡ" ಎಂದು ಅಂಗಲಾಚಿ ಬೇಡಿಕೊಂಡರಂತೆ. ಆದರೆ, ಮಹಮೂದನು "ನಾನು ವಿಗ್ರಹ ಮಾರು



ಸೋಮನಾಥ ದೇವಾಲಯ

ವವನಲ್ಲ. ವಿಗ್ರಹ ಭೇದಕ ಎಂದು ಹೇಳಿದನಂತೆ. ಬಳಿಕ ಮೂರ್ತಿಯನ್ನೊಡೆದು, ಅಲ್ಲಿದ್ದ ಸಂಪತ್ತನ್ನೆಲ್ಲ ಅವನು ಲೂಟಿಮಾಡಿಕೊಂಡು ಹೋದನು. ಆದರೆ, ಮರಳಿ ಹೋಗುವಾಗ ರಾಜಪುತಸ್ಥಾನದ ಮರಳುಗಾಡಿನಲ್ಲಿ ಜಾಟರು ಅವನ ಸೈನ್ಯದಮೇಲೆ ಬಿದ್ದರು. ಅವನಿಗೆ ಅಪಾರ ಹಾನಿಯನ್ನುಂಟುಮಾಡಿದರು.

ಕ್ರಿ. ಶ. ೧೦೨೭ ರಲ್ಲಿ ಮಹಮೂದನು ಕೊನೆಯದಾಗಿ ಬಂದು ಜಾಟರ ಮೇಲೆ ಸೇಡು ತೀರಿಸಿಕೊಂಡು ಹೋದನು. ಮುಂದೆ ಸುಮಾರು ೧೬೦ ವರುಷ ಗಳಿಗೆ ಮೇಲ್ಪಟ್ಟು, ಭಾರತದ ಮೇಲೆ ಪರದಾಳಿಗಳಾಗಲಿಲ್ಲ. ಪಂಜಾಬದ ಈಚೆಗೆ ತುರ್ಕರ ರಾಜ್ಯ ಹಬ್ಬಲಿಲ್ಲ.

**ಸುಲ್ತಾನ ಮಹಮೂದನ ಯೋಗ್ಯತೆ:**— ಇವನು ಭಾರತದಲ್ಲಿ ಕ್ರೂರನಾದನು; ಪರಪೀಡಕನಾದನು. ಆದರೆ, ಘಜನಿಯಲ್ಲಿ ಇವನು ಪರಮ ದಯಾಳು, ದಾನಶೂರ, ನ್ಯಾಯಬುದ್ಧಿಯುಳ್ಳವನು. ತನಗೆ ಓದು-ಬರೆಹ ಬಾರ

೧. ಇಲ್ಲಿಯ ಈಶ್ವರಲಿಂಗವು ೧೨ ಜ್ಯೋತಿರ್ಲಿಂಗಗಳಲ್ಲಿ ಒಂದು.

ದಿದ್ದರೂ ವಿದ್ಯಾಭಿಮಾನಿ, ಕಲಾಪ್ರೇಮಿ. ವರಕವಿಗಳಿಗೂ ಪಂಡಿತರಿಗೂ ಇವನ ಆಸ್ಥಾನದಲ್ಲಿ ಆಶ್ರಯವಿತ್ತು.[೧] ಮಹಾಕವಿ ಫಿರ್ದೂಶಿಯ 'ಶಹಾನಾಮಾ' ಎಂಬ ಅಮರಕಾವ್ಯದಿಂದ ಮಹಮೂದನೂ ಅಮರನಾಗಿರುವನು. ಅಲ್‌ಬೆರೂನಿಯು ಗಣಿತಶಾಸ್ತ್ರಜ್ಞ ಮತ್ತು ತತ್ವಜ್ಞಾನಿಯು. ಅವನು ಜ್ಯೋತಿಷಿಯೂ ಅಹುದು! ಅವನು ಮಹಮೂದನೊಡನೆ ಭಾರತದಲ್ಲಿ ಸಂಚರಿಸಿ, ಆ ಕಾಲದ ಸ್ಥಿತಿಗತಿಯನ್ನು ವರ್ಣಿಸಿದ್ದಾನೆ. ಇಸ್ಲಾಂ ಮತ್ತು ಹಿಂದು ಸಂಸ್ಕೃತಿಗಳ ಸಮನ್ವಯವೇ (ಅವುಗಳನ್ನು ಮೇಳಗೂಡಿಸುವದೇ) ಅಲ್‌ಬೆರೂನಿಯ ಗುರಿಯಾಗಿತ್ತು.

ಘಜನೀ ಮಹಮೂದನು ಭಾರತೀಯ ಶಿಲ್ಪಿಗರಿಂದ ಘಜನಿಯಲ್ಲಿ ಭವ್ಯವಾದ ಕಟ್ಟಡಗಳನ್ನು ನಿರ್ಮಿಸಿದನು.[೨] ವಾಚನಾಲಯ, ವಸ್ತುಸಂಗ್ರಹಾಲಯ, ವಿಶ್ವವಿದ್ಯಾಲಯಗಳಿಂದ ಇವನು ಜನರಲ್ಲಿ ವಿದ್ಯಾಭಿರುಚಿ, ಕಲಾಭಿಮಾನಗಳನ್ನು ಬೆಳೆಯಿಸಿದನು.

ಸುಲ್ತಾನ ಮಹಮೂದನು ಸುಮಾರು ೩೨ ವರ್ಷ ದರ್ಪದಿಂದ ರಾಜ್ಯವಾಳಿ ಕ್ರಿ. ಶ. ೧೦೩೦ ರಲ್ಲಿ ಮರಣಹೊಂದಿದನು. ಆಗ ಅವನ ವಯಸ್ಸು ೫೯ ವರುಷ.

## ದಿಲ್ಲಿಯ ಪಠಾಣ ಅರಸರು

### ದಿಲ್ಲಿಯ ಪಠಾಣ ಅರಸರ ಆಳಿಕೆಯು ಪ್ರಾರಂಭವಾದ ಬಗೆ :—

ಘಜನೀ ಮಹಮೂದನ ತರುವಾಯ, ಅವನ ಮನೆತನದ ಅರಸರು ಬರಬರುತ್ತ ದುರ್ಬಲರಾದರು. ಅಫಗಾನಿಸ್ತಾನದ 'ಘೋರ'[೩] ಎಂಬ ಚಿಕ್ಕದೊಂದು ಪ್ರಾಂತದ ಸರದಾರನು ಮೊದಲಿಗೆ ಸುಲ್ತಾನ ಮಹಮೂದನ ಸಾಮಂತರಾಜನಾದರೂ ಅವನ ಸಂತತಿಯವರು ಘಜನಿಯ ಕೊನೆ ಕೊನೆಯ ದುರ್ಬಲ ಅರಸರನ್ನು ಗೌರವಿಸಲಿಲ್ಲ. ಅದಕ್ಕಾಗಿಯೆ ಅವರಲ್ಲಿ ಪರಸ್ಪರ ಕಲಹಗಳುಂಟಾದವು. ಕೊಲೆ ಸುಲಿಗೆಗಳು ನಡೆದವು. ಕೊನೆಗೆ, 'ಘೋರ' ದ ಪಟ್ಟದ ಮೇಲೆ ಕುಳಿತ ಘಿಯಾಸುದ್ದೀನನೆಂಬವನು ಘಜನಿಯ ರಾಜ್ಯವನ್ನು ಸಂಪೂರ್ಣವಾಗಿ ವಶಪಡಿಸಿಕೊಂಡನು. ಆದರೆ ಅದರ ಆಡಳಿತವನ್ನು ತಮ್ಮನಾದ '**ಶಹಾಬುದ್ದೀನ**' ನಿಗೊಪ್ಪಿಸಿದನು. ಅವನೇ ಇತಿಹಾಸದಲ್ಲಿ "**ಮುಹಮ್ಮದ**

೧. ಇವನ ಒಡ್ಡೋಲಗದಲ್ಲಿ ೪೦೦ ಜನ ಕವಿಗಳಿದ್ದರಂತೆ !

೨. "ಉರೂ ಸುಲತ್ತಾಮ" ಎಂಬ ಹೆಸರಿನ ಮನೋಹರವಾದ ಮಸೀದೆಯು ಇವುಗಳಲ್ಲೊಂದು.

೩. ಇದು ಘಜನಿ ಮತ್ತು ಹಿರಾತ ಇವುಗಳ ನಡುವಿನ ಗುಡ್ಡಗಾಡಿನ ಪ್ರದೇಶ. ಇಲ್ಲಿಯ ಅರಸುಮನೆತನದವರೇ ಇತಿಹಾಸದಲ್ಲಿ ಘೋರೀ ಮನೆತನದ ಅರಸರೆಂದು ಪ್ರಸಿದ್ಧರಿರುವರು.

ಘೋರಿ "ಯೆಂದು ಪ್ರಸಿದ್ಧನಿರುವನು. ಭಾರತವನ್ನು ಗೆದ್ದು ಅಲ್ಲಿ ಇಸ್ಲಾಂ ಪತಾಕೆಯು ಮೆರೆಯುವಂತೆ ಮಾಡಬೇಕೆಂದು ಇವನ ಸಂಕಲ್ಪವಿತ್ತು. ಅದಕ್ಕಾಗಿ ಇವನೂ ಸುಲ್ತಾನ ಮಹಮೂದನಂತೆ ಭಾರತದಲ್ಲಿ ಮೇಲಿಂದಮೇಲೆ[1] ದಾಳಿಗಳನ್ನು ಮಾಡಿದನು. ಉತ್ತರ ಭಾರತದ ಪ್ರದೇಶಗಳನ್ನು ಗೆದ್ದನು. ದಿಲ್ಲಿಯೂ ಇವನ ಕೈವಶವಾಯಿತು. ಅಷ್ಟೇ ಅಲ್ಲ; ಪಠಾಣ ಅರಸರು ದಿಲ್ಲಿಯನ್ನೇ ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಭಾರತದಲ್ಲಿ ರಾಜ್ಯಭಾರ ಮಾಡತೊಡಗಿದರು.



ಮುಹಮ್ಮದ ಘೋರಿ

**ಉತ್ತರ ಭಾರತದಲ್ಲಿ ರಾಜಕೀಯ ಪರಿಸ್ಥಿತಿ:—** ಆಗಿನ ರಾಜಪುತ ರಾಜ್ಯಗಳಲ್ಲಿ




ಮುಹಮ್ಮದ ಘೋರಿಯು ಭಾರತದಲ್ಲಿ ಗೆದ್ದ ರಾಜ್ಯ

೧. ಏಳು ಸಲ.

ಎರಡು ಮೂರು ರಾಜ್ಯಗಳು ಮಾತ್ರ ಪ್ರಬಲವಿದ್ದವು. ಅಜಮೀರ ರಾಜ್ಯವು ಚವ್ಹಾಣಮನೆತನದ ಪೃಥ್ವೀರಾಜನ ಒಡೆತನದಲ್ಲಿತ್ತು. ದಿಲ್ಲಿಯ ತೋಮರ ಮನೆತನದ ಅನಂಗಪಾಲನಿಂದ ಆ ರಾಜ್ಯವೂ ಇವನ ಪಾಲಿಗೆ ಬಂದಿತ್ತು. ಏಕೆಂದರೆ, ಅನಂಗಪಾಲನಿಗೆ ಗಂಡುಮಕ್ಕಳಿರಲಿಲ್ಲ. ಪೃಥ್ವೀರಾಜನು ಅವನ ಮೊಮ್ಮಗ (ಮಗಳ ಮಗ). ಕನೋಜದಲ್ಲಿ ರಾಠೋರ (ರಾಠೋಡ) ಮನೆತನದ ಜಯಚಂದ (ಜಯಚ್ಚಂದ್ರ) ನು ರಾಜನಾಗಿದ್ದನು. ಇವನೂ ಅನಂಗ-ಪಾಲನ ಮೊಮ್ಮಗನೇ.[೧] ಆದುದರಿಂದ ತನಗೇಕೆ ದಿಲ್ಲಿಯ ರಾಜ್ಯವು ದೊರೆಯಬಾರದೆಂದು ಇವನು ಪೃಥ್ವೀರಾಜನ ಮೇಲೆ ಕೋಪಗೊಂಡನು. ಈ ರೀತಿಯಾಗಿ, ಪೃಥ್ವೀರಾಜ ಮತ್ತು ಜಯಚಂದ ಇವರಲ್ಲಿ ಮಧುರಬಾಂಧವ್ಯ ಉಳಿಯಲಿಲ್ಲ. ಮುಂದೆ ಜಯಚಂದನ ಮಗಳಾದ ಸಂಯುಕ್ತೆಯು ತಂದೆಯ ಮನಸ್ಸಿನ ವಿರೋಧವಾಗಿ ಪೃಥ್ವೀರಾಜನನ್ನೇ (ಸ್ವಯಂವರ ಪದ್ಧತಿಯಿಂದ ವರಿಸಿ) ಮದುವೆಯಾದಳು ![೨]



ಪೃಥ್ವೀರಾಜ

ಇದರಿಂದಂತೂ ಜಯಚಂದನು ಪೃಥ್ವೀರಾಜನ ಕಡು ವೈರಿಯಾದನು. ಇವರಿಬ್ಬರ ನಡುವಿನ ಹಗೆತನವೇ ಮುಹಮ್ಮದ ಘೋರಿಗೆ ಭಾರತದ ಮೇಲೆ ದಾಳಿಗಾಗಿ ಬರಲಿಕ್ಕೆ ಔತಣವಾಯಿತು.

೧. ಅನಂಗಪಾಲನ ಮತ್ತೊಬ್ಬ ಮಗಳ ಮಗ.

೨. ಕತೆ :—

ಅನಂಗಪಾಲನು ಸಂಯುಕ್ತೆಯ ಸ್ವಯಂವರವನ್ನು ಸಾರಿ, ಆದಕ್ಕೆ ಬರಲು ಪೃಥ್ವೀರಾಜನಿಗೆ ಔತಣ ಕಳಿಸಲಿಲ್ಲ. ಅವನ ಗೊಂಬೆಯನ್ನು ದ್ವಾರಪಾಲಕನಂತೆ ಸ್ವಯಂವರ ಮಂಟಪದ ಬಾಗಿಲಲ್ಲಿ ನಿಲ್ಲಿಸಿದ್ದನಂತೆ. ಸಂಯುಕ್ತೆಯು ಸ್ವಯಂವರ ಮಂಟಪದಲ್ಲಿ

**ಘೋರೀ ಮುಹಮ್ಮದನ ದಾಳಿಗಳು (ಕ್ರಿ. ಶ. ೧೧೭೫–೧೨೧೬) :—**
ಘೋರೀ ಮುಹಮ್ಮದನು ಕ್ರಿ. ಶ. ೧೧೯೧ ರಲ್ಲಿ ದಿಲ್ಲಿಯ ಮೇಲೆ ಸಾಗಿ ಬಂದನು. ಆದರೆ, ಈ ಮೊದಲೆ ಅವನು ಮುಲ್ತಾನ, ಊಚಾ, ಪೇಶಾವರ, ಸಿಂಧ, ಲಾಹೋರ ಇವುಗಳ ಮೇಲೆ ದಾಳಿಮಾಡಿ ಅವುಗಳನ್ನು ತನ್ನ ಕೈವಶ ಮಾಡಿಕೊಂಡಿದ್ದನು. ಗುಜರಾತದ ದಾಳಿಯಲ್ಲಿ ಮಾತ್ರ ಅವನಿಗೆ ಉಗ್ರ ವಾದ ಸೋಲುಂಟಾಗಿತ್ತು.[೧]

**ದಿಲ್ಲಿಯ ದಾಳಿ:—** ಮುಹಮ್ಮದ ಘೋರಿಯು ದೊಡ್ಡ ಸೈನ್ಯ ದೊಂದಿಗೆ ದಿಲ್ಲಿಯ ಮೇಲೆ ಸಾಗಿಬಂದನು. ಆದರೆ ಪೃಥ್ವೀರಾಜನು ಅಂಜ ಲಿಲ್ಲ. ಅವನು ಮಹಾಪ್ರತಾಪಶಾಲಿ. ಅವನ ಸೇನೆ, ಪ್ರಚಂಡ ಸೇನೆ.[೨] ಅವನು, 'ತರಾಯಣ' ಎಂಬಲ್ಲಿ ಸುಲ್ತಾನನನ್ನು ಎದುರಿಸಿದನು. ನಿಕರದ ಕಾಳಗವೆಸಗಿತು.[೩] ರಾಜಪುತರ ವೀರಾವೇಶಕ್ಕೆ ಮುಸಲ್ಮಾನರು ಭಯ ಭೀತರಾದರು. ಅಷ್ಟರಲ್ಲಿಯೇ ಸುಲ್ತಾನನ ತೋಳಿಗೆ ತೀವ್ರ ಗಾಯವಾಯಿತು. ಅವನು, ಅದು ಹೇಗೋ, ರಣಾಂಗಣದಿಂದ ಪಾರುಮಾಡಲ್ಪಟ್ಟನು. ಅವನ ಸೈನಿಕರು ಹೌಹಾರಿ ದಿಕ್ಕಾಪಾಲಾಗಿ ಓಡಿಹೋದರು. ಅತಿಪ್ರಯಾಸದಿಂದ ಸುಲ್ತಾನನು ತನ್ನ ಅಳಿದುಳಿದ ಸೈನ್ಯದೊಂದಿಗೆ ಅಫಗಾನಿಸ್ತಾನವನ್ನು ತಲುಪಿ ದನು. ಆದರೆ ಅವನು ತನಗಾದ ಅವಮಾನವನ್ನು ಮರೆಯಲಿಲ್ಲ. ರೊಚ್ಚಿ ನಿಂದ ಮರುವರುಷವೆ, ಹೊಸ ಸೈನ್ಯದೊಡನೆ ಮತ್ತೆ ದಿಲ್ಲಿಯಮೇಲೆ ಸಾಗಿ ಬಂದನು. ಈ ಸಾರೆ ಅವನ ಸೈನ್ಯವು ಹೆಚ್ಚು ದೊಡ್ಡದೂ ಹೆಚ್ಚು ಸುಸಜ್ಜಿ ತವೂ ಇದ್ದಿತು. ಇತ್ತ ಪೃಥ್ವೀರಾಜನೂ ಕಾಳಗಕ್ಕೆ ಅಣಿಯಾದನು. ಹಿಂದು- ಧರ್ಮ-ಸಂರಕ್ಷಣೆಗಾಗಿ ಸಿದ್ಧರಾಗಬೇಕೆಂದು ರಾಜಪುತ ರಾಜರಿಗೆ ಪತ್ರಗಳನ್ನು ಬರೆದನು. ರಾಜಪುತರನ್ನೆಲ್ಲ ಹುರಿದುಂಬಿಸಿದನು. ಕನೋಜದ ಜಯಚಂದನ

---

ಹುಡುಕುತ್ತ ಸಾಗಿ ಪೃಥ್ವೀರಾಜನ ಗೊಂಬೆಗೇ ಮಾಲೆ ಹಾಕಿದಳು. ಅಲ್ಲಿಯೇ ಅವಿತು ಕೊಂಡಿದ್ದ ಪೃಥ್ವೀರಾಜನು ಕೂಡಲೇ ಆಕೆಯನ್ನು ಕುದುರೆಯ ಮೇಲೆ ಕುಳ್ಳಿರಿಸಿ ಕೊಂಡು ಓಡಿಹೋದನು.

೧. ಕ್ರಿ. ಶ. ೧೧೭೮

೨. ಮೂರು ಸಾವಿರ ಗಜಬಲ; ಎರಡು ಲಕ್ಷ ಅಶ್ವಬಲ; ಲೆಕ್ಕವಿಲ್ಲದಷ್ಟು ಕಾಲಾಳುಗಳು.

೩. ಕ್ರಿ. ಶ. ೧೧೯೧ ರಲ್ಲಿ.

ಹೊರತಾಗಿ ಎಲ್ಲ ರಾಜರೂ ಒಟ್ಟು ಗೂಡಿ ಯುದ್ಧಕ್ಕೆ ಅಣಿಯಾದರು.[೧] "ಮುಸಲ್ಮಾನರನ್ನು ಗೆಲ್ಲುವೆವು, ಇಲ್ಲವೇ ಸ್ವಧರ್ಮಕ್ಕಾಗಿ ರಣಾಂಗಣದಲ್ಲಿ ಮಡಿಯುವೆವು" ಎಂದು ಪ್ರತಿಜ್ಞೆ ಮಾಡಿದರು. ಮತ್ತೊಮ್ಮೆ 'ತರಾಯಣ' ದಲ್ಲಿಯೇ ಕಾಳಗವೆಸಗಿತು.[೨] ಆದರೆ ಈ ಸಲ ವಿಜಯಲಕ್ಷ್ಮಿಯು ರಾಜ ಪುತರಿಗೆ ಒಲಿಯಲಿಲ್ಲ. ಸುಲ್ತಾನನು ಪೃಥ್ವೀರಾಜನನ್ನು ಸೋಲಿಸಿ ಸೆರೆ ಹಿಡಿದು ಕೊಂದನು. ಎಷ್ಟೋ ರಾಜಪುತ ಶೂರರು ಕಾಳಗದಲ್ಲಿ ಮಡಿದರು. ದಿಲ್ಲಿಯು ಸುಲ್ತಾನನ ಕೈವಶವಾಯಿತು.

ಬಳಿಕ ಮುಹಮ್ಮದನು ಅಜಮೀರದಮೇಲೆ ಸಾಗಿಹೋಗಿ ಅದನ್ನು ಸುಲಿದನು. ಅಲ್ಲಿಯ ದೇವಾಲಯಗಳು ಮಸೀದೆಗಳಾಗಿ ಪರಿಣಮಿಸಿದವು.

ಸುಲ್ತಾನನು ಘಜನಿಗೆ ತೆರಳುವ ಮುಂಚೆ, ತನ್ನ ಪ್ರೀತಿಯ ಗುಲಾಮ ನಾದ ಕುತ್ಬುದ್ದೀನ (ಕುತುಬುದ್ದೀನ) ಐಬಕನನ್ನು ತನ್ನ ಪ್ರತಿನಿಧಿಯೆಂದು ಭಾರತದಲ್ಲಿ ಬಿಟ್ಟು ಹೋದನು. ತನಗೆ ದಿಲ್ಲಿಯ ಪಟ್ಟ ದೊರೆಯಬಹುದೆಂದು ಬಗೆದ ಜಯಚಂದನಿಗೆ ಸುಲ್ತಾನನ ಈ ಕಾರ್ಯದಿಂದ ನಿರಾಶೆಯಾಯಿತು.

ಅತ್ತ ಸುಲ್ತಾನನಾದರೋ, ಜಯಚಂದನಿರುವವರೆಗೆ ಭಾರತದಲ್ಲಿ ಮುಸಲ್ಮಾನರ ಪ್ರಭುತ್ವಕ್ಕೆ ಉಳಿಗಾಲವಿಲ್ಲೆಂದು ಬಗೆದನು. ಆದುದರಿಂದ, ಅವನು ಮತ್ತೊಮ್ಮೆ ಬಂದು ಕನೋಜವನ್ನು ಮುತ್ತಿದನು.[೩] ಜಯಚಂದನು ಸೋತು ಗಂಗಾನದಿಯಲ್ಲಿ ಬಿದ್ದು ಪ್ರಾಣಬಿಟ್ಟನು.[೪] ಬಳಿಕ ಸುಲ್ತಾನನು ಕಾಶೀ ಪಟ್ಟಣವನ್ನು ಸುಲಿದನು.

**ಬಿಹಾರ, ಬಂಗಾಲಗಳಲ್ಲಿ (ತುರ್ಕೀ) ಮುಸಲ್ಮಾನರ ರಾಜ್ಯ :—**

ಕುತ್ಬುದ್ದೀನನು ಗ್ವಾಲ್ಹೇರ, ಅನಹಿಲವಾಡ (ಗುಜರಾತ), ಕಾಲ್ಪಿ, ಕಲಿಂಜರ (ಬುಂದೇಲಖಂಡ) ಗಳನ್ನು ಕೈವಶಪಡಿಸಿಕೊಂಡನು. **ಮುಹಮ್ಮದ ಬಿನ್ ಬಖ್ತಿಯಾರ ಖಿಲ್ಜಿ** ಎಂಬ ಅವನ ತುರ್ಕ-ಸೇನಾಪತಿಯು ಉತ್ತರ ಬಿಹಾರ, ಅಯೋಧ್ಯೆ, ಬಂಗಾಲ ಇವುಗಳನ್ನು ಗೆದ್ದನು. ಐಬಕನು ಅವನನ್ನೇ ಆ ಪ್ರಾಂತಗಳ ಅಧಿಕಾರಿಯನ್ನಾಗಿ ಮಾಡಿದನು. ಬಂಗಾಲದ ರಾಜಧಾನಿ

೧. ಇದರಲ್ಲಿ ಜಯಚಂದನು ಮುಹಮ್ಮದ ಘೋರಿಗೆ ಸಹಾಯ ಮಾಡಿದನೆಂದು ಹೇಳಲಾಗುತ್ತದೆ.

೨. ಕ್ರಿ. ಶ. ೧೧೯೨ ರಲ್ಲಿ. ೩. ೧೧೯೪ ರಲ್ಲಿ.

೪. ಜಯಚಂದನು ಕೊಲೆಮಾಡಲ್ಪಟ್ಟನೆಂದು ಕೆಲವರ ಹೇಳಿಕೆ.

ಯಾಗಿದ್ದ ಲಖನಾವತಿಯು ಅವನ ರಾಜಧಾನಿಯಾಯಿತು. ಹೀಗಾಗಿ, ಮುಹಮ್ಮದ ಘೋರಿಯ ರಾಜ್ಯವು ಸಿಂಧುನದಿಯ ಮುಖದಿಂದ ಗಂಗಾ ನದಿಯ ಮುಖದ ವರೆಗೂ ಹರಡಿತು. ಆದರೂ ಮಾಳವ ಮತ್ತು ಅದರ ನೆರೆಹೊರೆಯ ಪ್ರಾಂತಗಳು ಮಾತ್ರ ಸ್ವತಂತ್ರವಾಗಿಯೇ ಉಳಿದವು.

ಮುಹಮ್ಮದನ ಮರಣ :— ಕ್ರಿ. ಶ. ೧೨೦೬ ರಲ್ಲಿ **ಖೊಕ್ಕರರೆಂಬ** ಜನರು ಪಂಜಾಬದಲ್ಲಿ ದಂಗೆಯೆದ್ದರು. ಮುಹಮ್ಮದ ಘೋರಿಯು ಅವರನ್ನು ಸದೆಬಡಿದು ಹಿಂದಿರುಗುವಾಗ ಒಬ್ಬ ಖೊಕ್ಕರನಿಂದಲೇ ಕೊಲೆಮಾಡಲ್ಪಟ್ಟನು. ಭಾರತದಲ್ಲಿ ಮುಸಲ್ಮಾನ ಸಾಮ್ರಾಜ್ಯದ ಶಂಕುಸ್ಥಾಪನೆ ಮಾಡಿದವನೇ ಮುಹಮ್ಮದ ಘೋರಿಯು.

## ದಿಲ್ಲಿಯಲ್ಲಿ ಮೊದಲನೆಯ ಮುಸಲ್ಮಾನ ಸಾಮ್ರಾಜ್ಯ
## ಕ್ರಿ. ಶ. ೧೨೦೬–೧೫೨೬.

**ಹೆಚ್ಚಿನ ಅಭ್ಯಾಸಕ್ಕಾಗಿ—**

[ಮೊದಲುಮಾತು :— ಮುಹಮ್ಮದ ಘೋರಿಯು ಸತ್ತಬಳಿಕ, ಕುತ್ಬುದ್ದೀನ ಐಬಕನು ದಿಲ್ಲಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಭಾರತ ದಲ್ಲಿ ಸ್ವತಂತ್ರ ಸುಲ್ತಾನನೆಂದು ರಾಜ್ಯಭಾರ ಮಾಡತೊಡಗಿದನು. ಇವನು ಮುಹಮ್ಮದ ಘೋರಿಯ ಗುಲಾಮನಾದುದರಿಂದ, ಇವನಿಗೂ ಇವನ ಸಂತ ತಿಯ ಅರಸರಿಗೂ ಗುಲಾಮ ಅರಸರೆಂದು ಹೆಸರು ಬಂದಿದೆ. ಇವರ ಅನಂತರ, ಖಿಲ್ಜಿ, ತುಘ್ಲಕ, ಸಯ್ಯದ, ಲೋದಿ ಎಂಬ ನಾಲ್ಕು ಮುಸಲ್ಮಾನ ಮನೆತನ ಗಳ ಅರಸರು ದಿಲ್ಲಿಯ ಸುಲ್ತಾನರಾಗಿ ಆಳಿದರು. ಈ ಐದು ಮನೆತನಗಳ ಅರಸರ ಕಾಲವನ್ನು ಭಾರತದ ಇತಿಹಾಸದಲ್ಲಿ, 'ಪಠಾಣ ಅರಸರ ಕಾಲಾವಧಿ' ಯೆಂದು ಕರೆಯಲಾಗುತ್ತಿದೆ.[೧] ಇವರ ಒಟ್ಟಾರೆ ಅವಧಿಯು, ೩೨೦ ವರುಷ.]

**ಗುಲಾಮ ಮನೆತನದ ಅರಸರು** (ಕ್ರಿ. ಶ. ೧೨೦೬–೧೨೯೦) :—

(ಮುಹಮ್ಮದ ಘೋರಿಯ ಮರಣದ ಅನಂತರ ಪಠಾಣ ಸುಲ್ತಾನರೆಂಬ

---

೧. ಇದು ಅಷ್ಟೊಂದು ಸಮಂಜಸವಲ್ಲ. ಏಕೆಂದರೆ, ಗುಲಾಮ ಅರಸರು ಅಫ ಗಾನ ಅಥವಾ ಪಠಾಣರಲ್ಲ. ಅವರು ಮೂಲತಃ ತುರ್ಕರು (ತುರ್ಕಿ ಜನರು). ತುಘ್ಲಕ ಅರಸರೂ ಪಠಾಣರಲ್ಲ.

ಗುಲಾಮ ಅರಸರೆಂಬವರಲ್ಲಿ ಮೂವರೇ ಅರಸರು ಗುಲಾಮರಿದ್ದು ಅರಸ ರಾದವರು—ಕುತ್ಬುದ್ದೀನ, ಅಲ್ತಮುಶಾ ಮತ್ತು ಬಲ್ಬನ.

ಹೆಸರಿನಿಂದ ದಿಲ್ಲಿಯಲ್ಲಿ ರಾಜ್ಯಭಾರ ಮಾಡಿದ ಮನೆತನಗಳಲ್ಲಿ ಗುಲಾಮ ಮನೆತನವು ಮೊದಲನೆಯದು. ಆ ಮನೆತನದ ಕುತ್ಬುದ್ದೀನ ಐಬಕನೇ ಮೊಟ್ಟ ಮೊದಲನೆಯ ಚಕ್ರವರ್ತಿ).

**ಕುತ್ಬುದ್ದೀನ ಐಬಕ** (ಕ್ರಿ. ಶ. ೧೨೦೬–೧೨೧೦) :—

ಇವನು ಮುಹಮ್ಮದ ಘೋರಿಯು ಕ್ರಯಕ್ಕೆ ಕೊಂಡ ಗುಲಾಮನು. ಆದರೆ ಚಿಕ್ಕವನಿರುವಾಗಲೆ ಇವನಿಗೆ ಉತ್ತಮ ಶಿಕ್ಷಣ ಮತ್ತು ತರಬೇತು ದೊರೆತಿದ್ದವು. ಇವನು ಕುರಾನವನ್ನು ಓದಲಿಕ್ಕೆ ಕಲಿತಿದ್ದನು. ಕುದುರೆ ಹತ್ತುವದು, ಗುರಿಯಿಟ್ಟು ಬಾಣ ಹೊಡೆಯುವದು ಇವುಗಳಲ್ಲಿ ಪ್ರವೀಣನಾಗಿದ್ದನು. ಇವನು ಮುಹಮ್ಮದ ಘೋರಿಯ ಸೈನ್ಯದಲ್ಲಿ ಸೇರಿ ಘನತೆಗೇರಿದನು. ಅವನು ಭಾರತದಲ್ಲಿ ಹೂಡಿದ ಕಾಳಗದಲ್ಲಿ ಐಬಕನು ಅತ್ಯಂತ ಸ್ವಾಮಿನಿಷ್ಠೆಯಿಂದ ಕಾದಿದನು. ಅಂತೆಯೇ ಅವನು ಇವನನ್ನು ಭಾರತದಲ್ಲಿ ತಾನು ಗೆದ್ದ ರಾಜ್ಯಕ್ಕೆ ತನ್ನ ಪ್ರತಿನಿಧಿಯನ್ನಾಗಿ ನೇಮಿಸಿದನು.



ಕುತ್ಬುದ್ದೀನ

ಸುಲ್ತಾನನಾದ ಬಳಿಕ, ಕುತ್ಬುದ್ದೀನನು ರಾಜ್ಯ ವಿಸ್ತಾರದ ಗೊಡವೆಗೆ ಹೋಗಲಿಲ್ಲ. ಇವನ ಆಳಿಕೆಯು ನಾಲ್ಕೇ ವರುಷ ನಡೆಯಿತು. ಏಕೆಂದರೆ, ಕ್ರಿ. ಶ. ೧೨೧೦ ರಲ್ಲಿ ಇವನು ಅಪಘಾತದಿಂದ ಮರಣ ಹೊಂದಿದನು.

**ಸ್ವಭಾವ ಮತ್ತು ಆಳಿಕೆ :—** ಇವನು ಬಹು ಉತ್ಸಾಹಿ; ಭಾರೀ ದಾನ ಶೂರ (ಕೊಡುಗೈ ದೊರೆ). ಇದರಿಂದ ಇವನು ' ಲಕ್ಷ ಬಕ್ಷ ' (ಲಕ್ಷಗಟ್ಲೆ ದಾನ ಮಾಡುವವ) ಎಂದು ಹೆಸರಾದನು. ಪಕ್ಷಪಾತವಿಲ್ಲದೆ ನ್ಯಾಯಬುದ್ಧಿಯಿಂದ ರಾಜ್ಯಭಾರ ಮಾಡಿದನು. ಪ್ರಜೆಗಳಲ್ಲಿ ಪ್ರೀತಿಯನ್ನು ತೋರಿಸಿದನು. ಕಳ್ಳಕಾಕರನ್ನೂ ದರೋಡೆಗಾರರನ್ನೂ ಅಡಗಿಸಿ ಪ್ರಯಾಣಕ್ಕೆ ಜನರಿಗೆ ಅನುಕೂಲತೆಯನ್ನು ಉಂಟುಮಾಡಿದನು. ಇವನ ರಾಜ್ಯದಲ್ಲಿ ಬಹುಮಟ್ಟಿಗೆ ಸುಖ ಶಾಂತಿಗಳು ನೆಲೆಸಿದ್ದವು.

ಕುತ್ಬುದ್ದೀನನು ಕಟ್ಟಡಗಳಲ್ಲಿ ಪ್ರೀತಿಯುಳ್ಳವನಿದ್ದನು. ದಿಲ್ಲಿ ಅಜಮೀರ ಗಳಲ್ಲಿ ಸುಂದರವಾದ ಎರಡು ಮಸೀದೆಗಳನ್ನು ಕಟ್ಟಿಸಿದನು. ದಿಲ್ಲಿಯ ಸಮೀಪ ದಲ್ಲಿರುವ 'ಕುತುಬ ಮಿನಾರ' ಎಂಬ ವಿಜಯಸ್ತಂಭವನ್ನು ಇವನೇ ಕಟ್ಟಿಸಿದನೆಂದು ಹೇಳಲಾಗುತ್ತದೆ.[1] ಅದರ ಎತ್ತರ, ೨೩೮ ಅಡಿ! ಜಗತ್ತಿನಲ್ಲಿಯೇ ಎತ್ತರವಾದ ಕಂಬ! ಅದರ ಮೊದಲಿನ ಎರಡು ಅಂತಸ್ತುಗಳ ಸುತ್ತಲೂ ಅರಬೀ ಭಾಷೆಯಲ್ಲಿ ಕುರಾನದ ವಾಕ್ಯಗಳನ್ನು ಕೆತ್ತಲಾಗಿದೆ.



ಕುತುಬ ಮಿನಾರ

**ಮುಸಲ್ಮಾನ ರಾಜ್ಯದ ವಿಸ್ತಾರ**:— ದಿಲ್ಲಿಯಿಂದ ಕಲಿಂಜರ ಗುಜರಾತಗಳ ವರೆಗೆ ಮತ್ತು ಲಾಹೋರ ದಿಂದ ಲಖನಾವತಿಯ ವರೆಗೆ.

**ಸುಲ್ತಾನ ಅಲ್ತಮಶಾಹ** (ಕ್ರಿ.ಶ. ೧೨೧೧):— **ಪಟ್ಟ**:— ಇವನು ಮೊದಲಿಗೆ ಕುತ್ಬುದ್ದೀನನ ಗುಲಾಮನು. ಬಳಿಕ ಅವನ ಅಳಿಯನೂ

[1]. ಇದರ ಬಗೆಗೆ ಮತಭೇದವಿದೆ. ಕೆಲವರು ಇದನ್ನು ಇವನ ತರುವಾಯ ಸುಲ್ತಾನನಾದ ಅಲ್ತಮಶಾಹನು ಕಟ್ಟಿಸಿದನೆಂದು ಹೇಳುತ್ತಾರೆ.

ಇದನ್ನು ೨೭ ಹಿಂದು ದೇವಾಲಯಗಳ ಕಲ್ಲಿನಿಂದ ಕಟ್ಟಿಸಲಾಯಿತಂತೆ !

ಬಿಹಾರ ಪ್ರಾಂತದ ಅಧಿಕಾರಿಯೂ ಆದನು. ಕುತ್ಬುದ್ದೀನನ ತರುವಾಯ ಅವನ ಮಗನು ದಿಲ್ಲಿಯ ಪಟ್ಟವೇರಿದಾಗ ಅವನ ದುರ್ಬಲತೆಯಿಂದ ರಾಜ್ಯದಲ್ಲೆಲ್ಲ ಅರಾಜಕತೆ ತಲೆದೋರಿತು.[1] ಆದುದರಿಂದ, ಹಿರಿಯ ಸರದಾರರ ಕೇಳಿಕೆಯ ಮೇರೆಗೆ ಇವನು ಅವನನ್ನು ಪಟ್ಟದಿಂದ ನೂಕಿ, ತಾನೇ ಸುಲ್ತಾನನಾದನು. 'ಶಮಶುದ್ದೀನ'[2] ಎಂಬ ಬಿರುದು ಧರಿಸಿದನು. ಇವನು ಬಲು ಧೈರ್ಯಶಾಲಿ.

**ಆಳಿಕೆ :—** ಇವನು ಸ್ವತಂತ್ರರಾಗಿದ್ದ ಸುಬೇದಾರರನ್ನು ದಂಡಿಸಿ ತನ್ನ ಅಂಕಿತದಲ್ಲಿ ತಂದುಕೊಂಡನು. ಇವನ ಗುಣಾತಿಶಯಗಳಿಗೆ ಮೆಚ್ಚಿದ ಬಗದಾದ ಖಲೀಫನು, ಸುಲ್ತಾನನೆಂದು ಇವನನ್ನು ಹರಸಿದನು. ಇದರಿಂದ ಗುಲಾಮನ ಗುಲಾಮ' ನೆಂಬ ಇವನ ಕಲ್ಲಂಕವು ದೂರವಾಯಿತು. ಕೃತಜ್ಞತೆಯಿಂದ ಅಲ್ತಮಶಾಹನು ತನ್ನ ನಾಣ್ಯಗಳಮೇಲೆ ಖಲೀಫನ ಹೆಸರನ್ನು ಕೆತ್ತಿಸಿದನು. ಬಳಿಕ ಇವನು ಗ್ವಾಲೇರ ಮಾಳವಗಳನ್ನು ಕೈವಶಮಾಡಿಕೊಂಡನು. ತನ್ನ ೨೫ ವರುಷಗಳ ಆಳಿಕೆಯಲ್ಲಿ ಇವನು ತನ್ನ ಅಧಿಕಾರವನ್ನು ಬಲಪಡಿಸಿದನು. ವಿದ್ವಾಂಸರಿಗೆ ಆಶ್ರಯವನ್ನು ಕೊಟ್ಟನು. ಮಂಗೋಲರ ನಾಯಕನಾದ ಚಂಗೀಜಖಾನನೆಂಬವನು ಭಾರತಕ್ಕೆ ದಾಳಿಗಾಗಿ ಬಾರದಂತೆ ಮಾಡಿದ ಮಹತ್ಕೀರ್ತಿಯು ಅಲ್ತಮಶಾಹನಿಗೇ ಸಲ್ಲುತ್ತದೆಂತೆ.[3]



ಚಂಗೀಜಖಾನ

೧. ಸಿಂಧ, ಪಂಜಾಬ, ಬಂಗಾಲಗಳ ಸುಬೇದಾರರು ಸ್ವತಂತ್ರರಾದರು. ಮಾಳವದಲ್ಲಿ ರಾಜಪುತರು ಮುಸಲ್ಮಾನರ ಅಧಿಕಾರವನ್ನು ಧಿಕ್ಕರಿಸತೊಡಗಿದರು. ೨. ಧರ್ಮಭಾಸ್ಕರ.

೩. ಏಶಿಯಾ ಯುರೋಪಗಳು ಚಂಗೀಜಖಾನನ ದಾಳಿಗೆ ಬಲಿಯಾಗಿದ್ದವು. ಪೀತಸಮುದ್ರದಿಂದ ಕಾಸ್ಪಿಯನ ಸಮುದ್ರದವರೆಗಿದ್ದ ರಾಜ್ಯಗಳು ಉರುಳಿಹೋಗಿದ್ದವು. ವೈಭವಯುತವಾದ ನಗರಗಳು ಸುಟ್ಟು ಬೂದಿಯಾದವಂತೆ. ಚಂಗೀಜಖಾನನು ಭಾರತಕ್ಕೆ ಬರಲು ವಿಚಾರಿಸಿದಾಗ, ಅಲ್ತಮಶಾಹನು, "ನಿಮಗೆ ಭಾರತದ ಉಷ್ಣಹವೆಯು ತಡೆಯಲಾರದು," ಎಂದು ಹೇಳಿಕಳುಹಿದುದರಿಂದ, ಅವನು ಇಲ್ಲಿಗೆ ಬರಲಿಲ್ಲವಂತೆ.

**ಸುಲ್ತಾನಾ ರಜಿಯಾಬೇಗಂ** (ಕ್ರಿ.ಶ. ೧೨೩೬ – ೧೨೪೦):— ಇವಳು ಅಲ್ತಮಶಾಹನ ಪ್ರೀತಿಯ ಮಗಳು. ತನ್ನ ಗಂಡುಮಕ್ಕಳು ಪಟ್ಟಕ್ಕೆ ಅಯೋಗ್ಯ ರಿದ್ದುದು ಅಲ್ತಮಶಾಹನಿಗೆ ಗೊತ್ತಿದ್ದಿತು. ಆದುದರಿಂದ ತನ್ನ ತರುವಾಯ ಇವಳಿಗೇ ಪಟ್ಟ ದೊರೆಯಬೇಕೆಂದು ಅವನ ಬಯಕೆ ಇದ್ದಿತು. ಆದರೆ ಸರ ದಾರರು ಇವಳ ಅಣ್ಣನನ್ನು ಪಟ್ಟದ ಮೇಲೆ ಕುಳ್ಳಿರಿಸಿದರು. ಅವನ ಹೇಡಿ ತನವು ಬೇಗನೆ ಬಯಲಿಗೆ ಬಂದಿತು. ಆದುದರಿಂದ, ಆಮೇಲೆ ಇವಳಿಗೇ ಪಟ್ಟ ದೊರೆಯಿತು.


ಸುಲ್ತಾನಾ ರಜಿಯಾ ಬೇಗಂ

ರಜಿಯಳ ಮುಖದಲ್ಲಿ ರಾಜತೇಜ ವಿತ್ತು. ಅವಳಲ್ಲಿ ಧೈರ್ಯ, ಔದಾರ್ಯ, ವಿವೇಕ ಮೊದಲಾದ ಸದ್ಗುಣಗಳಿದ್ದವು. ಗಂಡು ಉಡುಪುಗಳನ್ನು ಧರಿಸಿ ದರಬಾರನನ್ನು ನಡೆಸಿದಳು. ದಂಡೆತ್ತಿ ಹೋಗಿ ರಾಜ್ಯ ದಲ್ಲಿಯ ದಂಗೆಗಳನ್ನು ಅಡಗಿಸಿದಳು. ಅವಳ ಪ್ರತಿಭೆಗೆ ಪ್ರಜೆಗಳು ಬೆರಗಾದರು. ಆದರೆ, ಆ ಕಾಲದ ತುರ್ಕೀ ಸರದಾರರಿಗೆ ಹೆಂಗಸೊಬ್ಬಳು ರಾಜ್ಯಕಾರಭಾರ ಮಾಡುವದೇ ಮನಸ್ಸಿಗೆ ಬಾರದಾಯಿತು. ಇದೇ, ಅವರು ದಂಗೆಯೆಬ್ಬಿಸಲು ಕಾರಣ ವಾಯಿತು. ಮುಂದೆ ಅವಳ ಕೊಲೆಗೂ ಇದೇ ಕಾರಣವಾಯಿತು.

**ರಜಿಯಳ ಅನಂತರದ ಮುಖ್ಯ ಗುಲಾಮ-ಅರಸರು** :— ಗುಲಾಮ ಅರಸರಲ್ಲಿ ರಜಿಯಳ ತರುವಾಯ ಐವರು ಅರಸರಾಗಿ ಹೋದರು. ಅವರಲ್ಲಿ **ನಾಸಿರುದ್ದೀನ, ಬಲ್ಬನ** ಇವ ರಿಬ್ಬರೇ ಇತಿಹಾಸದಲ್ಲಿ ಹೆಸರಾದವರು.

**ನಾಸಿರುದ್ದೀನ ಮಹಮೂದ ( ಕ್ರಿ. ಶ. ೧೨೪೬ – ೧೨೬೭ ) :—**

ಇವನು ಪರಮದಯಾಳು; ಪಾಪಭೀರು; ಈಶ್ವರನಲ್ಲಿ ಭಕ್ತಿಯುಳ್ಳವನು. ರಾಜಭೋಗಗಳಲ್ಲಿ ಇವನಿಗೆ ಅಭಿಲಾಷೆ ಇರಲಿಲ್ಲ. ರಾಜನಾದರೂ ಇವನು 'ಫಕೀರ' (ಸಾಧು) ನಂತೆ ಸರಳಜೀವಿ. ಕುರಾನದ ಪ್ರತಿಗಳನ್ನು ಬರೆದು,

ಆದರಿಂದ ಬಂದ ಹಣದಿಂದ ಜೀವನವನ್ನು ಸಾಗಿಸುತ್ತಿದ್ದನು. ಆದುದರಿಂದ, ಇವನು ಹೆಸರಿಗೆ ಮಾತ್ರ ರಾಜನಾಗಿದ್ದು, ರಾಜ್ಯಸೂತ್ರಗಳೆಲ್ಲವನ್ನೂ **ಬಲ್ಬನ** ನೆಂಬ ತನ್ನ ಸಮರ್ಥನೂ ಜಾಣನೂ ಆದ ಮಂತ್ರಿಗೆ ಒಪ್ಪಿಸಿದನು. ಆಡಳಿತವು ಸುಸೂತ್ರವಾಗಿ ಸಾಗಿತ್ತು.

**ಘಿಯಾಸುದ್ದೀನ ಬಲ್ಬನ (ಕ್ರಿ. ಶ. ೧೨೬೬ – ೧೨೮೬) :—**

ಇವನು ಮೂಲತಃ ತುರ್ಕನು. ಅಲ್ತಮಶಾಹನು ಇವನನ್ನು ಕ್ರಯಕ್ಕೆ ಕೊಂಡನು. ಮಂಗೋಲರು ಒಮ್ಮೆ[೧] ಸಿಂಧಪ್ರಾಂತವನ್ನು ಆಕ್ರಮಿಸಿ ಅಲ್ಲಿಯ ದುರ್ಗವನ್ನು ಮುತ್ತಿದಾಗ ಅವರನ್ನು ಸೋಲಿಸಿದ ವೀರನೇ ಬಲ್ಬನನು. ಇದಕ್ಕಾಗಿ ನಾಸಿರುದ್ದೀನನು ಇವನನ್ನು ಗೌರವಿಸಿದನು. ನಾಸಿರುದ್ದೀನನು ಇವನನ್ನು ತನ್ನ ಅಳಿಯನನ್ನಾಗಿ ಮಾಡಿಕೊಂಡನು. ಬಲ್ಬನನು ಮಂತ್ರಿಯಾದ ಮೇಲೆ, ಮತ್ತೆ ಮಂಗೋಲರ ದಾಳಿಯಿಂದ ದೇಶವನ್ನು ರಕ್ಷಿಸಿದನು. ದಂಗೆಯೆದ್ದ ಹಿಂದುಗಳನ್ನು ಹತ್ತಿಕ್ಕಿದನು. ವೈರಿಗಳಾದ ಮುಸಲ್ಮಾನ ಅಧಿಕಾರಿಗಳನ್ನೂ ಸರದಾರರನ್ನೂ ನಿರ್ಭಯದಿಂದ ದಂಡಿಸಿದನು. ನಾಸಿರುದ್ದೀನನು ಇವನನ್ನೇ ತನ್ನ ಉತ್ತರಾಧಿಕಾರಿಯನ್ನಾಗಿ ನೇಮಿಸಿದನು. ಇವನು ಬಹಿರಂಗದಲ್ಲಿ ಕಠೋರನಂತೆ ಕಂಡರೂ ಅಂತರಂಗದಲ್ಲಿ ಕೋಮಲನಿದ್ದನೆಂದು ಹೇಳಲಾಗುತ್ತದೆ.

ಸುಲ್ತಾನನಾದ ಮೇಲಂತೂ, ಗುಲಾಮ ಅರಸರಲ್ಲಿ ಇವನು ಶ್ರೇಷ್ಠನೆಂದು ಹೆಸರಾದನು. ಇವನದು ಬಿಗುವಿನ ಆಳಿಕೆ. ಇವನು ನ್ಯಾಯಪಕ್ಷಪಾತಿ. 'ಅಪರಾಧಿಗಳು ಯಾರೇ ಇರಲಿ, ಅವರಿಗೆ ಶಿಕ್ಷೆಯಾಗಲೇಬೇಕು' ಎಂಬುದು ಇವನ ರಾಜನೀತಿ. ಇವನು ವೈಭವ ಅಟ್ಟಹಾಸಗಳ ಪ್ರಿಯನಿದ್ದನು.[೨] ಇವನ ವೇಷಭೂಷಣಗಳು ಜನರ ಕಣ್ಣು ಕುಕ್ಕುತ್ತಿದ್ದವು. ಸುಲ್ತಾನನ ಎದುರಿನಲ್ಲಿ ಯಾರಿಗೂ ನಗುವ ಧೈರ್ಯವಿರಲಿಲ್ಲ.

(ಕ್ರಿ.ಶ. ೧೨೮೦ರಲ್ಲಿ) ಬಲ್ಬನನು ಬಂಗಾಲವನ್ನು ತನ್ನ ಆಳಿಕೆಗೆ ಕೂಡಿಸಿಕೊಂಡನು. ಇವನ ರಾಜ್ಯದಲ್ಲಿ ಕಳ್ಳಕಾಕರ ಭಯವಿರಲಿಲ್ಲ. ಪುಂಡರಿದ್ದ ಪ್ರದೇಶಗಳನ್ನು ಸ್ವಾಮಿನಿಷ್ಠ ಸರದಾರರಿಗೆ ಉಂಬಳಿಯಾಗಿ ಕೊಟ್ಟನು. ತನ್ನ

೧. ಕ್ರಿ. ಶ. ೧೨೪೫ ರಲ್ಲಿ.

೨. ಇವನ ದರಬಾರದ ವೈಭವವನ್ನು ನೋಡಲಿಕ್ಕೆ ನೂರಾರು ಮೈಲುಗಳಿಂದ ಜನರು ಬಂದು ನೆರೆಯುತ್ತಿದ್ದರಂತೆ.

ಮಗನನ್ನು ತನ್ನ ಉತ್ತರಾಧಿಕಾರಿಯನ್ನಾಗಿ ನೇಮಿಸಿದನು. ಪಂಜಾಬವನ್ನು ಆಕ್ರಮಿಸಿದ ಮಂಗೋಲರನ್ನು ಹೊಡೆದೋಡಿಸಲಿಕ್ಕೆ ಅವನನ್ನು ಕಳುಹಿಸಿದನು. ಆ ಕಾರ್ಯದಲ್ಲಿ ಅವನು ಯಶಸ್ವಿಯಾದುದು ನಿಜ. ಆದರೆ ಅದರಲ್ಲಿ ಅವನು ಮರಣ ಹೊಂದಿದನು! ಪುತ್ರಶೋಕದಿಂದ ಬಲ್ಬನನೂ ಮರಣ ಹೊಂದಿದನು.

ಬಲ್ಬನನ ತರುವಾಯ ಕೆಲವೇ ವರುಷಗಳಲ್ಲಿ ಗುಲಾಮ ಸಾಮ್ರಾಜ್ಯವು ಖಿಲ್ಜಿ ಎಂಬ ಮನೆತನದ ಅರಸರ ಪಾಲಾಯಿತು.

## ಅಭ್ಯಾಸನಗಳು.

೧. ಕೆಳಗೆ ಕೊಟ್ಟ ಪ್ರಶ್ನೆಗಳಿಗೆ ಉತ್ತರ ಬರೆಯಿರಿ :—

(ಅ) ಘಜನಿಯ ಮಹಮೂದನು ಕ್ರಿ. ಶ. ಯಾವ ವರ್ಷದಲ್ಲಿ ಜನಿಸಿದನು ? ..........................

(ಆ) ಗುಲಾಮ ಮನೆತನದ ಯಾವ ಅರಸನು ಪುತ್ರಶೋಕದಿಂದ ಮರಣ ಹೊಂದಿದನು ? ....................

(ಇ) ಗುಲಾಮ ಮನೆತನದ ಯಾವ ಅರಸನು ಕೊಡುಗೈದೊರೆಯೆಂದು ಹೆಸರಾದನು ? ......................

(ಈ) ಗುಲಾಮ ಮನೆತನದ ಯಾವ ಅರಸನು ರಾಜ–ಫಕೀರನೆನಿಸಿದನು ? ......................

(ಉ) ಗುಲಾಮ ಮನೆತನದ ಯಾವ ಅರಸನು ಗುಲಾಮನ ಗುಲಾಮನೆಂದು ತಿಳಿಯಲ್ಪಡುತ್ತಿದ್ದನು ? ..............................

೨. " ಪೃಥ್ವೀರಾಜನು ಹೊನ್ನು, ಹೆಣ್ಣು ಇವುಗಳಿಗಾಗಿ ತನ್ನ ಸಿಂಹಾಸನವನ್ನೂ ಜೀವವನ್ನೂ ಕಳೆದುಕೊಂಡನು. " ಈ ಹೇಳಿಕೆಯು ಸತ್ಯತೆಯನ್ನು ಕುರಿತು ೪–೫ ವಾಕ್ಯಗಳಲ್ಲಿ ಉತ್ತರ ಬರೆಯಿರಿ. (ಗೃಹಪಾಠಕ್ಕಾಗಿ.)

---



## ೪ನೆಯ ಪ್ರಕರಣ

# ದಕ್ಷಿಣ ಭಾರತದ ದಿಗ್ವಿಜಯ

## ಅಲಾಉದ್ದೀನ ಖಿಲ್ಜಿ ಹಾಗೂ ಮುಹಮ್ಮದ ತುಘಲಕ

**ಮೊದಲುಮಾತು** :—ದಕ್ಷಿಣಾಪಥ (ದಕ್ಷಿಣಭಾರತ) ದಲ್ಲಿ ಮುಸಲ್ಮಾನರು ದಿಗ್ವಿಜಯ ಮಾಡಿ ಇತಿಹಾಸದಲ್ಲಿ ಮೊದಲಿಗೆ ಪ್ರಸಿದ್ಧಿ ಪಡೆದದ್ದು ದಿಲ್ಲಿಯ ಖಿಲ್ಜಿ ಸುಲ್ತಾನರ ಆಳಿಕೆಯಲ್ಲಿ. ಈ ಮನೆತನದ ಅಲಾಉದ್ದೀನನೆಂಬ ಸುಲ್ತಾನನೇ ಮೊಟ್ಟಮೊದಲಿನ ದಾಳಿಗಾರ. ಅವನು ಸುಲ್ತಾನನಾಗುವ ಮುಂಚೆಯೇ ದಕ್ಷಿಣಾಪಥದಲ್ಲಿ ಯಾದವರ ದೇವಗಿರಿಯಮೇಲೆ ದಾಳಿ ಮಾಡಿದನು. ಸುಲ್ತಾನನಾದ ಬಳಿಕ, ದಕ್ಷಿಣದ ದಿಗ್ವಿಜಯಕ್ಕಾಗಿ ಮಲಿಕ ಕಾಫೂರನೆಂಬ ತನ್ನ ಸೇನಾಪತಿಯನ್ನು ಕಳುಹಿದನು.

ಇದರ ತರುವಾಯ – ಈಮನೆತನದ ಅನಂತರ— ದಿಲ್ಲಿಯಲ್ಲಿ ತುಘಲಕ ಎಂಬ ಮನೆತನದ ಸುಲ್ತಾನರು ರಾಜ್ಯವಾಳಿದರು. ಅವರಲ್ಲಿ ಮುಹಮ್ಮದ ತುಘಲಕನೆಂಬವನು ತನ್ನ ರಾಜಧಾನಿಯನ್ನು ದಿಲ್ಲಿಯಿಂದ ದೇವಗಿರಿಗೊಯ್ದನು. ಈ ಸಂಗತಿಗಳಿಗೆ ಸಂಬಂಧಿಸಿದ ಕೆಲವು ವಿವರಗಳನ್ನು ಈ ಪ್ರಕರಣದಲ್ಲಿ ಕೊಡಲಾಗಿದೆ.

**ಅಲಾಉದ್ದೀನ ಖಿಲ್ಜಿ (ಕ್ರಿ. ಶ. ೧೨೯೬ – ೧೩೧೬) :—**

ಇವನು ದಿಲ್ಲಿಯಲ್ಲಿ ಮೂವತ್ತೇ ವರುಷ (ಕ್ರಿ. ಶ. ೧೨೯೦ – ೧೩೨೦) ರಾಜ್ಯವಾಳಿದ ಖಿಲ್ಜಿ[1] ಮನೆತನದ ಅರಸರಲ್ಲಿ ಎರಡನೆಯ ಅರಸನು. **ಜಲಾಲುದ್ದೀನ ಖಿಲ್ಜಿ** ಎಂಬವನೇ ಮೊದಲನೆಯ ಅರಸನು.

[**ಹೆಚ್ಚಿನ ಅಭ್ಯಾಸಕ್ಕಾಗಿ** :— ಜಲಾಲುದ್ದೀನನು ಕೊನೆಯ ದುರ್ಬಲ ಗುಲಾಮ-ಅರಸರ ಕಾಲದಲ್ಲಿ ಒಬ್ಬ ಸರದಾರನಾಗಿದ್ದನು. ಆ ಮನೆತನದ ಕೊನೆಯ ಸುಲ್ತಾನನನ್ನು ಪಟ್ಟದಿಂದ ತಳ್ಳಿ ತಾನೇ ದಿಲ್ಲಿಯ ಸುಲ್ತಾನನಾದನು. (ಕ್ರಿ. ಶ. ೧೨೯೦ ರಲ್ಲಿ). ಆಗ ಅವನು ೭೦ ವರುಷ ವಯಸ್ಸಿನ ವೃದ್ಧನಿದ್ದನು. ಶಾಂತಿಪ್ರಿಯನು. ಸತ್ಯ, ಅಹಿಂಸೆ ಇವುಗಳಲ್ಲಿ ವಿಶ್ವಾಸವುಳ್ಳವನು. ಕಳ್ಳರನ್ನೂ ಠಕ್ಕರನ್ನೂ ದಂಗೆಖೋರರನ್ನೂ ಕ್ಷಮಿಸಿ ಸನ್ಮಾನಿಸುವ ಔದಾರ್ಯ ಇವನದು.

---

೧. ಖಿಲ್ಜಿ ಇದು ಅಫಗಾನಿಸ್ತಾನದ ಪಠಾಣರಲ್ಲಿಯ ಒಂದು ಪಂಗಡ.

ಇವನು ಮುದುಕನಾದರೂ, ಒಂದೂವರೆ ಲಕ್ಷ ಸೈನ್ಯದೊಂದಿಗೆ ದಾಳಿಗಾಗಿ ಬಂದ ಮಂಗೋಲರನ್ನು ಧೈರ್ಯದಿಂದ ಎದುರಿಸಿದನು. ಮಂಗೋಲರು ಸೋತರು. ಆದರೆ ಇವನು ಅವರ ನಾಯಕರಲ್ಲೊಬ್ಬನಾದ ' ಉಲ್ಘು ' ಎಂಬವನಿಗೆ ತನ್ನ ಮಗಳನ್ನೇ ಕೊಟ್ಟು ಮದುವೆ ಮಾಡಿದನು. ಇದರಿಂದ, ಮಂಗೋಲರಲ್ಲಿ ಕೆಲವರು ಇಸ್ಲಾಂ ಧರ್ಮದೀಕ್ಷೆ ಪಡೆದರು. ಇವರು **ನೂತನ ಮುಸಲ್ಮಾನರು** ಎಂದು ಹೆಸರಾದರು. ಇವರಿಗಾಗಿ ದಿಲ್ಲಿಯ ಬಳಿಯಲ್ಲಿ ' ಮೊಗಲಪುರ ' ಎಂಬ ಪಟ್ಟಣವು ರಚಿತವಾಯಿತು.]

ಅಲಾಉದ್ದೀನನು ಜಲಾಲುದ್ದೀನನ ತಮ್ಮನ ಮಗ. ಜಲಾಲುದ್ದೀನನು ಇವನನ್ನು ಅಳಿಯನನ್ನಾಗಿಯೂ ಮಾಡಿಕೊಂಡನು.

**ಅಲಾಉದ್ದೀನ** (ಸುಲ್ತಾನನಾಗುವ ಮುಂಚೆ) :— ಇವನು ತನ್ನ ಚಿಗಪ್ಪನ ಆಳಿಕೆಯಲ್ಲಿ ಗಂಗಾ-ಯಮುನಾನದಿಗಳ ನಡುವಿನ ಪ್ರದೇಶ ಹಾಗೂ ಅಯೋಧ್ಯೆಗಳ ಪ್ರಾಂತಾಧಿಕಾರಿಯಾಗಿದ್ದನು. ಇವನಿಗೆ ದಕ್ಷಿಣಾಪಥದಲ್ಲಿ ಯಾದವ ಅರಸರ ರಾಜಧಾನಿಯಾಗಿದ್ದ ದೇವಗಿರಿಯು ಅತಿ ಧನಾಢ್ಯ ನಗರವೆಂದು ತಿಳಿದುಬಂದಿತು. ಆದುದರಿಂದ ಅದನ್ನು ಸುಲಿಯುವದಕ್ಕಾಗಿ ಸುಲ್ತಾನನಿಗೂ ತಿಳಿಯಗೊಡದೆ ಇವನು ಸೈನ್ಯದೊಂದಿಗೆ ದಕ್ಷಿಣಕ್ಕೆ ಹೊರಟನು. ಒಮ್ಮೆಲೆ ದೇವಗಿರಿಯ ಮೇಲೆ ಸಾಗಿಹೋಗಿ ಅದನ್ನು ಮುತ್ತಿದನು. ಅಲ್ಲಿಯ ರಾಜನಾದ ರಾಮದೇವನಿಗೆ ಅದು ' ವಿಷಗಳಿಗೆ. ' ಅವನ ಸೈನ್ಯವೆ ಅವನ ಬಳಿಯಲ್ಲಿರಲಿಲ್ಲ. ಅವನ ಮಗನಾದ ಶಂಕರದೇವನು ಸೇನೆಯೊಂದಿಗೆ ದಕ್ಷಿಣದಲ್ಲಿ ದಂಡಯಾತ್ರೆಯನ್ನು ಕೈಕೊಂಡಿದ್ದನು. ರಾಮದೇವನ ಬಳಿಯಲ್ಲಿ ೩,೦೦೦ ಕಾಲಾಳುಗಳು ಮಾತ್ರ ಇದ್ದರು. ಆದುದರಿಂದ, ಅಲಾಉದ್ದೀನನನ್ನು ಎದುರಿಸುವದಾಗದೆ, ಅವನು ತನ್ನ ಭದ್ರವಾದ ಕೋಟೆಯೊಳಗೆ ಅಡಗಿಕೊಂಡನು. ಅಲಾಉದ್ದೀನನು ನಿರ್ಭಯವಾಗಿ ನಗರವನ್ನು ಸುಲಿಯುತ್ತ ಕೋಟೆಗೆ ಮುತ್ತಿಗೆ ಹಾಕಿದನು. ಆಮೇಲೆ ತನ್ನ ಚಿಗಪ್ಪನಾದ ಸುಲ್ತಾನನು ೨೦ ಸಾವಿರ ರಾವುತರೊಂದಿಗೆ ತನ್ನ ಸಹಾಯಕ್ಕಾಗಿ ಬರುತ್ತಿರುವನೆಂದು ಸುಳ್ಳು ಸುದ್ದಿಯನ್ನು ಹರಡಿದನು. ಇದರಿಂದ ಭೀತಿಗೊಂಡ ರಾಮದೇವನು ಅಪಮಾನಕರವಾದ ಒಪ್ಪಂದಕ್ಕೆ ಸಿದ್ಧನಾದನು. ಅಷ್ಟರಲ್ಲಿ ದಕ್ಷಿಣದಿಂದ ಶಂಕರದೇವನು ಹಿಂದಿರುಗಿ ಬಂದನು. ಅವನು ಅಲಾಉದ್ದೀನನಿಗೆ, " ನಿನಗೆ ಪ್ರಾಣದಾಸೆ ಇದ್ದರೆ ನೀನು ಸುಲಿದಿರುವ ಸಂಪತ್ತನ್ನೆಲ್ಲ ತಿರುಗಿಕೊಟ್ಟು ಹೊರಟುಹೋಗು " ಎಂದು

ಹೇಳಿಕಳುಹಿದನು. ಆದರೆ, ಅಲಾಉದ್ದೀನನು ಇದಕ್ಕೆ ಒಪ್ಪುವವನೇ? ಎರಡೂ ಸೇನೆಗಳಿಗೂ ತುಮುಲ ಕಾಳಗವೆಸಗಿತು. ಮುಸಲ್ಮಾನರು ಪ್ರಾಣ ಭಯದಿಂದ ಓಡತೊಡಗಿದರು. ಅಷ್ಟರಲ್ಲಿ ಕೋಟೆಯನ್ನು ಮುತ್ತಿದ್ದ ಸೇನೆಯು ಮುಸಲ್ಮಾನರ ಸಹಾಯಕ್ಕೆ ಬಂದಿತು. ಅದೇ ದಿಲ್ಲಿಯ ಸುಲ್ತಾನನ ಸೇನೆ ಯೆಂದು ಬಗೆದು ಹಿಂದುಗಳು ಹೌಹಾರಿ ಓಡತೊಡಗಿದರು! ಅಲಾಉದ್ದೀನ ನಿಗೆ ಜಯವಾಯಿತು. ಎಲಿಚಪುರ ಪ್ರಾಂತವು ಮುಸಲ್ಮಾನರ ಕೈಸೇರಿತು. ಅಪಾರ ಸಂಪತ್ತಿನೊಡನೆ ಅಲಾಉದ್ದೀನನು ಹಿಂತಿರುಗಿ ಹೋದನು.

**ಅಲಾಉದ್ದೀನನು ಸುಲ್ತಾನನಾದನು :—** ಅಲಾಉದ್ದೀನನ ವಿಜಯವನ್ನು ಕೇಳಿ ಜಲಾಲುದ್ದೀನನು ಸಂತೋಷದಿಂದ ಉಬ್ಬಿದನು. ಅವ ನನ್ನು ಅಭಿನಂದಿಸಲು ತಾನೇ ಅವನಲ್ಲಿಗೆ ಹೋದನು. ಅತಿ ನಮ್ರತೆಯಿಂದ ನಮಸ್ಕರಿಸಿದ ಅಳಿಯನನ್ನು ಮಮತೆಯಿಂದ ಎಬ್ಬಿಸುತ್ತಿರುವಾಗ, ಅಲಾ ಉದ್ದೀನನು ತನ್ನ ಸೈನಿಕರಿಗೆ ಕಣ್ಸನ್ನೆ ಮಾಡಿದನಂತೆ. ಕೂಡಲೆ ಅವರು ಸುಲ್ತಾನನನ್ನು ತುಂಡರಿಸಿ ಚೆಲ್ಲಿದರು! ಅಲಾಉದ್ದೀನನು ತಾನೇ ಸುಲ್ತಾನ ನೆಂದು ಸಾರಿದನು. ಕೊಲೆಯನ್ನು ಮರೆಮಾಜಲಿಕ್ಕೆ ಸೈನಿಕರಲ್ಲಿ ಚಿನ್ನವನ್ನು ಹಂಚಿದನು. ಹೊನ್ನಿನ ಮಳೆ ಸುರಿಸುತ್ತ, ದಿಲ್ಲಿಗೆ ಸಾಗಿದನು. ಜಲಾಲುದ್ದೀನನ ರಾಣಿಯು ತನ್ನ ಹಿರಿಯ ಮಗನು ಪ್ರಾಂತಾಧಿಕಾರಿಯಾಗಿದ್ದ ಮುಲ್ತಾನಕ್ಕೆ ಓಡಿಹೋದಳು. ದಿಲ್ಲಿಯಲ್ಲಿ ಎಲ್ಲರೂ ಅಲಾಉದ್ದಿನನನ್ನು ಸ್ವಾಗತಿಸಿದರು. ಕ್ರಿ. ಶ. ೧೨೯೬ ರಲ್ಲಿ ಇವನು ದಿಲ್ಲಿಯ ಸಿಂಹಾಸನವನ್ನು ಏರಿದನು.

**ಸುಲ್ತಾನ ಅಲಾಉದ್ದೀನ ಖಿಲ್ಜಿ** (ಕ್ರಿ. ಶ. ೧೨೯೬ – ೧೩೧೫) :—

ಅಲಾಉದ್ದೀನನು ಪಟ್ಟವೇರಿದ ಮರುವರ್ಷ, ಗುಜರಾತದ ಕರ್ಣರಾಯ ನನ್ನು ಸೋಲಿಸಿ ಆ ಪ್ರಾಂತವನ್ನು ಸುಲಿಗೆ ಮಾಡಿದನು. ಕರ್ಣರಾಯನ ಹೆಂಡತಿಯಾದ ಕಮಲಾದೇವಿಯು ಅತಿ ಲಾವಣ್ಯವತಿ. ಅಲಾಉದ್ದೀನನು ಈಕೆಯನ್ನು ತನ್ನ ಪಟ್ಟದರಸಿಯನ್ನಾಗಿ ಮಾಡಿಕೊಂಡನು. (ಕರ್ಣರಾಯನು ತನ್ನ ಮಗಳಾದ ದೇವಲದೇವಿಯೊಂದಿಗೆ ದೇವಗಿರಿಯ ರಾಮದೇವನನ್ನು ಆಶ್ರಯಿಸಬೇಕಾಯಿತು!)

ಆಮೇಲೆ ಅಲಾಉದ್ದೀನನು ಮಂಗೋಲರನ್ನು ಧೈರ್ಯದಿಂದ ಎದುರಿಸಿ ಸೋಲಿಸಿದನು.[೧] ಗಡಿನಾಡಿನ ದುರ್ಗಗಳನ್ನು ಭದ್ರಪಡಿಸಿ, ಅಲ್ಲಿ ಬಲಿಷ್ಠ ಸೈನ್ಯಗಳನ್ನಿಟ್ಟನು.

೧. ಮಂಗೋಲರು ಐದು ಸಲ ಭೀಕರ ದಾಳಿಗಳನ್ನು ಮಾಡಿದರೂ ಸೋತು ಹಿಮ್ಮೆಟ್ಟಬೇಕಾಯಿತು.

ಬರಬರುತ್ತ, ಅಲಾಉದ್ದೀನನ ಅಹಂಕಾರವು ಹೆಚ್ಚಿತು. ಹಜರತ ಮುಹಮ್ಮದ ಪೈಗಂಬರರಂತೆ ತಾನೂ ಧರ್ಮಸಂಸ್ಥಾಪಕನಾಗಬೇಕೆಂದೂ, ಸಿಕಂದರನಂತೆ ಜಗತ್ತನ್ನೇ ಗೆಲ್ಲುವವನಾಗ ಬೇಕೆಂದೂ ಬಯಸಿದನಂತೆ! ಆದರೆ ದಿಲ್ಲಿಯ ಕೊತವಾಲನು ಸುಲ್ತಾನನ ಈ ಹುಚ್ಚುಕಲ್ಪನೆಗಳನ್ನೆಲ್ಲ ಕೊಚ್ಚಿಹಾಕಿದ ನಂತೆ.


ಅಲಾಉದ್ದೀನ ಖಿಲ್ಜಿ

**ರಾಜ್ಯವಿಸ್ತಾರ:— ಅ. ಉತ್ತರ ಭಾರತ ದಲ್ಲಿ** (ಕ್ರಿ. ಶ. ೧೨೯೫ – ೧೩೧೫) :—

**೧. ರಣತಂಭೋರದ ಕೈವಶ :—** ರಣತಂಭೋರ(ರತನಭೋರ)ದ ರಾಜನು ರಾಣಾ ಹಮೀರದೇವ. ನೂತನ ಮುಸಲ್ಮಾನರಲ್ಲಿ ದ್ರೋಹಿಗಳಾದ ಕೆಲವರಿಗೆ ಇವನು ಆಶ್ರಯಕೊಡುತ್ತಿದ್ದನೆಂದು ಇವನ ಮೇಲೆ ಸುಲ್ತಾನನ ಆರೋಪ. ಆದುದರಿಂದ, ಸುಲ್ತಾನನು ಈ ದುರ್ಗವನ್ನು ಮೂರು ವರ್ಷಗಳ ಕಾಲ ಮುತ್ತಿಗೆ ಹಾಕಿ ಕೈವಶಮಾಡಿಕೊಂಡನು.[೧] ರಾಣಾನು ರಣರಂಗದಲ್ಲಿ ಮಡಿದರೆ, ಅವನ ಸ್ತ್ರೀಯರು ರಾಜಧಾನಿಯಲ್ಲಿ 'ಜೋಹಾರ' ಮಾಡಿ ಮಡಿದರು.

**೨. ಚಿತ್ತೂರ ಕೈವಶ (೧೩೦೩) :—** ಚಿತ್ತೂರಗಡವನ್ನು ಮುತ್ತುವದ ರಲ್ಲಿ ಅಲಾಉದ್ದೀನನಿಗೆ ರಾಜ್ಯವನ್ನು ವಿಸ್ತರಿಸುವ ಆಸೆ ಅಷ್ಟೇ ಅಲ್ಲ; ಅಲ್ಲಿಯ ರಾಣಾ ರತ್ನಸಿಂಹನ[೨] ರಾಣಿಯಾದ ಪದ್ಮಿನಿಗಾಗಿ ದುರಾಸೆ ಇದ್ದಿತು.

ಪದ್ಮಿನಿಯು ಸಿಂಹಳದ ರಾಜಕುಮಾರಿ; ಅನುಪಮ ಲಾವಣ್ಯವತಿ. ಕೋಟೆಯ ಮುತ್ತಿಗೆಯಲ್ಲಿ ಸುಲ್ತಾನನು ಹಣ್ಣಾಗಿದ್ದನಂತೆ. ಆದರೂ ಅವನು ಕುಟಿಲದಿಂದ ರಾಣಾ ರತ್ನಸಿಂಹನನ್ನು ಸೆರೆಹಿಡಿದನು. ಅವನ ರಾಣಿಯು ತನ್ನ ವಶವಾದರೆ ರಾಣಾನನ್ನು ಬಿಟ್ಟುಬಿಡುವೆನೆಂದು ಸುಲ್ತಾನನು ಹೇಳಿಕಳು ಹಿದನು. ರಾಜಪುತರು ಈ ಅವಮಾನವನ್ನು ಸಹಿಸದಾದರು. ಪದ್ಮಿನಿಯು ಚದುರೆ. ಅವಳೊಂದು ಯುಕ್ತಿಯನ್ನು ಹೇಳಿದಳು. ಮಂತ್ರಿಗಳು ಅದಕ್ಕೊಪ್ಪಿ

೧. ಕ್ರಿ. ಶ. ೧೩೦೧ ರಲ್ಲಿ.

೨. ಇವನು 'ಭೀಮದೇವ' ನೆಂಬು ಕೆಲವರ ಹೇಳಿಕೆ.

ದರು. ಆಮೇಲೆ, ರಾಣಿಯು ಸುಲ್ತಾನನಲ್ಲಿಗೆ ತನ್ನ ಪರಿವಾರದವರೊಂದಿಗೆ ಪರದೆಯ ಮೇಣೆಗಳಲ್ಲಿ ಕುಳಿತು ಬರುವಳೆಂದು ಸುಲ್ತಾನನಿಗೆ ಸುದ್ದಿ ಕಳುಹಿದಳು. ಅಲಾಉದ್ದೀನನ ಉಲ್ಲಾಸಕ್ಕೆ ಮಿತಿಯೇ ಇಲ್ಲದಾಯಿತು! ರಾಣೀವಿಲಾಸದಿಂದ ಏಳು ನೂರು ಮೇಣೆಗಳು ಸುಲ್ತಾನನ ಶಿಬಿರದತ್ತ ಸಾಗಿದವು!



ಚಿತ್ತೂರಗಡದಿಂದ ಅಲಾಉದ್ದೀನನ ಪಾಳಯಕ್ಕೆ ಬರುತ್ತಿರುವ ಮೇಣೆಗಳು.

ಆದರೆ ಒಂದರೊಳಗೂ ಪದ್ಮಿನಿಯೇ ಇರಲಿಲ್ಲ! ಪ್ರತಿಯೊಂದು ಮೇಣೆಯೊಳಗೂ ಕವಚಧಾರಿಯಾದ ಒಬ್ಬ ರಾಜಪುತವೀರ! ಮೇಣೆಗಳನ್ನು ಹೊತ್ತು ತಂದ ಬೋವಿಗಳೆಲ್ಲ ವೇಷಾಂತರದಲ್ಲಿದ್ದ ರಾಜಪುತ ಸೈನಿಕರು! ಅವರು ಮಿಂಚಿನ ವೇಗದಿಂದ ಮುನ್ನುಗ್ಗಿ, ರತ್ನಸಿಂಹನನ್ನು ಸೆರೆಬಿಡಿಸಿ ಅರಮನೆಗೆ ಕರೆದೊಯ್ದರು. ಅಷ್ಟರಲ್ಲಿಯೇ ದಿಲ್ಲಿಯಲ್ಲಿದ್ದ ದಂಗೆಯನ್ನಡಗಿಸಲು ಸುಲ್ತಾನನು ಹಿಂದಿರುಗಬೇಕಾಯಿತು. ಆದರೆ ಮರುವರ್ಷ ಸುಲ್ತಾನನು ಅಪಾರ ಸೈನ್ಯದೊಂದಿಗೆ ಮತ್ತೆ ಬಂದು ಚಿತ್ತೂರನ್ನು ಮುತ್ತಿದನು. ರಾಜಪುತರು ರಣಾಂಗಣದಲ್ಲಿ ಕಾದುತ್ತ ಮಡಿದರು. ಪದ್ಮಿನಿಯೂ ಸಹಸ್ರಾರು ಇತರ ಸುಮಂಗಲೆಯರೂ ಚಿತೆಯಲ್ಲಿ ಧುಮುಕಿ ಆತ್ಮಗೌರವವನ್ನು ಕಾಪಾಡಿಕೊಂಡರು! ಚಿತ್ತೂರು ಅಲಾಉದ್ದೀನನ ವಶವಾಯಿತು. ತನ್ನ ಮಗನಾದ ಖಿಜರಖಾನನನ್ನೇ ಅಲ್ಲಿ ಅಧಿಕಾರಿಯನ್ನಾಗಿ ನೇಮಿಸಿ ಸುಲ್ತಾನನು ದಿಲ್ಲಿಗೆ ಹಿಂದಿರುಗಿದನು.

ಚಿತ್ತೂರು ಪತನವಾದ ಬಳಿಕ, ಮಾಳವ, ಉಜ್ಜಯಿನಿ, ಚಂದೇರಿ ಇವು ಸುಲಭವಾಗಿ ಸುಲ್ತಾನನ ಕೈಸೇರಿದವು. ಸುಲ್ತಾನನು ಉತ್ತರಭಾರತಕ್ಕೆ ಒಡೆಯನಾದನು.

**ಆ. ದಕ್ಷಿಣ ದಿಗ್ವಿಜಯ.** (೧೩೦೭–೧೩೧೨):– ಸುಲ್ತಾನನು ದಕ್ಷಿಣದ ಮೇಲೆ ಕಣ್ಣಿಟ್ಟಾಗ, ಅಲ್ಲಿ ನಾಲ್ಕು ಪ್ರಮುಖ ಹಿಂದು ರಾಜ್ಯಗಳಿದ್ದವು.




ಮಲಿಕ ಕಾಫೂರನ ದಂಡಯಾತ್ರೆ.

ಅವು ಯಾವವೆಂದರೆ — ೧. ಯಾದವರ ದೇವಗಿರಿ. ೨. ಕಾಕತೀಯರ ವರಂಗಲ್ಲು. ೩. ಹೊಯ್ಸಳರ ದ್ವಾರಸಮುದ್ರ. ೪. ಪಾಂಡ್ಯರ ಮಧುರೆ.

ಈ ರಾಜ್ಯಗಳಲ್ಲಿಯ ಒಳಜಗಳ ಮುಂತಾದವು ಮುಸಲ್ಮಾನರ ಇಷ್ಟ ಪೂರ್ತಿಗೆ ಸಹಾಯಕವಾದವು.

**ಮಲಿಕ ಕಾಫೂರನ ದಂಡಯಾತ್ರೆ :—** (೪೯ ನೆಯ ಪುಟದಲ್ಲಿಯ ನಕಾಶ ನೋಡಿರಿ) ಮಲಿಕ ಕಾಫೂರನು ಅಲಾಉದ್ದೀನನ ನೆಚ್ಚಿನ ಗುಲಾಮನು. ಅವನ ಸೇನಾಪತಿಯೂ ಆಹುದು. ಸುಲ್ತಾನನು ಅವನನ್ನು (ಕ್ರಿ. ಶ. ೧೩೦೭ ರಲ್ಲಿ) ದೇವಗಿರಿಯನ್ನು ಮುತ್ತಲು ಕಳುಹಿದನು. ರಾಮದೇವನು ಸೋತು ಸೆರೆಹಿಡಿಯಲ್ಪಟ್ಟನು. ದೇವಲದೇವಿಯು ಸುಲ್ತಾನನಿಗೆ ದೊರೆತು ಅವನ ಸೊಸೆಯಾದಳು. ಸುಲ್ತಾನನು ರಾಮದೇವನನ್ನು ಬೀಗನಂತೆ ಸ್ವಾಗತಿಸಿ, ವಿಶೇಷವಾಗಿ ಗೌರವಿಸಿ ಮರಳಿ ಕಳಿಸಿದನು.

ಎರಡು ವರಷಗಳ ಬಳಿಕ, ಮಲಿಕ ಕಾಫೂರನು ವರಂಗಲ್ಲಿನ ಇಮ್ಮಡಿ ಪ್ರತಾಪರುದ್ರದೇವನನ್ನು ಸೋಲಿಸಿ ಅವನ ರಾಜ್ಯವನ್ನು ಸುಲಿದನು. ಮರುವರ್ಷ, ದ್ವಾರಸಮುದ್ರದ ಮುಮ್ಮಡಿ ವೀರಬಲ್ಲಾಳನದೂ ಅದೇ ಹಾಡಾಯಿತು. ಅಲ್ಲಿಯ ಕನಕ ಮುತ್ತು ರತ್ನ ವಜ್ರ ವೈಢೂರ್ಯಾದಿಗಳು ದಿಲ್ಲಿಗೆ ಸಾಗಿದವು (ಕ್ರಿ. ಶ. ೧೩೧೧ ರಲ್ಲಿ). ಕಾಫೂರನು ಮಧುರೆಯನ್ನು ಸುಲಿದನು. ಮರುವರ್ಷ, ದೇವಗಿರಿಯ ಶಂಕರದೇವನು ಕಪ್ಪ ಕೊಡಲೊಪ್ಪಲಿಲ್ಲ. ಆದುದರಿಂದ, ಅವನನ್ನು ದಂಡಿಸಿ ಕೊಂದುಹಾಕಲಾಯಿತು.

**ರಾಜನೀತಿ ಮತ್ತು ಆಡಳಿತ :—** ಅಲಾಉದ್ದೀನನು ಚತುರ ದಂಡನಾಯಕ, ರಾಜಕಾರಣಪಟು. ಅವನು ನಿರಂಕುಶ ಪ್ರಭುವಾಗಿ ಆಳಿದನು. “ ನನ್ನ ರಾಜನೀತಿಯು ಧರ್ಮಸಮ್ಮತವಾದುದೋ ಅಲ್ಲವೋ ನಾನರಿಯೆ. ಶಾಂತಿ ಸ್ಥಾಪನೆಗಾಗಿ, ಪ್ರಜೆಗಳ ಕಲ್ಯಾಣಕ್ಕಾಗಿ....... ನನಗೆ ಯೋಗ್ಯವೆನಿಸಿದ ಕಾನೂನುಗಳನ್ನು ಮಾಡುವೆ. ಪ್ರಜೆಗಳು ಅವುಗಳನ್ನು ಪಾಲಿಸದಿದ್ದರೆ ಅವರನ್ನು ಉಗ್ರಶಿಕ್ಷೆಗೆ ಗುರಿಮಾಡುವೆ. ಮರಣಾನಂತರ ನನಗಾಗುವ ಗತಿಯನ್ನು ನಾನು ಲೆಕ್ಕಿಸುವದಿಲ್ಲ. ” ಎಂದು ಅವನು ಹೇಳುತ್ತಿದ್ದನು.

ಸೈನ್ಯಕ್ಕಾಗಿ ವಿಪುಲವಾಗಿ ವೆಚ್ಚಮಾಡುತ್ತಿದ್ದನು. ಅಲಾಉದ್ದೀನನ ಸೈನ್ಯದಲ್ಲಿ ಶಿಸ್ತು-ದಕ್ಷತೆಗಳಿದ್ದವು. ಅವನು ಗುಪ್ತಚಾರರನ್ನಿಟ್ಟಿದ್ದನು. ಅಧಿಕಾರಿಗಳ ಲೋಪದೋಷಗಳಿಗಾಗಿ ಉಗ್ರಶಿಕ್ಷೆ ವಿಧಿಸುತ್ತಿದ್ದನು. ರಾಜ್ಯದಲ್ಲಿ ದಂಗೆಗಳ ಹುಟ್ಟನ್ನೇ ಅಡಗಿಸಲು, ಉಗ್ರಕ್ರಮಗಳನ್ನು ಕೈಕೊಂಡನು. ಮದ್ಯಪಾನವನ್ನು ನಿರೋಧಿಸಿದನು. ಸರದಾರರ ಸತ್ಕಾರಕೂಟಗಳನ್ನು ಪ್ರತಿಬಂಧಿಸಿದನು. ಅವರ ಆಸ್ತಿಯನ್ನು ಸರಕಾರದ ವಶಮಾಡಿಕೊಂಡನು.

ಅಲಾಉದ್ದೀನನು ಆಡಳಿತಕ್ಕಾಗಿ ಹೊಸ ತೆರಿಗೆಗಳನ್ನು ಹೇರಿದನು. ಭೂಕಂದಾಯವು ಭಾರವಿತ್ತು. ಆದರೂ ಪ್ರಜೆಗಳು ಸುಖಿಗಳಿದ್ದರು. ಜನ

ಸಾಮಾನ್ಯರ ಪ್ರೀತಿಸಂಪಾದನೆಗಾಗಿ, ಪದಾರ್ಥಗಳ ಬೆಲೆಗಳನ್ನು ನಿಯಂತ್ರಿಸಿದನು. ವ್ಯಾಪಾರಕ್ಕಾಗಿ, ವರ್ತಕರು ಸರಕಾರದಿಂದ ಅಪ್ಪಣೆ ಪಡೆಯಬೇಕಾಗುತ್ತಿತ್ತು. ಕಳ್ಳಪೇಟೆಗೆ ಎಳ್ಳಷ್ಟೂ ಅವಕಾಶವಿರಲಿಲ್ಲ.

**ಮರಣ ಮತ್ತು ಖಿಲ್ಜಿ ಮನೆತನದ ಕೊನೆ :—** ಅಲಾಉದ್ದೀನನು ಕ್ರಿ. ಶ. ೧೩೧೬ ರಲ್ಲಿ ಮರಣ ಹೊಂದಿದನು. ಬಳಿಕ, ನಾಲ್ಕೈದು ವರುಷಗಳಲ್ಲಿ ೩ ಜನ ಸುಲ್ತಾನರಾದರು. ಮಲಿಕ ಕಾಫೂರನಲ್ಲಿ ಸಿಂಹಾಸನದ ಆಸೆ ಹುಟ್ಟಿತು. ಅದನ್ನು ದೊರಕಿಸುವ ಪ್ರಯತ್ನದಲ್ಲಿ ಅವನು ಕೆಲವರನ್ನು ಕೊಲೆಮಾಡಿದನು. ತಾನೂ ಕೊಲೆಗೆ ತುತ್ತಾದನು. ಪಂಜಾಬದ ಸುಬೇದಾರನಾದ **ಗಾಝೀ ಮಲೀಕನು** ಖುಸ್ರೂ ಎಂಬ ಕೊನೆಯ ಅರಸನನ್ನು ಸೋಲಿಸಿ ತಾನೇ ದಿಲ್ಲಿಯ ಸುಲ್ತಾನನಾದನು. ಆಗ **ಘಿಯಾಸುದ್ದೀನ ತುಘಲಕನೆಂದು** ಹೆಸರಿಟ್ಟುಕೊಂಡನು.

**ಮುಹಮ್ಮದ ತುಘ್ಲಕ (ತುಘಲಕ)** ಕ್ರಿ. ಶ. ೧೩೨೫ – ೧೩೫೧ :—

ಇವನು ದಿಲ್ಲಿಯಲ್ಲಿ ರಾಜ್ಯಭಾರ ಮಾಡಿದ ತುಘಲಕ ಮನೆತನದ ಎರಡನೆಯ ಸುಲ್ತಾನನು. ಇವನ ಮೊದಲಿನ ಹೆಸರು ಫಕ್ರುದ್ದೀನ ಜೂನಾ (ಜೋನಾ). ಸುಲ್ತಾನನಾದ ಬಳಿಕ ಇವನು ಮುಹಮ್ಮದ ತುಘಲಕನೆಂಬ ಹೆಸರಿಟ್ಟುಕೊಂಡನು. ಇವನ ತಂದೆ, ಘಿಯಾಸುದ್ದೀನ ತುಘಲಕ. ಅವನೇ ಈ ಮನೆತನದ ಮೊದಲನೆಯ ಸುಲ್ತಾನು. ತಂದೆಯು ಮರಣದ ಬಳಿಕ, ಮುಹಮ್ಮದನು ಅತಿ ವೈಭವದಿಂದ ಸಿಂಹಾಸನವನ್ನೇರಿದನು.

**[ಹೆಚ್ಚಿನ ಅಭ್ಯಾಸಕ್ಕಾಗಿ :—**

ಘಿಯಾಸುದ್ದೀನನ ಸಂಕ್ಷಿಪ್ತ ಚರಿತ್ರೆ :– ಇವನು ಸುಲ್ತಾನ ಬಲ್ಬನನ ತುರ್ಕೀ ಗುಲಾಮನ ಮಗ. ಅಲಾಉದ್ದೀನನ ಆಳಿಕೆಯಲ್ಲಿ ಮಂಗೋಲರನ್ನು ಹೊಡೆದೋಡಿಸುವ ಕಾರ್ಯದಲ್ಲಿ ಸುಲ್ತಾನನಿಗೆ ವಿಶೇಷವಾಗಿ ನೆರವಾಗಿ 'ಗಾಝೀ ಮಲಿಕ' ಎಂಬ ಬಿರುದು ಪಡೆದನು. ಪಂಜಾಬದ ಸುಬೇದಾರನಿದ್ದಾಗ ಇವನು ದಿಲ್ಲಿಯಮೇಲೆ ಸಾಗಿಬಂದು, ಪಟ್ಟದಮೇಲಿದ್ದ ಖುಸ್ರೂನನ್ನು[೧] ಸೋಲಿಸಿ

೧. ಇವನು ಮೊದಲಿಗೆ ಗುಜರಾತದ ಒಬ್ಬ ಹೀನಕುಲದ ಹಿಂದು. ಅಲಾಉದ್ದೀನನ ಮಗನಾದ ಮುಬಾರಕನು ಸುಲ್ತಾನನಿದ್ದಾಗ ಅವನ ಮುಖ್ಯಮಂತ್ರಿಯಾದನು. ಕೊನೆಗೆ ಮುಬಾರಕನನ್ನು ಕೊಲೆಮಾಡಿ, ತಾನೇ ದಿಲ್ಲಿಯ ಪಟ್ಟವನ್ನೇರಿದನು. (ಕ್ರಿ. ಶ. ೧೩೨೦ ರಲ್ಲಿ).

754
LAK N52

ಕೊಂದನು. ತಾನೇ ದಿಲ್ಲಿಯ ಸುಲ್ತಾನನಾದನು. ಇವನ ಆಳಿಕೆಯು (ಕ್ರಿ. ಶ. ೧೩೨೧–೧೩೨೫) ನೀತಿಯ ಆಳಿಕೆಯೆಂದು ಹೆಸರಾಯಿತು. ರಾಜ್ಯದಲ್ಲಿ ಬಲಿತು ನಿಂತಿದ್ದ ವೈರಿಗಳನ್ನು ಸದೆಬಡಿದು, ಸುವ್ಯವಸ್ಥೆಯನ್ನುಂಟು ಮಾಡಿದನು. ವರಂಗಲ್ಲಿನ ಇಮ್ಮಡಿ ಪ್ರತಾಪರುದ್ರದೇವನು ಇವನಿಗೆ ಸೋತು ಶರಣಾಗತನಾದನು. ಅವನ ರಾಜ್ಯವು ಸುಲ್ತಾನನ ಕೈವಶವಾಯಿತು.

**ಮರಣ :—** ಬಂಗಾಲದಲ್ಲಿಯ ಒಳಜಗಳಗಳನ್ನು ಸರಿಪಡಿಸಿ ಇವನು ದಿಲ್ಲಿಗೆ ಹಿಂದಿರುಗಿ ಬರುವಾಗ, ಇವನ ಸ್ವಾಗತಕ್ಕಾಗಿ ದಿಲ್ಲಿಯಿಂದ ೬ ಮೈಲು ದೂರದಲ್ಲಿಯೆ ಒಂದು ಮಂಟಪವನ್ನು ರಚಿಸಲಾಗಿತ್ತು. ಸುಲ್ತಾನನು ಅದರೊಳಗೆ ಕಾಲಿಟ್ಟಕೂಡಲೆ, ಮಂಟಪವು ಕುಸಿದುಬಿದ್ದಿತು. ಸುಲ್ತಾನನೂ ಪ್ರೀತಿಯ ಕಿರಿಯ ಮಗನೂ ಅದರ ಕೆಳಗೆ ಸಿಕ್ಕಿ ಸತ್ತರು.[೧]

ಜೂನಾ(ಮುಹಮ್ಮದ ತುಘ್ಲಕ)ನು ಸಿಂಹಾಸನವನ್ನೇರಿದಾಗ ಮಾಡಿದ ಸುವರ್ಣದಾನದಿಂದ ದೇಶವಿದೇಶಗಳಲ್ಲಿ ದಾನಶೂರನೆಂದು ಹೆಸರಾದನು.

**ಯೋಗ್ಯತೆ ಮತ್ತು ಸ್ವಭಾವ :—** ಮುಹಮ್ಮದ ತುಘಲಕನ ಪಾಂಡಿತ್ಯ, ಪ್ರತಿಭೆ ಇವು ಅಗಾಧವಾದುವು. ಸಾಹಿತ್ಯ, ಸಂಗೀತ, ತರ್ಕ, ನ್ಯಾಯ, ವೇದಾಂತ, ಗಣಿತ, ವೈದ್ಯ, ವಿಜ್ಞಾನ ಶಾಸ್ತ್ರಗಳಲ್ಲಿ ಇವನು ಪಾರಂಗತನು. ಫಾರ್ಸೀ ಭಾಷೆಯ ಸಾಹಿತ್ಯದಲ್ಲಿ ಇವನಿಗೆ ತುಂಬಾ ಅಭಿಮಾನ. ಅರಬೀ ಭಾಷೆಯನ್ನೂ ಬಲ್ಲವನಾಗಿದ್ದನು. ಇವನದು ತೀಕ್ಷ್ಣಬುದ್ಧಿ, ವಿಶಾಲ ಹೃದಯ, ಪ್ರಗತಿಪರ ಧೋರಣೆ ಮತ್ತು ಅದ್ಭುತ ಕಲ್ಪನಾಶಕ್ತಿ ! ಆದರೆ, ಇವನ ಸ್ವಭಾವವು ಮಾತ್ರ ವಿಚಿತ್ರವಿತ್ತು. ಅದರಲ್ಲಿ ಎಷ್ಟೋ ಸಲ ಹಟಮಾರಿತನವೂ ಕ್ರೂರತನವೂ ಕಂಡುಬರುತ್ತಿದ್ದವು. ಇವನು ಕಟ್ಟುನಿಟ್ಟಿನ ಆಜ್ಞೆಯನ್ನು ವಿಧಿಸುತ್ತಿದ್ದನು. ಇವನ ಯೋಜನೆಗಳು ಸದುದ್ದೇಶದಿಂದ ಕೈಕೊಂಡುವಾದರೂ ಆ ಕಾಲದ ಪರಿಸ್ಥಿತಿಯಲ್ಲಿ ಅವು ಕಾರ್ಯರೂಪಕ್ಕೆ ಬಾರದ ಹುಚ್ಚು ಯೋಜನೆಗಳೆನಿಸಿದವು !

**ಆಡಳಿತ :—** ಇವನು ಸುಲ್ತಾನನಾದ ಬಳಿಕ, ಒಂದೆರಡು ವರುಷಗಳಲ್ಲಿಯೆ ಮಂಗೋಲರು ದಾಳಿಗಾಗಿ ದಿಲ್ಲಿಯವರೆಗೆ ಸಾಗಿಬಂದರು. ಅವರನ್ನು ಓಡಿಸುವದರ ಪ್ರತಿಯಾಗಿ ಅವನು ಅವರಿಗೆ ಹೇರಳ ಹಣಕೊಟ್ಟು ಕಳುಹಿದನು.

---

೧. ಇದರಲ್ಲಿ ಇವನ ಮಗನಾದ 'ಜೂನಾ'ನ ಕೈವಾಡವಿತ್ತೆಂದು ಹೇಳಲಾಗುತ್ತದೆ !

ಇರಾಣ ದೇಶವನ್ನು ಗೆಲ್ಲಬೇಕೆಂದು[೧] ಸುಮಾರು ಮೂರು ಲಕ್ಷ ಸೈನ್ಯವನ್ನು ಕಲೆಹಾಕಿದನು. ಆದರೆ, ತರುವಾಯ ಆ ಯೋಜನೆಯನ್ನು ಬಿಟ್ಟುಗೊಟ್ಟನು. ಸೈನಿಕರಿಗೆ ಮಾತ್ರ ಇದರ ಬಗ್ಗೆ ಒಂದು ವರುಷದ ಸಂಬಳ ದೊರೆಯಿತು. ಚೀನದಮೇಲೆ ದಂಡಯಾತ್ರೆಯನ್ನು ಕೈಕೊಳ್ಳಲು, ಮುಹಮ್ಮದನು ಒಂದು ಲಕ್ಷ ಸೈನಿಕರನ್ನು ನೇಪಾಳದ ಮಾರ್ಗವಾಗಿ ಕಳುಹಿದನು. ಆದರೆ ಇದರಲ್ಲಿ ಸುಲ್ತಾನನ ಗುರಿಯು ಸಾಧಿಸಲಿಲ್ಲ. ಅಷ್ಟೇ ಅಲ್ಲ; ಹಿಮಾಲಯದ ಚಳಿಯಿಂದ ಇವನ ಸೈನಿಕರು ಮಡಿದರು. ಹೀಗಾಗಿ, ಅಪಾರ ಹಾನಿಯಾಯಿತು.

ಮೇಲೆ ವಿವರಿಸಿದ ಸಂಗತಿಗಳ ಪರಿಣಾಮವಾಗಿ ಸುಲ್ತಾನನ ಬೊಕ್ಕಸವು ಬರಿದಾಯಿತು. ಆದುದರಿಂದ ಅವನು ಭೂ–ಕಂದಾಯವನ್ನು ಹೆಚ್ಚಿಸಿದನು; ಪ್ರಜೆಗಳಮೇಲೆ ಹೊಸ ತೆರಿಗೆಗಳನ್ನು ಹೇರಿದನು. ಕ್ರೂರತನದಿಂದ ಕರ ವಸೂಲಿಯು ನಡೆಯಿತು. ಜನರಲ್ಲಿ ಹಾಹಾಕಾರವೆದ್ದಿತು. ಇಂತಹ ಕಠಿಣ ಪ್ರಸಂಗದಲ್ಲಿಯೆ ಉತ್ತರ ಭಾರತದಲ್ಲಿ ಮಳೆಯಾಗದೆ ಬರಬಿದ್ದಿತು. ಸುಲ್ತಾನನು ಕ್ಷಾಮನಿವಾರಣೆಯ ಉಪಾಯಗಳನ್ನು ಕೈಕೊಂಡನು.[೨] ಆದರೂ ಅಲ್ಲಲ್ಲಿ ದಂಗೆಗಳೆದ್ದವು. ಸಾವಿರಾರು ಜನರು ಹೊಟ್ಟೆಗಿಲ್ಲದೆ ಸತ್ತರು.

**ರಾಜಧಾನಿಯ ಬದಲಾವಣೆ :—** ಈಗ ಮುಹಮ್ಮದ ತುಘಲಕನು ತನ್ನ ರಾಜಧಾನಿಯನ್ನು ದಿಲ್ಲಿಯಿಂದ ದೇವಗಿರಿ(ದೌಲತಾಬಾದ)ಗೆ ಸ್ಥಳಾಂತರಿಸುವ ನಿರ್ಧಾರ ಮಾಡಿದನು. ಏಕೆಂದರೆ ಹಿಮಾಲಯದಿಂದ ಮಧುರೆಯವರೆಗೆ ಪಸರಿಸಿದ ಅವನ ರಾಜ್ಯಕ್ಕೆ ಅದೇ ಯೋಗ್ಯ ಕೇಂದ್ರವೆನಿಸಿತು. ದಕ್ಷಿಣದಲ್ಲಿ ಮೇಲಿಂದಮೇಲೆ ಏಳುತ್ತಿದ್ದ ದಂಗೆಗಳನ್ನು ನಿಲ್ಲಿಸಲೂ ಇದು ಯೋಗ್ಯ ಉಪಾಯವೆನಿಸಿತು. ಅಲ್ಲದೆ ಅಲ್ಲಿ ಕ್ಷಾಮದ ಭೀತಿ ಇರಲಿಲ್ಲ; ಮಂಗೋಲರ ಹಾವಳಿಯ ಭಯವಿರಲಿಲ್ಲ. ಆದರೆ ಸುಲ್ತಾನನು ಅಲ್ಲಿಗೆ ಸರಕಾರವನ್ನಷ್ಟೇ ಒಯ್ಯದೆ ದಿಲ್ಲಿಯ ಜನರೆಲ್ಲರೂ ಹೋಗಬೇಕೆಂದು ವಿಧಿಸಿದನು ! ದಿಲ್ಲಿಯ

---

೧. ಇರಾಣದ ರಾಜಕೀಯ ಪರಿಸ್ಥಿತಿಯಲ್ಲಿ ಗೊಂದಲವುಂಟಾಗಿತ್ತು. ಅಂತೆಯೆ, ಇವನು ಆ ದೇಶವನ್ನು ಗೆಲ್ಲುವ ಯೋಜನೆ ಮಾಡಿದನು. ಆದರೆ, ಒಮ್ಮೆಲೆ ಅಲ್ಲಿ ಪರಿಸ್ಥಿತಿಯು ಸುಧಾರಿಸಿತು. ಆದುದರಿಂದ ಇವನು ಆ ಯೋಜನೆಯನ್ನು ಬಿಟ್ಟುಬಿಡಬೇಕಾಯಿತು.

೨. ಅಲ್ಲಲ್ಲಿ ಬಾವಿಗಳನ್ನು ತೋಡಿಸಿದನು. ರೈತರಿಗೆ ಎಷ್ಟೋ ಹಣವನ್ನು ಸಾಲ ರೂಪವಾಗಿ ಕೊಟ್ಟನು.

ನಿವಾಸಿಗಳಿಗೆ ಎಲ್ಲ ಪ್ರಯಾಣ ಸೌಕರ್ಯಗಳನ್ನು ಒದಗಿಸಿದನು. ಆದರೇನು ? ೭೦೦ ಮೈಲುಗಳ ಪ್ರವಾಸದಿಂದ ಜನರು ಕಂಗೆಟ್ಟರು. ಸತ್ತುಕೆಟ್ಟು ದೇವ ಗಿರಿಗೆ ತಲುಪಿದರು. ಆದರೆ, ಅವರಿಗೆ ಅಲ್ಲಿಯ ಪರಿಸ್ಥಿತಿಯು ಹೊಸದೆನಿಸಿತು. ಅದಕ್ಕೆ ಹೊಂದಿಕೊಳ್ಳುವದು ಅಸಾಧ್ಯವಾಯಿತು. ಆಗ ಸುಲ್ತಾನನು ಅವರಿ ಗೆಲ್ಲ ಮತ್ತೆ ದಿಲ್ಲಿಗೆ ಹೊರಡಲು ಅಪ್ಪಣೆಯಿತ್ತನು ! ಮತ್ತೆ ೭೦೦ ಮೈಲುಗಳ ಪ್ರವಾಸ ! ಮತ್ತೆ ಅವೇ ಕಷ್ಟನಷ್ಟಗಳು ! ಈಗ ಸುಲ್ತಾನನಿಗೆ ತನ್ನ ತಪ್ಪಿಗಾಗಿ ಪಶ್ಚಾತ್ತಾಪವಾಯಿತು. ಪಡಬಿದ್ದಿದ್ದ ಭೂಮಿಗಳನ್ನು ಸಾಗುಮಾಡುವದಕ್ಕಾಗಿ ಒಕ್ಕಲಿಗರಿಗೆ ಹಣ ಸಹಾಯ ಮಾಡಿದನು. ಆದರೂ ದಿಲ್ಲಿಯಲ್ಲಿಮೊದಲಿನ ಏಳಿಗೆಯು ಕಂಡುಬರಲಿಲ್ಲ.

**ನಾಣ್ಯ-ಚಲಾವಣೆ (ನಾಣ್ಯಗಳ ಬಳಕೆ) ಯಲ್ಲಿ ಹೊಸ ಪದ್ಧತಿ :—**

ಮೇಲೆ ಹೇಳಿದ ಸಂಗತಿಗಳಿಂದ ಸುಲ್ತಾನನ ಬೊಕ್ಕಸವು ಬರಿದಾಯಿತು. ಬಳಕೆಗಾಗಿ ಚಿನ್ನ ಬೆಳ್ಳಿಯ ನಾಣ್ಯಗಳ ಕೊರತೆಯಾಯಿತು. ಆಗ ಅವನು ಅವು ಗಳ ಪ್ರತಿಯಾಗಿ ಅದೇ ಬೆಲೆಗೆ ತಾಮ್ರದ ನಾಣ್ಯಗಳನ್ನು ಬಳಸಬೇಕೆಂದು ಪ್ರಕಟಿಸಿದನು. ಸರಕಾರವು ತಾಮ್ರದ ನಾಣ್ಯಗಳನ್ನು ಚಿನ್ನ ಬೆಳ್ಳಿಯ ನಾಣ್ಯ ಗಳ ಬೆಲೆಗೆ ಸ್ವೀಕರಿಸುವದೆಂದು ತಿಳಿಸಿದನು. ಆದರೆ ಆಗಿನ ಜನರಿಗೆ ಇದು ಹುಚ್ಚಾಟವೆನಿಸಿತು. ಅವರಲ್ಲಿ ಹಾಹಾಕಾರವೆದ್ದಿತು. ಅವರು ತಾಮ್ರವು ತಾಮ್ರವೇ, ಚಿನ್ನವು ಚಿನ್ನವೇ; ತಾಮ್ರವು ಹೇಗೆ ಚಿನ್ನವಾದೀತೆಂದು ಕೇಳಹತ್ತಿ ದರು. ವಂಚಕರು ಮನೆಯಲ್ಲಿ ತಾವೇ ತಾಮ್ರದ ನಾಣ್ಯಗಳನ್ನು ಮಾಡಿದರು. ತಾಮ್ರದ ನಾಣ್ಯಗಳಿಂದ ಈ ದೇಶದ ಸರಕುಗಳನ್ನು ಕೊಂಡು ಪರದೇಶಗಳಲ್ಲಿ ಅವನ್ನು ಮಾರಾಟಮಾಡಿ ಚಿನ್ನ ಬೆಳ್ಳಿಗಳ ನಾಣ್ಯಗಳನ್ನು ಗಳಿಸಹತ್ತಿದರು. ಪರದೇಶದವರು ತಮ್ಮ ಸರಕುಗಳನ್ನು ತಾಮ್ರದ ನಾಣ್ಯಗಳಿಗೆ ಮಾರಲು ಏಕೆ ಒಪ್ಪಿಗೆ ಕೊಟ್ಟಾರು ? ಇದರಿಂದ ಪರದೇಶದ ಸರಕುಗಳೇ ಇಲ್ಲಿಗೆ ಬಾರದಾದವು. ಸುಲ್ತಾನನ ಬೊಕ್ಕಸದ ಚಿನ್ನ ಬೆಳ್ಳಿ ನಾಣ್ಯಗಳು ಮಾತ್ರ ಕಡಿಮೆಯಾಗ ಹತ್ತಿದವು. ಆಗ ಅವನು ಮೊದಲಿನ ಪದ್ಧತಿಯನ್ನೇ ಮತ್ತೆ ಬಳಕೆಯಲ್ಲಿ ತಂದನು. ಎಷ್ಟೋದಿನ, ತಾಮ್ರದ ನಾಣ್ಯಗಳನ್ನು ಬೊಕ್ಕಸಕ್ಕೊಯ್ದು ಜನರಿಗೆಲ್ಲ ಚಿನ್ನ ಬೆಳ್ಳಿಯ ನಾಣ್ಯಗಳು ದೊರೆಯುವಂತೆ ವ್ಯವಸ್ಥೆ ಮಾಡಿದನು.

**ಹೊಸ ರಾಜ್ಯಗಳ ಉದಯ :—** ಮುಹಮ್ಮದ ತುಘಲಕನ ಆಳಿಕೆ ಯಲ್ಲಿ ಮೇವಾಡ ಮತ್ತು ಬಂಗಾಲ ಇವು ಸ್ವತಂತ್ರವಾದವಲ್ಲದೆ, ದಕ್ಷಿಣದಲ್ಲಿ

ಎರಡು ಹೊಸ ರಾಜ್ಯಗಳು ಹುಟ್ಟಿದವು. ಅವು ಯಾವವೆಂದರೆ, ವಿಜಯನಗರದ ರಾಜ್ಯ[೧] ಮತ್ತು ಬಹಮನೀ ರಾಜ್ಯ.[೨]

**ಮರಣ** :— ಮುಹಮ್ಮದ ತುಘಲಕನ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಮೇಲಿಂದ ಮೇಲೆ ದಂಗೆಗಳೇಳುತ್ತಿದ್ದವು. ಗುಜರಾತದ ದಾಳಿಯನ್ನಡಗಿಸಿ ದಿಲ್ಲಿಗೆ ಹೊರಟಾಗ ಇವನು ಮಾರ್ಗದಲ್ಲಿಯೇ ಜ್ವರದಿಂದ ಮರಣ ಹೊಂದಿದನು (ಕ್ರಿ. ಶ. ೧೩೫೧ ರಲ್ಲಿ). ಬಳಿಕ, ಇವನ ಚಿಗಪ್ಪನ ಮಗನಾದ ಫಿರೂಜನು ಸುಲ್ತಾನನಾದನು.

**ಫಿರೂಜ ತುಘಲಕ** (ಕ್ರಿ. ಶ. ೧೩೫೧ – ೧೩೮೮) **:—**

ಇವನು ಸ್ವಭಾವದಿಂದ ದಯಾಳು, ಕ್ಷಮಾಶೀಲ, ಮತ್ತು ಧರ್ಮಬುದ್ಧಿಯುಳ್ಳವ. ಇವನಿಗೆ ಯುದ್ಧಮಾಡುವದರಲ್ಲಿ ಆಸಕ್ತಿ ಇರಲಿಲ್ಲ. ಅಂತೆಯೇ ಇವನ ಆಳಿಕೆಯಲ್ಲಿ ಯುದ್ಧಗಳು ತೀರ ಕಡಿಮೆ. ಮುಸಲ್ಮಾನ ಗ್ರಂಥಕಾರರ ಅಭಿಪ್ರಾಯದ ಮೇರೆಗೆ ಇವನೊಬ್ಬ 'ಆದರ್ಶ ಮುಸಲ್ಮಾನ ಅರಸನು'. ಆದರೆ ಹಿಂದು ಪ್ರಜೆಗಳ ಬಗೆಗೆ ಇವನು ಅನುಸರಿಸಿದ ಧೋರಣೆಯು ಇವನ ಪರಧರ್ಮ ವೈರವನ್ನು ಸೂಚಿಸುತ್ತದೆ. ಅದು ಹೇಗೇ ಇರಲಿ, ಇವನ ಆಳಿಕೆಯು ಪ್ರಜಾಹಿತಕಾರ್ಯಗಳಿಗಾಗಿ, ಅದರಲ್ಲೂ ಮುಖ್ಯವಾಗಿ ಒಕ್ಕಲಿಗರ ಏಳ್ಗೆಗಾಗಿ, ಪ್ರಸಿದ್ಧಿ ಪಡೆದಿದೆ. ಒಕ್ಕಲತನದ ಏಳ್ಗೆಗಾಗಿ ಇವನು ಕೈಕೊಂಡ ಯೋಜನೆಗಳು ಕೆಳಗಿನಂತಿವೆ:— ಒಕ್ಕಲಿಗರಿಂದ ಬಹುಕಾಲದವರೆಗೆ ಬಾರದೆ ನಿಂತಿದ್ದ ಭೂಕಂದಾಯವನ್ನೂ ಸಾಲಗಳನ್ನೂ 'ಸೂಟು' ಬಿಟ್ಟನು. ಹೊಸ ಕರ ಹೇರಲಿಲ್ಲ. ಕೆರೆಬಾವಿಗಳನ್ನು ಕಟ್ಟಿಸಿದನು. ಯಮುನಾ ಮತ್ತು ಸತ್ಲಜ ನದಿಗಳಿಗೆ ಒಡ್ಡು ಕಟ್ಟಿಸಿ ಬಹು ದೂರದವರೆಗೂ ಕಾಲುವೆಗಳನ್ನು ತೋಡಿಸಿ ನೀರಾವರಿಯ ಯೋಜನೆಗಳನ್ನು ಮಾಡಿದನು. ನೀರಾವರಿಯ ಭೂಮಿಗಳ ಕಂದಾಯವು ಹುಟ್ಟುವಳಿಯ ಹತ್ತನೆಯ ಪಾಲಿರಬೇಕೆಂದು ಗೊತ್ತುಪಡಿಸಿದನು. **ಪರಿಣಾಮಗಳು** :— ಒಕ್ಕಲಿಗರು ಸಿರಿವಂತರಾದರು. ದವಸಧಾನ್ಯಗಳು ವಿಪುಲವಾಗಿ ಸಂಗ್ರಹವಾದವು. ಆಹಾರ ವಸ್ತುಗಳು ಅಗ್ಗಬೆಲೆಗೆ ದೊರೆಯಹತ್ತಿದವು.

**ಇತರ ಪ್ರಜಾಹಿತದ ಸುಧಾರಣೆಗಳು** :— ಫಿರೂಜನು ನ್ಯಾಯದಾನದಲ್ಲಿ ಕ್ರೂರ ಹಾಗೂ ಅಮಾನುಷ ಶಿಕ್ಷೆಗಳನ್ನು ರದ್ದುಗೊಳಿಸಿದನು. ಎಷ್ಟೋ ಅನಿಷ್ಟ ಕರಗಳನ್ನು ಕಿತ್ತೊಗೆದನು. ಬಡಬಗ್ಗರಿಗೆ ಪಾಠಶಾಲೆ, ಧರ್ಮಶಾಲೆ, ಚಿಕಿತ್ಸಾಲಯ, ವಿದ್ಯಾಲಯಗಳ ಏರ್ಪಾಡು ಮಾಡಿದನು. ತೋಟಗಳನ್ನು

---

೧. ಕ್ರಿ. ಶ. ೧೩೩೬. ೨. ಕ್ರಿ. ಶ. ೧೩೪೭.

ರಚಿಸುವದರಲ್ಲಿಯೂ ಹೊಸ ಪಟ್ಟಣಗಳನ್ನು ನಿರ್ಮಿಸುವದರಲ್ಲಿಯೂ ಇವನಿಗೆ ತುಂಬಾ ಅಭಿರುಚಿಯಿದ್ದಿತು.[1]

ಫಿರೋಜ ತುಘಲಕನು ಕವಿಪೋಷಕನಿದ್ದನು. ಗ್ರಂಥರಚನೆಗೆ ಉತ್ತೇಜನವಿತ್ತನು. ಸಂಸ್ಕೃತ ಗ್ರಂಥಗಳು ಫಾರ್ಸೀ ಭಾಷೆಗೆ ತರ್ಜುಮೆಯಾದವು.

ಫಿರೋಜನ ದುರ್ಬಲತೆಯಿಂದಲೊ, ಒಳ್ಳೆಯ ಸ್ವಭಾವದಿಂದಲೊ ಆಡಳಿತದಲ್ಲಿ ಸಡಿಲುಂಟಾಯಿತು. ರಾಜ್ಯದಲ್ಲಿ ದಂಗೆಗಳೇಳಹತ್ತಿದವು. ಇವನ ತರುವಾಯದ ಅರಸರು ಹೇಡಿಗಳಾದರು. ರಾಜ್ಯದಲ್ಲಿ ಅರಾಜಕತೆ ತಲೆಯೆತ್ತಿತು. ಫಿರೋಜನ ಮರಣಾನಂತರ, ೨೫ ವರುಷಗಳಲ್ಲಿಯೇ ದಿಲ್ಲಿಯ ಸಿಂಹಾಸನವು 'ಸೈಯ್ಯದ' ಮನೆತನದ ಕೈಸೇರಿತು (ಕ್ರಿ. ಶ. ೧೪೧೪ ರಲ್ಲಿ). ಆದರೆ ಆ ಮನೆತನದ ಆಳಿಕೆಯಲ್ಲಾಗಲಿ, ಮುಂದಿನ ಲೋದಿ ಮನೆತನದ ಆಳಿಕೆಯಲ್ಲಾಗಲಿ ವಿಶೇಷ ಮಹತ್ವದ ಸಂಗತಿಗಳು ಜರುಗಲಿಲ್ಲ.[2] ಲೋದಿ ಮನೆತನದ ಕೊನೆಯ ಅರಸನಾದ ಇಬ್ರಾಹಿಮನನ್ನು ಯುದ್ಧದಲ್ಲಿ ಸೋಲಿಸಿ ಮೊಗಲ ವಂಶದ ಬಾಬರನು ದಿಲ್ಲಿಯಲ್ಲಿ ಹೊಸ ಸಾಮ್ರಾಜ್ಯವನ್ನು ಸ್ಥಾಪಿಸಿದನು (ಕ್ರಿ. ಶ. ೧೫೨೬).


ತೈಮೂರ

**ತೈಮೂರನ ದಾಳಿ (೧೩೯೮) :—** ತೈಮೂರನು ಫಿರೋಜಶಹನ ಆಳಿಕೆಯ ಅನಂತರ ದಿಲ್ಲಿಯಲ್ಲುಂಟಾದ ಅರಾಜಕತೆಯ ಸಮಯದಲ್ಲಿ ಮಧ್ಯಏಶಿಯಾ (ಸಮರ್ಕಂದ)ದಿಂದ ಹಿಂದುಸ್ತಾನಕ್ಕೆ ಬಂದು ದಾಳಿಮಾಡಿ ಹೋದ ಭಯಂಕರ ದಾಳಿಗಾರನು. ಇವನು ಅಲ್ಲಿಯ ಉಚ್ಚತರಗತಿಯ ತುರ್ಕನು ಅಥವಾ ತುರ್ಕ-ಮಂಗೋಲನು. ಮೊದಲಿಗೆ ಅವನು ಸಮರ್ಕಂದ ಪ್ರಾಂತವನ್ನು ಗೆದ್ದು ಅದರ ಅಮೀರನಾದನು. ಬಳಿಕ ಇರಾಣ, ಅಫಗಾನಿಸ್ತಾನ,

೧. ದಿಲ್ಲಿಯ ನೆರೆಹೊರೆಯಲ್ಲಿ ೧೨೦೦ ತೋಟಗಳನ್ನು ರಚಿಸಿದನು. ಇವನು ಕಟ್ಟಿಸಿದ ಮುಖ್ಯ ಪಟ್ಟಣಗಳು : ಫಿರೋಜಾಬಾದ, ಫತೇಬಾದ, ಜೋನಾಪುರ(ಜೋನಪುರ).

೨. ಸೈಯ್ಯದ ಮನೆತನದ ಆಳಿಕೆ, ಕ್ರಿ. ಶ. ೧೪೧೪–೧೪೫೦. ಲೋದಿ ಮನೆತನದ ಆಳಿಕೆ, ಕ್ರಿ ಶ, ೧೪೫೦–೧೫೨೬,

ಮೆಸೊಪೊಟೇಮಿಯಾ ದೇಶಗಳ ಮೇಲೆ ಭೀಕರ ದಾಳಿಗಳನ್ನು ಮಾಡಿ, ಇಡೀ ಮಧ್ಯಏಶಿಯಾವನ್ನೇ ತನ್ನ ಒಡೆತನದಲ್ಲಿ ತೆಗೆದುಕೊಂಡ ಮಹಾವಿಜಯಶಾಲಿ ಅವನು! ಹಿಂದುಸ್ತಾನದ ಮೇಲೆ ದಾಳಿಮಾಡಲು ಇಲ್ಲಿಯ ಸಾಂಪತ್ತಿಕ ಸ್ಥಿತಿಯೇ ಅವನನ್ನು ಹುರಿದುಂಬಿಸಿತು. ಸಮಯವೂ ಅವನಿಗೆ ಅನುಕೂಲವಿತ್ತು. ಆದುದರಿಂದ ತೈಮೂರನು ದೊಡ್ಡ ಸೈನ್ಯದೊಂದಿಗೆ ೧೩೯೮ ನೆಯ ಇಸವಿಯಲ್ಲಿ ಸಮರ್ಕಂದದಿಂದ ಇಲ್ಲಿಗೆ ಹೊರಟನು. ಸಿಂಧು, ಝೀಲಂ, ರಾವೀ ನದಿಗಳನ್ನು ದಾಟಿ, ಮುಲ್ತಾನದ ಸಮೀಪದಲ್ಲಿ ಹಾಯ್ದು ದಿಲ್ಲಿಯ ಗಡಿಯನ್ನು




ತೈಮೂರನ ದಾಳಿ.

ತಲುಪಿದನು. ದಾರಿಗುಂಟ ಭೀಕರ ಕೊಲೆ ಸುಲಿಗೆಗಳಿಂದ ಪಟ್ಟಣಗಳನ್ನು ಸೂರೆಮಾಡಿದನು. ದಿಲ್ಲಿಯ ಸುಲ್ತಾನನು[1] ಅವನನ್ನು ಎದುರಿಸಿ, ಸಂಪೂರ್ಣವಾಗಿ ಸೋತು ಗುಜರಾತಕ್ಕೆ ಓಡಿಹೋದನು. ದಿಲ್ಲೀಪಟ್ಟಣವು ತೈಮೂರನ ವಶವಾಯಿತು. ಸುಮಾರು ೧ ಲಕ್ಷ ಸೆರೆಯಾಳುಗಳ ಸಂಹಾರವಾಯಿತು. ದಿಲ್ಲಿಯಲ್ಲಿಯೂ ಕೊಲೆ-ಸುಲಿಗೆಗಳು ನಡೆದವು. ಸುಲಿಗೆಯಲ್ಲಿ ದೊರೆತ ಮುತ್ತು, ರತ್ನ, ಮಾಣಿಕ, ವಜ್ರ, ಬೆಳ್ಳಿ-ಬಂಗಾರದ ಪಾತ್ರೆ ಮುಂತಾದವುಗಳು

೧. ನಾಸಿರುದ್ದೀನ ಮಹಮೂದ. (ಫಿರೋಜ ತುಘಲಕನ ಮೊಮ್ಮಗ.)

ಅಷ್ಟಿಷ್ಟಲ್ಲ! ೧೫ ದಿನಗಳ ಆನಂದೋತ್ಸವಗಳ ಅನಂತರ, ತೈಮೂರನು ದಿಲ್ಲಿಯಿಂದ ಫಿರೋಜಾಬಾದದ ಮಾರ್ಗವಾಗಿ ಹೊರಟು ಮೀರತ, ಹರಿದ್ವಾರ, ಜಮ್ಮೂ ಪಟ್ಟಣಗಳನ್ನು ಸುಲಿದು ಲಾಹೋರವನ್ನು ಕೈವಶಮಾಡಿಕೊಂಡನು. ಬಳಿಕ, **ಖಿಜರಖಾನ ಸೈಯ್ಯದನೆಂಬ** ತನ್ನ ಸರದಾರನನ್ನು ಪಂಜಾಬದ ಸುಬೇದಾರನನ್ನಾಗಿ ನೇಮಿಸಿ ಬಂದ ಮಾರ್ಗದಿಂದ ಸ್ವದೇಶಕ್ಕೆ ಮರಳಿ ಹೋದನು.

ತೈಮೂರನ ದಾಳಿಯಿಂದ ದಿಲ್ಲಿಯು ಹಾಳಾಯಿತು. ತುಘಲಕ ಮನೆತನವು ಸಂಪುಷ್ಟಕ್ಕೆ ಬಂದಿತು. ಮುಂದೆ ಕೆಲವೇ ವರುಷಗಳಲ್ಲಿ (ಕ್ರಿ.ಶ. ೧೪೧೪ ರಲ್ಲಿ) ದಿಲ್ಲಿಯ ಸಿಂಹಾಸನವು ಪಂಜಾಬದ ಸುಬೇದಾರನಾಗಿದ್ದ ಖಿಜರಖಾನ ಸೈಯ್ಯದನ ಕೈಸೇರಿತು. ಹೀಗಾಗಿ, ದಿಲ್ಲಿಯಲ್ಲಿ ಸೈಯ್ಯದ ಮನೆತನದ ಅರಸರು ಆಳಹತ್ತಿದರು.

## ಅಭ್ಯಸನಗಳು.

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—**

(೧) ಅಲಾಉದ್ದೀನನು ವರ್ತಕರ ದ್ವೇಷಕ್ಕೆ ಪಾತ್ರನಾದನು. ಏಕೆ?

(೨) ಅಲಾಉದ್ದೀನನು ಸರದಾರರ ದಂಗೆಗಳೇಳದಂತೆ ಮಾಡಲು ಪ್ರಯತ್ನಿಸಿದನು. ಆ ಪ್ರಯತ್ನಗಳು ಯಾವವು?

(೩) ಮುಹಮ್ಮದ ತುಘಲಕನ ಯೋಜನೆಗಳು ಸದುದ್ದೇಶದಿಂದ ಕೂಡಿದ್ದವು. ಆದರೂ ಅವು ಫಲಿಸಲಿಲ್ಲ. ಉದಾಹರಣೆಗಳನ್ನು ಕೊಡಿರಿ.

(೪) ಭಾರತದ ಬಾಹ್ಯರೇಷೆಯ ನಕಾಶದಲ್ಲಿ, ಮಲಿಕ ಕಾಫೂರನ ದಂಡಯಾತ್ರೆಯನ್ನು ಗುರುತಿಸಿರಿ. (ಗೃಹಪಾಠ)

(೫) ಕೆಳಗೆ ಕೊಟ್ಟ ವಾಕ್ಯಗಳಲ್ಲಿ ತೆರವು ಬಿಟ್ಟಿರುವ ಸ್ಥಳಗಳಲ್ಲಿ ಯೋಗ್ಯ ಶಬ್ದ ತುಂಬಿರಿ:—

(ಅ) ಜಲಾಲುದ್ದೀನ ಖಿಲ್ಜಿಯ ಆಳಿಕೆಯಲ್ಲಿ ಮುಸಲ್ಮಾನರಾದ ಮಂಗೋಲರಿಗೆ.............................ರೆಂದು ಹೆಸರು ಬಂತು.

(ಆ) ಅಲಾಉದ್ದೀನನ ದೇವಗಿರಿಯ ಮುತ್ತಿಗೆಯ ಕೊನೆಯಲ್ಲಿ.................................ಪ್ರಾಂತವು ಅವನ ಕೈವಶವಾಯಿತು.

(ಇ) ಮುಹಮ್ಮದ ತುಘಲಕನ ಆಳಿಕೆಯಲ್ಲಿ ಎರಡು ಹೊಸರಾಜ್ಯಗಳು ಉದಯಿಸಿದವು: ೧.................................೨.................................

## ೫ನೆಯ ಪ್ರಕರಣ

# ಪಠಾಣ ಅರಸರ ಕಾಲದಲ್ಲಿ

### ಭಾರತದಲ್ಲಿಯ ಸಮಾಜ, ಸಂಸ್ಕೃತಿ ಮುಂತಾಗಿ

**[ಮೊದಲುಮಾತು :—**

**ಭಾರತದಲ್ಲಿ ಹಿಂದು ಮತ್ತು ಮುಸಲ್ಮಾನರ ಸಂಪರ್ಕ**
**(ಕ್ರಿ. ಶ. ೭ ನೆಯ ಶತಮಾನದ ಮಧ್ಯದಿಂದ ಕ್ರಿ. ಶ. ೧೫೨೬ ರ ವರೆಗೆ).**

**ನೆನಪು :—** ಭಾರತದಲ್ಲಿ ಮುಸಲ್ಮಾನರ ಮೊಟ್ಟ ಮೊದಲಿನ ದಾಳಿಯೆಂದರೆ, ಮುಹಮ್ಮದ ಬಿನ್ ಕಾಸಿಮುನು ಸಿಂಧದಲ್ಲಿ ಕೈಗೊಂಡ ದಾಳಿಯೇ ಹೌದು. ಆದರೆ ವಾಸ್ತವಿಕವಾಗಿ ಭಾರತದಲ್ಲಿ ಇಸ್ಲಾಂ ಧರ್ಮವು ಇದಕ್ಕೂ ಮೊದಲೇ ದಕ್ಷಿಣದಲ್ಲಿ ಕಾಲಿಟ್ಟಿತು. ಕ್ರಿ. ಶ. ೭ ನೆಯ ಶತಮಾನದ ಮಧ್ಯದ ಸುಮಾರಿಗೆ ಅರಬ ವರ್ತಕರು ತ್ರಾವಣಕೋರದ ಜನರೊಡನೆ ವ್ಯಾಪಾರ ಸಂಬಂಧವನ್ನು ಬೆಳೆಸಿದರು. ಶಾಂತರೀತಿಯಿಂದ ಆ ದೇಶದಲ್ಲಿ ಒಳಹೊಕ್ಕರು. ಮಲಬಾರದ ಅರಸನೊಬ್ಬನು ಇಸ್ಲಾಂ ಧರ್ಮದೀಕ್ಷೆಯನ್ನು ಪಡೆದು ಮಕ್ಕಾ ಯಾತ್ರೆಗೆ ಹೋದನು. ಶ್ರೀ ಶಂಕರಾಚಾರ್ಯರ ಹುಟ್ಟೂರು ಮುಸಲ್ಮಾನ ಧರ್ಮವನ್ನು ಸ್ವೀಕರಿಸಿದ ಒಬ್ಬ ಚಿಕ್ಕ ರಾಜನ ಪ್ರದೇಶವಾಗಿದ್ದಿತಂತೆ. ಮುಹಮ್ಮದ ಕಾಸಿಮನ ದಾಳಿಯಿಂದಂತೂ ಸಿಂಧವು ಮುಸಲ್ಮಾನ ರಾಜ್ಯವಾಯಿತು. ಒಟ್ಟಾರೆ, ಕ್ರಿ. ಶ. ೭ ನೆಯ ಶತಮಾನದ ಮಧ್ಯದಿಂದಲೇ ಹಿಂದು ಮತ್ತು ಮುಸಲ್ಮಾನ ಧರ್ಮಗಳು ಭಾರತದ ಒಂದಿಲ್ಲೊಂದು ಭಾಗದಲ್ಲಿ ಏಕತ್ರವಾಗಿರುವದು ಕಂಡುಬರಹತ್ತಿತು. ಆದುದರಿಂದ, ಆಗಿನಿಂದಲೇ ಈ ಎರಡೂ ಧರ್ಮಗಳು ಪರಸ್ಪರ ಪ್ರಭಾವ ಬೀರಹತ್ತಿದವೆಂಬದು ಖಂಡಿತ. ಬಳಿಕ ೧೧ ನೆಯ ಶತಮಾನದಲ್ಲಿ ಘಜನೀ ಮಹಮೂದ ಹಾಗು ಘೋರೀ ಮುಹಮ್ಮದ ಇವರು ಭಾರತದ ಮೇಲೆ ದಾಳಿ ಮಾಡಿದರು. ಅವರ ತರುವಾಯ ಪಠಾಣ ಅರಸರು ೩೨೦ ವರುಷ ದಿಲ್ಲಿಯಲ್ಲಿ ಸುಲ್ತಾನರೆಂದು ರಾಜ್ಯಭಾರ ಮಾಡಿದರು. ಈ ಅರಸರ ಕಾಲದಲ್ಲಿ ಭಾರತದ ಮುಸಲ್ಮಾನ ಮತ್ತು ಹಿಂದುಗಳಲ್ಲಿ ರಾಜ-ಪ್ರಜೆಗಳೆಂಬ ಹೊಸದೊಂದು ಸಂಬಂಧವುಂಟಾಯಿತು. ಅವರೀರ್ವರ ಸಂಪರ್ಕವು ನಿಕಟವಾಯಿತು. ಹಿಂದು ಮತ್ತು ಇಸ್ಲಾಂ ಧರ್ಮಗಳು ಪರಸ್ಪರ ಹೆಚ್ಚು ಪ್ರಭಾವ

ಬೀರಹತ್ತಿದವು. ಇಷ್ಟೇ ಅಲ್ಲ: ಧರ್ಮ, ಸಂಸ್ಕೃತಿ, ವಾಸ್ತುಶಿಲ್ಪ, ಲಲಿತಕಲೆ, ಜನ-ಜೀವನ ಇವುಗಳಲ್ಲಿ ಬರಬರುತ್ತ ಎರಡೂ ಧರ್ಮಗಳ ಸಮನ್ವಯ (ಒಂದುತನ)ವೂ ಕಣ್ಣಿಗೆ ಬೀಳತೊಡಗಿತು! ಈ ಅಂಶಗಳನ್ನೇ ಈ ಪ್ರಕರಣದಲ್ಲಿ ಕಾಣುವಿರಿ.]

**ಸಮಾಜ** (ಜನಜೀವನ) :— ಘಜನೀ ಮಹಮೂದ, ಘೋರೀ ಮುಹಮ್ಮದ ಇವರು ಭಾರತದ ಮೇಲೆ ಮಾಡಿದ ದಾಳಿಗಳಲ್ಲಿ ವಿಪರೀತ ಕೊಲೆ, ಸುಲಿಗೆ ಮತ್ತು ಧರ್ಮಾಂತರಗಳು ನಡೆದರೂ ಸಮಾಜದಲ್ಲಿ ಹಿಂದುಗಳೇ ಬಹು ಸಂಖ್ಯಾಕರಾಗಿ ಉಳಿದರು. ಅಲಾಉದ್ದೀನನ ದಬ್ಬಾಳಿಕೆಯಿಂದಲೂ ಈ ಪರಿಸ್ಥಿತಿಯಲ್ಲಿ ಬದಲಾವಣೆ ಆಗಲಿಲ್ಲ. ಸ್ವಧರ್ಮಾಭಿಮಾನದಿಂದ ತುಂಬಿದ ಮುಸಲ್ಮಾನ ಅರಸರು ಹಿಂದು ಧರ್ಮದ ವಿರುದ್ಧ ಕೈಕೊಂಡ ಕೃತಿಗಳಿಂದ, ಹಿಂದು ಜನರ ಧರ್ಮಾಭಿಮಾನವು ಹೆಚ್ಚಿತೇ ಹೊರತು ಕುಗ್ಗಲಿಲ್ಲ. ಹಿಂದು ಧರ್ಮದಲ್ಲಿ ಜಾತಿನಿರ್ಬಂಧಗಳನ್ನು ಮತ್ತೂ ಬಿಗಿಮಾಡಲಾಯಿತು. ಸ್ವಾಭಾವಿಕವಾಗಿ, ಸರಕಾರದ ದೊಡ್ಡ ದೊಡ್ಡ ಅಧಿಕಾರಗಳು ಮುಸಲ್ಮಾನರಿಗೆ ಮೀಸಲಾಗಿದ್ದವು. ಆದರೆ ವ್ಯಾಪಾರ ಉದ್ಯೋಗಗಳಲ್ಲಿ ಹಿಂದುಗಳದೇ ಮೇಲುಗೈ. ಸಾಮಾನ್ಯವಾಗಿ, ಕಷ್ಟಬಟ್ಟು ದುಡಿದು ಹೊಟ್ಟೆಹೊರೆದುಕೊಳ್ಳುವದೇ ಹಿಂದು ಜನರಿಗೆ ಉಪಜೀವನದ ಮಾರ್ಗವಾಗಿದ್ದಿತು.

ಮುಸಲ್ಮಾನರ ಭೋಗ ವಿಲಾಸಗಳು ಬೆಳೆದವು. ಮದ್ಯಪಾನ, ಜೂಜಾಟ ಮಂತಾದವು ಜನಪ್ರಿಯವಾದವು. ಶ್ರೀಮಂತರ ಭೋಗವಿಲಾಸಗಳಲ್ಲಿ ಕಡು ಬಡವರನ್ನು ಕೇಳುವವರೇ ಇರಲಿಲ್ಲ. ಹಿಂದು ಸಮಾಜದಲ್ಲಿ ಸ್ತ್ರೀಯರ ಬಾಲ ವಿವಾಹ, ಪರದಾಪದ್ಧತಿಗಳು ಈ ಕಾಲದಲ್ಲಿಯೆ ಪ್ರಾರಂಭವಾದವು. ಒಕ್ಕಲ ತನವು ಜನರ ಮುಖ್ಯ ಉದ್ಯೋಗವಾಗಿತ್ತು. ಆದರೂ ಹಳ್ಳಿ ಪಟ್ಟಣಗಳಲ್ಲಿ ಕೆಲವು ಮುಖ್ಯ ಕಸಬುಗಳು ಉತ್ತಮರೀತಿಯಲ್ಲಿ ಸಾಗಿದ್ದವು. ಬಂಗಾಲದ ಜನರು ಕೈಗಾರಿಕೆಗಳಲ್ಲಿಯೂ ವ್ಯಾಪಾರದಲ್ಲಿಯೂ ಮುಂದುವರೆದಿದ್ದರು. ನಯವಾದ ನೂಲಿನ ಬಟ್ಟೆ, ರೇಶಿಮೆಯ ವಸ್ತ್ರ, ಜರದ ಪೀತಾಂಬರ, ಕಾಗದ ಇವೇ ಮುಂತಾದವನ್ನು ಅವರು ತಯಾರಿಸುತ್ತಿದ್ದರು. ಅಲ್ಲಿ ವರುಷದಲ್ಲಿ ಎರಡು ಸಲ ಬತ್ತದ ಬೆಳೆ. ಗೋದಿ, ಜವೆಗೋದಿ, ದ್ವಿದಳಧಾನ್ಯ, ಮಸಾಲೆ ಸಾಮಾನು,[೧] ಕಾಯಿ-ಪಲ್ಯ, ಹಣ್ಣು-ಹಂಪಲುಗಳು ವಿಪುಲವಾಗಿ ಬೆಳೆ

೧. ಸಾಸಿವೆ, ಶುಂಠಿ ಇತ್ಯಾದಿ.

ಯುತ್ತಿದ್ದವು. ಗುಜರಾತದ ಜನರು ಹತ್ತಿಯಿಂದ ತಯಾರಿಸುತ್ತಿದ್ದ ಬಟ್ಟೆಗಳು ಜೇಡಹುಳದ ಬಲೆಯಷ್ಟು ತೆಳ್ಳಗಿರುತ್ತಿದ್ದವಂತೆ. ಕರೀದ್ರಾಕ್ಷೆ ಮತ್ತು ರತ್ನಗಂಬಳಿಗಳಿಗಾಗಿ ಗುಜರಾತವು ಪ್ರಸಿದ್ಧವಿತ್ತು. ಹೆಣಿಗೆ, ಕಸೂತಿ ಕೆಲಸಗಳಲ್ಲಿ ಅಲ್ಲಿಯ ಹೆಂಗಳೆಯರು ಕುಶಲರಿದ್ದರು. ದಕ್ಷಿಣದಲ್ಲಿ 'ಮಾಬಾರ'ವು ಅತಿ ಧನಾಢ್ಯ ದೇಶ. ಅಲ್ಲಿಯ ಜನರಿಗೆ ಕುದುರೆಗಳೆಂದರೆ ಬಲು ಪ್ರೀತಿ. ಕೇಳಿದಷ್ಟು ಬೆಲೆಕೊಟ್ಟು ಅವುಗಳನ್ನು ಅವರು ಕೊಂಡುಕೊಳ್ಳುವರು. 'ಕಯಾಲ' ಬಂದರದಲ್ಲಿ ಮುತ್ತುಗಳ ವ್ಯಾಪಾರವು ಹೆಚ್ಚಾಗಿ ನಡೆಯುತ್ತಿತ್ತು.

ಆ ಕಾಲದಲ್ಲಿ ಭಾರತವು ಭೂಮಾರ್ಗದಿಂದ ಅಫಗಾನಿಸ್ತಾನ, ಇರಾಣ, ಮಧ್ಯಏಶಿಯಗಳೊಡನೆಯೂ, ಜಲಮಾರ್ಗದಿಂದ ಯುರೋಪ, ಆಫ್ರಿಕಾ, ಚೀನದೇಶಗಳೊಂದಿಗೂ ವ್ಯಾಪಾರ ಮಾಡುತ್ತಿತ್ತು.

ಮುಸಲ್ಮಾನ ಅರಸರೂ ಸರದಾರರೂ ಗುಲಾಮರನ್ನು ಕೊಂಡು ಸಲಹುತ್ತಿದ್ದರು. ಕೆಲವು ಗುಲಾಮರು ತಮ್ಮ ಯೋಗ್ಯತೆ, ಬುದ್ಧಿಶಕ್ತಿಗಳಿಂದ ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಶ್ರೇಷ್ಠ ಪದವಿಗೇರಿದರು.

ಸಮಾಜದಲ್ಲಿ ಸ್ತ್ರೀಯರಿಗೆ ಗೌರವವಿತ್ತು. ಅವರ ಸಂಸ್ಕೃತಿಯು ಅವರ ಸಾಮಾಜಿಕ ದರ್ಜೆಗಳಿಗನುಸಾರವಾಗಿತ್ತು. ಸಾಮಾನ್ಯವಾಗಿ, ಹಳ್ಳಿಗಳಲ್ಲಿ ಹೆಂಗಸರು ಮನೆಗೆಲಸಗಳಲ್ಲಿ ಕಾಲಕಳೆದರೆ, ಪಟ್ಟಣಗಳಲ್ಲಿ ಮೇಲ್ದರ್ಜೆಯ ಹೆಂಗಸರು ಕಲಾಕೌಶಲಗಳನ್ನು ಬೆಳೆಯಿಸಿಕೊಳ್ಳುವದರಲ್ಲಿ ಕಾಲಕಳೆಯುತ್ತಿದ್ದರು. 'ಸತಿ ಹೋಗುವದು' ಹಿಂದುಗಳ ಕೆಲವು ಪಂಗಡಗಳಲ್ಲಿ ರೂಢಿಯಲ್ಲಿತ್ತು. ಆದರೆ ಇದಕ್ಕೆ ಸುಲ್ತಾನನಿಂದ ಅಪ್ಪಣೆಪಡೆಯುವದು ಅಗತ್ಯವಿತ್ತೆಂದು ತೋರುತ್ತದೆ.

**ಸಂಸ್ಕೃತಿ :—** ಭಾರತೀಯರ ಸಂಪರ್ಕವಾದಮೇಲೆ ಮುಸಲ್ಮಾನರ ಸಂಸ್ಕೃತಿಯು ಹಿಂದು ಸಂಸ್ಕೃತಿಯ ಪ್ರಭಾವಕ್ಕೊಳಗಾಯಿತು.

**ವಾಸ್ತುಶಿಲ್ಪ :—** ಪಠಾಣ ಅರಸರ ಆಳಿಕೆಯಲ್ಲಿಯ ವಾಸ್ತುಶಿಲ್ಪವು ಹಿಂದು-ಮುಸ್ಲಿಮರ ಶಿಲ್ಪಕಲೆಗಳ ಸಮ್ಮಿಶ್ರಣವಾಯಿತು. ಮುಸಲ್ಮಾನರ ವಾಸ್ತುಶಿಲ್ಪದಲ್ಲಿ ಅಲಂಕಾರಕ್ಕೆ ಅವಕಾಶವಿರಲಿಲ್ಲ.[೧] ಹಿಂದುಗಳ ವಾಸ್ತುಶಿಲ್ಪ

೧. ಬೋಳಾದ ಗುಮ್ಮಟ, ಮೊನಚಾದ ಕಮಾನು, ಕೃಶವಾದ ಸ್ತಂಭಗೋಪುರಗಳು, ಇವು ಅವರ ಶಿಲ್ಪಕಲೆಯ ವಿಶೇಷ ಲಕ್ಷಣಗಳು.

ವಲ್ಲಿ ಅಂಗಾಂಗಗಳಲ್ಲಿಯೂ ಸುಂದರ ಕೆತ್ತನೆಯ ಕೆಲಸ. ಪಠಾಣರ ವಾಸ್ತು ಶಿಲ್ಪದಲ್ಲಿ ಈ ಎರಡೂ ಶೈಲಿಗಳು ವಿವಿಧ ರೀತಿಯಲ್ಲಿ ಕಲೆತು ಕಂಗೊಳಿಸುತ್ತಿವೆ. ದಿಲ್ಲಿಯ ವಾಸ್ತುಶಿಲ್ಪದಲ್ಲಿ ಇಸ್ಲಾಂ ಶಿಲ್ಪಕಲೆಯ ಪ್ರಭಾವವೇ ಹೆಚ್ಚು. ಆದರೆ ಜೋನಪುರ, ಬಂಗಾಲ, ಗುಜರಾತ, ಕಾಶ್ಮೀರಗಳಲ್ಲಿ ಅಲ್ಲಲ್ಲಿಯ ಹಿಂದುಗಳ ಶೈಲಿಯದೇ ಮೇಲುಗೈ.

**ಸಾಹಿತ್ಯ ಸಂಗೀತ :—** ಇವುಗಳಲ್ಲಿಯೂ ಹಿಂದು-ಮುಸ್ಲಿಂ ಸಂಸ್ಕೃತಿ ಗಳ ಸಮನ್ವಯ (ಸಮ್ಮಿಶ್ರಣ) ವನ್ನು ಕಾಣಬಹುದು. ಫಾರ್ಸೀ ಭಾಷೆಯು ರಾಜಭಾಷೆಯಾಗಿತ್ತು. ಅದೇ ಒಡ್ಡೋಲಗದ ಭಾಷೆ, ಆಡಳಿತದ ಭಾಷೆ. ಆದರೆ ಜನತೆಯ ಭಾಷೆ, ಹಿಂದಿ. ಈ ಕಾಲದಲ್ಲಿ ಹೊಸದಾಗಿ ಉದಯಿಸಿದ ' ಉರ್ದು '[೧] ಭಾಷೆಯು ಹಿಂದು ಮತ್ತು ಮುಸಲ್ಮಾನರ ಭಾಷೆಗಳ ಸಮನ್ವ ಯದ ಭಾಷೆ. ಪರಸ್ಪರ ಧರ್ಮಗಳನ್ನು ತಿಳಿದುಕೊಳ್ಳುವ ಅಭಿಲಾಷೆಯಿಂದ ಮುಸಲ್ಮಾನ ವಿದ್ವಾಂಸರು ಹಿಂದು ಧರ್ಮ ಗ್ರಂಥಗಳನ್ನು ಅಭ್ಯಸಿಸಿ ತರ್ಜುಮೆ ಮಾಡಿದರು. ಹಿಂದು ಗ್ರಂಥಕಾರರು ಫಾರ್ಸೀ ಭಾಷೆಯಲ್ಲಿ ಗ್ರಂಥಗಳನ್ನು ರಚಿ ಸಿದರು. ಎಷ್ಟೋ ಮುಸಲ್ಮಾನ ಸಾಹಿತಿಗಳು ಹಿಂದೀ ಭಾಷೆಯಲ್ಲಿ ಕಾವ್ಯ ಗಳನ್ನು ರಚಿಸಿದರು. ಹಿಂದು ಸಾಹಿತಿಗಳು ಉರ್ದು ವಾಙ್ಮಯವನ್ನು ಬೆಳೆ ಸಿದರು. ಅಲಾಉದ್ದೀನ ಖಿಲ್ಜಿಯ ಆಸ್ಥಾನ ಕವಿಯಾದ ' ಅಮೀರ ಖುಸ್ರು ' ಫಾರ್ಸೀ ಹಿಂದೀ ಭಾಷೆಗಳೆರಡರಲ್ಲಿಯೂ ಉದ್ದಾಮ ಕವಿ. ಅವನಿಗೆ ಸಂಸ್ಕೃತ ದಲ್ಲಿಯೂ ಪಾಂಡಿತ್ಯವಿದ್ದಿತು. ಸಂಗೀತದಲ್ಲಿಯೂ ಜ್ಞಾನವಿತ್ತು. ಭಾರತ ಸಂಗೀತಕಲೆಗೆ ಇವನು ಹೊಸ ಕಳೆಯನ್ನು ಕೊಟ್ಟನು. ತನ್ನ ಹಿಂದೀ ಕವನ ಗಳಲ್ಲಿ ಹಳ್ಳಿಯ ಬಾಳಿನ ರಸಿಕತೆ, ವಿವಿಧ ಋತುಗಳ ಶೃಂಗಾರ ಇವೇ ಮುಂತಾದವನ್ನು ಚಿತ್ರಿಸಿರುವನು. ಆತನ ಕವನಗಳು ಉತ್ತರ ಭಾರತದಲ್ಲಿ ಇಂದಿಗೂ ಜನಪ್ರಿಯವಾಗಿವೆ.

**ಹಿಂದು-ಮುಸಲ್ಮಾನರಲ್ಲಿ ಹೆಚ್ಚಿನ ಬಳಕೆ :—** ಹಿಂದು ಮತ್ತು ಮುಸಲ್ಮಾನ ಅರಸು-ಮನೆತನಗಳಲ್ಲಿ ಕೆಲವು ಅಂತರ್ವಿವಾಹಗಳಾದವು. ಇದ ರಿಂದ ಹಿಂದುಗಳ ಧರ್ಮಕಲ್ಪನೆ, ಸಾಮಾಜಿಕ ಸಂಪ್ರದಾಯಗಳು ಹಿಂದು

೧. ಸಂಸ್ಕೃತ ಭಾಷೆಯಿಂದ ಹುಟ್ಟಿದ ಭಾಷೆಗಳ ಶಬ್ದಗಳೊಂದಿಗೆ ಫಾರ್ಸೀ ಅರಬೀ ಮತ್ತು ತುರ್ಕೀ ಭಾಷೆಗಳ ಶಬ್ದಗಳು ಬೆರೆತು ಉಂಟಾದ ಭಾಷೆ.

ಮನೆತನಗಳಲ್ಲಿ ತಲೆದೋರತೊಡಗಿದವು.[೧] ಭಾರತೀಯರ ಸಂಪರ್ಕದಿಂದ ಮುಸಲ್ಮಾನರಲ್ಲಿ ಕೆಲವೊಂದು ಹೊಸ ಆಚಾರ-ವಿಚಾರಗಳು[೨] ಕಂಡುಬರಹತ್ತಿದವೆಂದು ಕೆಲವು ವಿದ್ವಾಂಸರ ಹೇಳಿಕೆ.

ಸಾರಾಂಶ :— ಭಾರತದಲ್ಲಿ ಪಠಾಣ ಅರಸರ ಆಳಿಕೆಯು ಪ್ರಾರಂಭವಾದಾಗ, ಹಿಂದು ಮುಸಲ್ಮಾನರ ನಡುವಿನ ಸಂಬಂಧವು ಹೇಗೇ ಇರಲಿ, ಅವರ ಆಳಿಕೆಯ ಕೊನೆಯ ಭಾಗದಲ್ಲಿ ಮಾತ್ರ ಅವರಲ್ಲಿ ಅತ್ಯಂತ ಮಹತ್ವದ ಬದಲಾವಣೆ ತೋರಿಬಂದಿತು. ಜೀವನದ ಎಲ್ಲ ಕ್ಷೇತ್ರಗಳಲ್ಲಿ-ಜನರ ಆಚಾರ-ವಿಚಾರ, ನಡೆ-ನುಡಿ, ಶೀಲ—ಸ್ವಭಾವ, ರೂಢಿ-ಸಂಪ್ರದಾಯ ಕಲಾಕೌಶಲ ಇವೆಲ್ಲವುಗಳಲ್ಲಿ—ಹಿಂದು ಮತ್ತು ಇಸ್ಲಾಂ ಸಂಸ್ಕೃತಿಗಳು ಒಹುಮಟ್ಟಿಗೆ ಸಮರಸವಾಗಿ ಕಲೆತು ಒಂದುಗೂಡಿದ್ದವು.

ಈ ವಿಲಕ್ಷಣ ಪರಿಸ್ಥಿತಿಯನ್ನು ಪ್ರತ್ಯಕ್ಷ ಕಂಡ ಬಾಬರನು ಇದನ್ನು "ಹಿಂದುಸ್ತಾನೀ ಪದ್ಧತಿ" ಎಂಬ ಹೊಸ ಹೆಸರಿನಿಂದ ಕರೆದನಂತೆ.

**ಸಾಧು—ಸಂತರು ಹಾಗೂ ಸೂಫಿಗಳು :—**

ನೆನಪು :— ೧೧ ನೆಯ ಶತಮಾನದಿಂದ ಭಾರತದಲ್ಲಿ ಮತ್ತೆ ಮುಸಲ್ಮಾನರ ದಾಳಿಗಳಾಗತೊಡಗಿದವು. ಆಗಲೂ ದಿಲ್ಲಿಯ ಪಠಾಣ ಅರಸರ ಆಳಿಕೆಯಲ್ಲೂ ಮುಸಲ್ಮಾನರು ಹಿಂದುಗಳನ್ನು ಧರ್ಮಾಂತರ ಮಾಡುವ ಕಾರ್ಯದಲ್ಲಿ ತೊಡಗಿದರು. ಇದರಿಂದಲೂ ಮತ್ತಿತರ ಕಾರಣಗಳಿಂದಲೂ ಭಾರತದ ಹಿಂದು ಮುಸಲ್ಮಾನರಲ್ಲಿ ಹಗೆತನವು ಬೆಳೆದು ಬಲಿಯಿತು. ಜನಜೀವನವು ದುಃಖಮಯವಾಯಿತು.

**ಹಿಂದು ಮುಸಲ್ಮಾನರನ್ನು ಒಟ್ಟುಗೂಡಿಸುವ ಪ್ರಯತ್ನಗಳು :—**

ಭಾರತದಲ್ಲಿ ಮೇಲೆ ಹೇಳಿದ ಪರಿಸ್ಥಿತಿಯಿದ್ದಾಗ, ಮಾನವ ಹಿತನಿಷ್ಠರಾದ ಕೆಲವು ಮಹಾಪುರುಷರು ಇದನ್ನು ಕಂಡು ಮನಸ್ಸಿನಲ್ಲಿ ಮರುಗಿದರು. ಹಿಂದು ಮುಸಲ್ಮಾನರನ್ನು ಒಟ್ಟುಗೂಡಿಸುವ ಪ್ರಯತ್ನಗಳನ್ನು ಕೈಕೊಂಡರು. ಎರಡೂ ಧರ್ಮಗಳಿಂದ ಉಭಯರಿಗೂ ಒಪ್ಪಿಗೆಯಾಗಬಹುದಾದ ತತ್ತ್ವಗಳನ್ನು

೧. ಮೊದಮೊದಲಿಗೆ ಮಾತ್ರ ಪರಿಸ್ಥಿತಿ ಹೀಗಿದ್ದಂತೆ ತೋರುವದಿಲ್ಲ. ಮುಸಲ್ಮಾನರು ಹಿಂದು ಸ್ತ್ರೀಯರನ್ನು ಮದುವೆಯಾದರೂ ಪರಸ್ಪರ ದ್ವೇಷಾಸೂಯೆಗಳು ಕಡಿಮೆಯಾಗಲಿಲ್ಲ.

೨. ಸಾಧು-ಸತ್ಪುರುಷರ ಪೂಜೆ ಇತ್ಯಾದಿ.

ಶೋಧಿಸಿ, ಜನರಿಗೆ ಹೊಸದೊಂದು ಮಾರ್ಗವನ್ನು ತೋರಿಸಿಕೊಟ್ಟರು. ಇದೇ 'ಭಕ್ತಿ ಪಂಥ' (ಭಕ್ತಿ ಮಾರ್ಗ) ವೆಂದು ಹೆಸರು ಪಡೆಯಿತು.[೧] ಈ ರೀತಿಯಲ್ಲಿ ಆಗ 'ಧರ್ಮಸುಧಾರಣೆ' ಯಾಯಿತು. ಈ ಸುಧಾರಕರನ್ನೇ 'ಸಾಧು' ಗಳೆಂದೂ 'ಸಂತ' ರೆಂದೂ ಕರೆಯಲಾಗುತ್ತದೆ. ಮೊದಲು ಮುಸಲ್ಮಾನ ಧರ್ಮದವರಿದ್ದು ಭಕ್ತಿಮಾರ್ಗವನ್ನು ಉಪದೇಶಿಸಿದ ಸಾಧುಗಳೇ ಸೂಫಿಗಳು.[೨]

ಕ್ರಿ. ಶ. ೧೪–೧೫ ನೆಯ ಶತಮಾನಗಳಲ್ಲಿ ಆಗಿಹೋದ ಸಾಧುಸಂತರಲ್ಲಿ ರಾಮಾನಂದ, ಕಬೀರದಾಸ, ಗುರು ನಾನಕ ಇವರು ಮುಖ್ಯರು.[೩]

**ಇವರ ಸಾಮಾನ್ಯ ಉಪದೇಶಗಳು:—** ೧ ಎಲ್ಲ ಧರ್ಮಗಳೂ ಮೂಲ ರೂಪದಲ್ಲಿ ಸಮಾನವಾದುವು. ೨ ಪರಮೇಶ್ವರನು (ದೇವರು) ಒಬ್ಬನೇ. ೩ ಮಾನವನ ದೊಡ್ಡಸ್ತಿಕೆಯು ಅವನ ಹುಟ್ಟಿನಲ್ಲಿಲ್ಲ; ಅದು ಅವನ ಕೃತಿಗಳನ್ನು ಅವಲಂಬಿಸಿದೆ. ೪ ಭಕ್ತಿಮಾರ್ಗದಿಂದ ಎಲ್ಲರಿಗೂ ಮೋಕ್ಷ ದೊರೆಯುವದು.

ಸಂತರು ಧರ್ಮಾಚರಣೆಯಲ್ಲಿಯ ಅತಿನಿಷ್ಠೆ, ಬಾಹ್ಯಾಡಂಬರ, ಪುರೋಹಿತರ ಪ್ರಾಬಲ್ಯ ಇವುಗಳನ್ನು ಬಲವಾಗಿ ವಿರೋಧಿಸಿದರು.

**ರಾಮಾನಂದರು :—** (ಕ್ರಿ. ಶ. ೧೩೯೯–೧೪೧೫).

ಇವರ ಹುಟ್ಟಿದ ಊರು ಪ್ರಯಾಗ (ಅಲಹಾಬಾದ). ಪುಣ್ಯಸದನನೆಂಬ ಕನೋಜ-ಬ್ರಾಹ್ಮಣನು ಇವರ ತಂದೆ. ತಾಯಿಯ ಹೆಸರು, ಸುಶೀಲೆ. ವೈದಿಕ ವಿದ್ಯೆ ಕಲಿಯಲಿಕ್ಕೆ ರಾಮಾನಂದರು ಕಾಶಿಗೆ ಕಳುಹಲ್ಪಟ್ಟರು. ಅದು ಮುಗಿದ ಬಳಿಕ 'ರಾಘವಾನಂದ' ರ[೪] ಶಿಷ್ಯರಾದರು. ಆದರೆ ಅವರ ಉಪದೇಶದ ಕೆಲವು ಅಂಶಗಳು ರಾಮಾನಂದರಿಗೆ ಸರಿಬೀಳಲಿಲ್ಲ. ಆದುದರಿಂದ, ಕೆಲವು ಕಾಲದಮೇಲೆ ಅವರಿಂದ ಬೇರೆಯಾಗಿ ರಾಮಾನಂದರು ತಮ್ಮದೇ ಆದ ಪಂಥ ವೊಂದನ್ನು ಸ್ಥಾಪಿಸಿದರು.

---

೧. ಇಸ್ಲಾಂ ಧರ್ಮದ ತತ್ತ್ವಗಳು ಹಿಂದು ಧರ್ಮಕ್ಕೆ ಹೊಸವಲ್ಲ. ಉಪನಿಷತ್ತುಗಳು ದೇವರು ಒಬ್ಬನೆಂದು ಸಾರುತ್ತಿವೆ.

ಭಕ್ತಿಮಾರ್ಗವಾದರೂ ಹೊಸದಲ್ಲ. ಭಗವದ್ಗೀತೆಯಲ್ಲಿ ಭಕ್ತಿಯೋಗದ ಮಹಿಮೆ ಯನ್ನು ವರ್ಣಿಸಲಾಗಿದೆ.

೨. ಇವರು ಹಿಂದು ವೇದಾಂತದ ಪ್ರಭಾವಕ್ಕೊಳಪಟ್ಟವರೆಂದು ಹೇಳಲಾಗುತ್ತದೆ.

೩. ಪಂಢರಪುರದ ವಿಸೋಬಾ ಖೇಚರ ಎಂಬ ಸಂತರೂ ಇವರ ಸಮಕಾಲೀನರು. ಮಹಾರಾಷ್ಟ್ರದ ಸಂತರಲ್ಲಿಯ ನಾಮದೇವನು ಇವರ ಶಿಷ್ಯ.

೪. ಇವರು ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಪಂಗಡದವರು.

ಇವರು ಜಾತಿಗಳಲ್ಲಿ ಮೇಲು-ಕೀಳೆಂಬ ಭೇದಮಾಡಲಿಲ್ಲ. ಭಕ್ತಿಯು ಎಲ್ಲರನ್ನೂ ಪವಿತ್ರಮಾಡುವದೆಂದು ಇವರ ತತ್ತ್ವ. ಆದಕ್ಕಾಗಿಯೇ ಇವರು ಕೀಳು-ಜಾತಿಯವರೆಂದು ಕರೆಯಲಾಗುತ್ತಿದ್ದ ಜನರನ್ನೂ ಮುಸಲ್ಮಾನರನ್ನೂ ಸ್ತ್ರೀಯರನ್ನೂ ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಅವರಲ್ಲಿ ೧೩ ಜನ ಶಿಷ್ಯರು ಪ್ರಸಿದ್ಧಿಪಡೆದರು.[೧] ಅವರಲ್ಲಿ ಕಬೀರನು ಮುಸಲ್ಮಾನ ನೇಕಾರ; ಸೇನಾ ಎಂಬವನು ಕೆಲಸಿಗ; ರಾಯಿದಾಸನು ಚಮ್ಮಾರ; ಪದ್ಮಾವತಿಯು ಹೆಂಗಳೆ.

ರಾಮಾನಂದರು ಶಿಷ್ಯರೊಡನೆ ಪವಿತ್ರ ಕ್ಷೇತ್ರಗಳನ್ನು ಸಂದರ್ಶಿಸಿದರು. ಮಾಯಾವಾದಿಗಳು,[೨] ಬೌದ್ಧರು, ಜೈನರು ಮೊದಲಾದವರೊಂದಿಗೆ ವಾದ ಹೂಡಿ ಅವರನ್ನು ಸೋಲಿಸಿದರು. ಬಳಿಕ, ಅವರೆಲ್ಲರನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು.

ರಾಮಾನಂದರು ಗೋಪಿಕಾಸ್ತ್ರೀಯರಿಂದ ಸುತ್ತುವರಿಯಲ್ಪಟ್ಟ ಗೋಪಾಲ ಕೃಷ್ಣ (ರಾಧಾಕೃಷ್ಣ)ನ ಪ್ರತಿಯಾಗಿ ಶ್ರೀರಾಮನನ್ನು ಆರಾಧ್ಯ ದೇವತೆಯನ್ನಾಗಿ ಮಾಡಿಕೊಂಡರು. ಆದುದರಿಂದ, ಉತ್ತರ ಮತ್ತು ಮಧ್ಯ ಭಾರತದಲ್ಲಿ ಸೀತಾರಾಮರ ಪೂಜೆಯು ವಿಸ್ತಾರವಾಗಿ ಹಬ್ಬಿತು. ಇವರು ಧರ್ಮಬೋಧನೆಯನ್ನು ದೇಶಭಾಷೆ (ಹಿಂದಿ)ಯಲ್ಲಿ ಮಾಡಿದರು. ಇದರಿಂದ ಹಿಂದೀ ಭಾಷೆಗೆ ಪ್ರೋತ್ಸಾಹ ದೊರೆಯಿತು. ಶಿಷ್ಯರಲ್ಲಿ ಜಾತಿ ಭೇದ ಮಾಡಲಿಲ್ಲ. ಆದುದರಿಂದ, ಸಮಾಜದಲ್ಲಿ ಕೀಳುಜಾತಿಯವರೂ ಸಹಜವಾಗಿ ಮೇಲಕ್ಕೆ ಬಂದರು.

**ಕಬೀರದಾಸರು :**— ಕ್ರಿ. ಶ. ೧೪೪೦-೧೫೧೮.

ಇವರು ಹಿಂದು ಇಸ್ಲಾಂ ಧರ್ಮಗಳನ್ನು ಹೊಂದಿಕೆಯಾಗಿ ಮಾಡುವದಕ್ಕೆ ಅತ್ಯಂತ ಮನಃಪೂರ್ವಕವಾಗಿ ಪ್ರಯತ್ನಿಸಿದರು.

(ಇವರ ಜೀವನದ ಸಂಗತಿಗಳು ಅಷ್ಟೊಂದು ಸ್ಪಷ್ಟವಿಲ್ಲ. ಇವರ ಹುಟ್ಟು ಬೆಳಿಗೆಗಳ ಬಗೆಗೆ ಕತೆಯು ಹೀಗಿರುವದು :—

ಇವನೊಬ್ಬ ಬ್ರಾಹ್ಮಣ ವಿಧವೆಯ ಮಗ. ತಾಯಿಯು ಕೂಸನ್ನು ಕಾಶಿಯಲ್ಲಿ ಕೆರೆದಂಡೆಯೊಂದರಮೇಲೆ[೩] ಬಿಟ್ಟು ಹೋದಳು. ಅದನ್ನು ಯಾರೋ

೧. ಅನಂತಾನಂದ, ಸುರಸರಾನಂದ, ಸುಖಾನಂದ, ನರಹರೀಯಾನಂದ, ಯೋಗಾನಂದ, ಪೀಪಾ, ಕಬೀರ, ಭಾವಾನಂದ, ಸೇನಾ, ಧನ್ನಾ, ಗಾಲವಾನಂದ, ರಾಯಿದಾಸ, ಪದ್ಮಾವತೀ.

೨. 'ಜಗತ್ತು ಸುಳ್ಳು' ಎಂದು ವಾದಿಸುವ ಪಂಗಡದವರು.

೩. ಆ ಕೆರೆಯ ಹೆಸರು, 'ಲಹರ್ ತಲಾವ.'

ಮುಸಲ್ಮಾನ ನೇಕಾರ ದಂಪತಿಗಳು ನೋಡಿದರು. ಅಕ್ಕರತೆಯಿಂದ ತಮ್ಮ ಮನೆಗೊಯ್ದು ಸಾಕಿ ಸಲುಹಿದರು. ದೊಡ್ಡವನಾದಮೇಲೆ ಇವನೂ ನೇಕಾರನಾದನು.)

ಕಬೀರದಾಸರು ಬಾಲ್ಯದಿಂದಲೂ ಭಗವದ್ಭಕ್ತರು. ಸಾಧು-ಸಂತರಲ್ಲಿ ಶ್ರದ್ಧೆಯುಳ್ಳವರು. ಅವರಲ್ಲೂ ರಾಮಾನಂದರ ಶಿಷ್ಯರಾಗಬೇಕೆಂದು ಅವರ



ಕಬೀರದಾಸರು

ಹಂಬಲ. ಬ್ರಾಹ್ಮಣರಾದ ಅವರು ತನ್ನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳುವರೋ ಇಲ್ಲವೋ ಎಂಬ ಸಂದೇಹ. ಒಂದು ದಿನ ನಸುಕಿನಲ್ಲಿ ಕಬೀರದಾಸರು ಗಂಗಾನದಿಯ ಘಾಟಿನಮೇಲೆ ಅಡ್ಡ ಮಲಗಿದರು. ಅದು ರಾಮಾನಂದರು ಪ್ರತಿದಿನ ನದಿಗೆ ಸ್ನಾನಕ್ಕೆ ಹೋಗುವ ಮಾರ್ಗ. ಕಾಣದೆ ಅವರು ಕಬೀರನ ಮೇಲೆ ಕಾಲಿಟ್ಟರು. ಆದರೆ, ಕೂಡಲೆ ಮರುಕದಿಂದ 'ರಾಮ! ರಾಮ!' ಎಂದರು. ಇದೇ ಕಬೀರನಿಗೆ ಮಂತ್ರೋಪದೇಶವಾಯಿತು. ರಾಮಾನಂದರೇ ತನ್ನ ಗುರುಗಳೆಂದು ಸಾರಿದನು. ಇವನ ಭಕ್ತಿಗೆ ಮೆಚ್ಚಿದ ರಾಮಾನಂದರು ಇವನನ್ನು ತಮ್ಮ ಅಚ್ಚುಮೆಚ್ಚಿನ ಶಿಷ್ಯನನ್ನಾಗಿ ಮಾಡಿಕೊಂಡರು. ಕಬೀರದಾಸರು ಭಕ್ತಿ ಪಂಥದ ಉಪದೇಶಕರು. ಹಿಂದುಗಳೂ ಮುಸಲ್ಮಾನರೂ 'ಒಂದೇ ಮಣ್ಣಿನಿಂದ ತಯಾರಾದ ಪಾತ್ರೆಗಳಿದ್ದಂತೆ' ಎಂದು ಅವರ ಭಾವನೆ. ಹಿಂದು ಮುಸಲ್ಮಾನರಿಬ್ಬರೂ ಬಂಧುಬಾಂಧವರಂತಿರಬೇಕು, ನೆಮ್ಮದಿಯಿಂದ ಬಾಳಬೇಕೆಂದು ಅವರ ಹಿರಿಯಾಸೆ.

**ಉಪದೇಶ :**— ದೇವರು ಒಬ್ಬನೇ. ರಾಮ, ರಹೀಮ ಇವು ಅವನ ಬೇರೆ ಬೇರೆ ಹೆಸರುಗಳು. ಧರ್ಮಾಚರಣೆಯಲ್ಲಿ ಅತಿನಿಷ್ಠೆ, ಬಾಹ್ಯಾಡಂಬರಗಳ ಉಪಯೋಗವಿಲ್ಲ. ಭಕ್ತಿಯಿಂದ ಕೂಡಿದ ಭಜನೆಯೇ ಮೋಕ್ಷಕ್ಕೆ ನಿಜವಾದ ಸಾಧನ. ಮನುಷ್ಯನು ಮೋಸ, ಅಪ್ರಾಮಾಣಿಕತನ, ಹಿಂಸಾಚಾರ, ಕ್ರೂರತನಗಳನ್ನು ತ್ಯಜಿಸಬೇಕು, ಇಂತು ಮುಂತಾಗಿ. ಆದರೆ ಕಬೀರದಾಸರು ಬೈರಾಗಿಯಲ್ಲ; ಗೃಹಸ್ಥಾಶ್ರಮಿಗಳು. ಅವರು ಕೊನೆಯವರೆಗೂ ತಮ್ಮ ನೇಯ್ಗೆಯ ಕಸಬನ್ನು ಬಿಡಲಿಲ್ಲ. **ನೀರಿನಲ್ಲಿಯ ಕಮಲದಂತೆ ಬಾಳಿ ಬದುಕಿ,** ಇಹಲೋಕ ಯಾತ್ರೆಯನ್ನು ಮುಗಿಸಿದರು ಅವರು. ಅವರಿಗೆ ಕಮಾಲನೆಂಬ ಮಗನೂ ಕಮಾಲೀ ಎಂಬ ಮಗಳೂ ಇದ್ದರು.

**ಗುರುನಾನಕ :**— (ಕ್ರಿ. ಶ. ೧೪೬೯–೧೫೩೮)



ಗುರುನಾನಕ

ಇವರು ತಮ್ಮ ಕಾಲದ ಪ್ರಖ್ಯಾತ ಧರ್ಮೋಪದೇಶಕರು. ‘ಶೀಖ’ ಎಂಬ ಹೊಸ ಧರ್ಮದ ಸ್ಥಾಪಕರು. ಇವರು ಹುಟ್ಟಿದ ಊರು ಲಾಹೋರದ ಸಮೀಪದಲ್ಲಿಯ ಒಂದು ಗ್ರಾಮ.[1] ತಂದೆಯು ಅಲ್ಲಿಯ ಗ್ರಾಮಾಧಿಕಾರಿ; ಜಾತಿಯಿಂದ ಕ್ಷತ್ರಿಯನು.

ಗುರು ನಾನಕರಿಗೆ ಚಿಕ್ಕಂದಿನಲ್ಲಿಯೇ ವೇದಾಂತ ವಿಚಾರಗಳಲ್ಲಿ ತುಂಬಾ ಆಸಕ್ತಿ. ಆಟಪಾಟಗಳಿಗಿಂತ ಏಕಾಂತವಾಸವೇ ಇವರಿಗೆ ಹೆಚ್ಚಾಗಿ ರುಚಿಸುತ್ತಿತ್ತು. ಸದಾ ಧ್ಯಾನದಲ್ಲಿ ತೊಡಗಿ ತತ್ತ್ವಚಿಂತನೆಯಲ್ಲಿ ಕಾಲ ಕಳೆಯಹತ್ತಿದರು. ತಂದೆತಾಯಿಗಳಿಗೆ ಗಾಬರಿಯಾಯಿತು. ಮಗನ ಮನಸ್ಸನ್ನು ಬೇರೆ ಕಡೆಗೆ ತಿರುಗಿಸಲಿಕ್ಕೆ ಬಗೆಬಗೆಯ ಪ್ರಯತ್ನಗಳನ್ನು ಮಾಡಿದರು.[2] ಆದರೆ ಎಲ್ಲವೂ ವಿಫಲವಾದವು.

---

೧. ತಾಳ್ವಂದಿ. ಅದರ ಈಗಿನ ಹೆಸರು ನಾನಕನ.

೨. ದನಕರುಗಳನ್ನು ಕಾಯಲಿಕ್ಕೆ ಹಚ್ಚಿದರು. ವ್ಯಾಪಾರದಲ್ಲಿ ತೊಡಗಿಸಿದರು. ಮದುವೆ ಮಾಡಿದರು. ಕೊನೆಯದಾಗಿ ಸರಕಾರಿ ನೌಕರಿಯನ್ನು ಕೊಡಿಸಿದರು.

ಗುರು ನಾನಕರು ಆ ಕಾಲದ ಧರ್ಮ-ಸುಧಾರಕರ ಉಪದೇಶಗಳನ್ನು ಮನನ ಮಾಡಿದರು. ಕಬೀರದಾಸರ ಉಪದೇಶಗಳಿಂದ ಸ್ಫೂರ್ತಿಗೊಂಡರು. ಹಿಂದು ಮುಸ್ಲಿಮರನ್ನು ಒಂದುಗೂಡಿಸುವದೇ ಅವರ ಗುರಿಯಾಯಿತು. ಇದಕ್ಕಾಗಿ ಅವರು ಎರಡೂ ಧರ್ಮಗಳ ತತ್ತ್ವಗಳನ್ನು ಮೇಳಗೂಡಿಸಿ ಹೊಸ ದೊಂದು ಧರ್ಮವನ್ನು ಸ್ಥಾಪಿಸಿದರು. ಅದೇ 'ಶೀಖ' ಧರ್ಮ. ಹಿಂದುಗಳೂ ಮುಸಲ್ಮಾನರೂ ಅವರ ಶಿಷ್ಯರಾದರು. ಅವರಿಗೆ ಶೀಖರೆಂದು ಹೆಸರು.[೧]

**ಗುರುನಾನಕರ ಉಪದೇಶ** :— ದೇವರು ಒಬ್ಬನೇ. ಅವನು ನಮಗೆ ಕಾಣಿಸನು. ಎಲ್ಲೆಲ್ಲೂ ಇರುವನು. ಅವನಿಗೆ ಅಲ್ಲಾ, ಹರಿ, ರಾಮ ಮೊದ ಲಾದ ಯಾವ ಹೆಸರೂ ಇಲ್ಲ. ದೇವರಿಗೆ ಬೇಕಾದುದು ಭಕ್ತಿ, ಸದಾಚಾರ, ಗುರುಗಳಲ್ಲಿ ಪೂಜ್ಯಭಾವ. ಧರ್ಮದ ಹೆಸರಿನಲ್ಲಿ ದೇಶಾಟನೆ, ತೀರ್ಥಯಾತ್ರೆ ಮುಂತಾದವನ್ನು ಕೈಕೊಳ್ಳುವದು ವ್ಯರ್ಥ. ಇಂತು ಮುಂತಾಗಿ.

## ಅಭ್ಯಸನಗಳು.

(೧) ಕೆಳಗಿನ ವಾಕ್ಯಗಳಲ್ಲಿ ತೆರವಿರುವ ಸ್ಥಳಗಳನ್ನು ಯೋಗ್ಯ ಶಬ್ದಗಳಿಂದ ತುಂಬಿರಿ:—

............ ಮನೆತನದ ರಾಮಾನಂದರು ............ ಎಂಬಲ್ಲಿ ಜನಿಸಿದರು. ಅವರು ವಾದಗಳಲ್ಲಿ ............, ........ ಮತ್ತು ............... ಸೋಲಿಸಿ, ತಮ್ಮ ......ನ್ನಾಗಿ ಮಾಡಿಕೊಂಡರು. ರಾಮಾನಂದರ ಉಪದೇಶದ ಫಲವಾಗಿ ಭಾರತದಲ್ಲಿ ............... ಆರಾಧ್ಯ ದೇವತೆಗಳಾದರು.

(೨) 'ಕಬೀರದಾಸರಿಗೆ ಮಂತ್ರೋಪದೇಶ' ಈ ಕತೆಯನ್ನು ಹೇಳಿರಿ.

(೩) ೧೪-೧೫ ನೆಯ ಶತಮಾನಗಳಲ್ಲಿ ಆಗಿಹೋದ ಸಾಧುಸಂತರ ಸಾಮಾನ್ಯ ಉಪದೇಶಗಳನ್ನು ನೆನಪಿನಲ್ಲಿಡಿರಿ.

(೪) ಪಠಾಣ ಅರಸರ ಆಳಿಕೆಯಲ್ಲಿ, ಭಾರತದಲ್ಲಿ ಹಿಂದು ಮತ್ತು ಇಸ್ಲಾಂ ಸಂಸ್ಕೃತಿಗಳು ಸಮರಸವಾಗಿ ಬೆಳೆಯತೊಡಗಿದವು. ಈ ಹೇಳಿಕೆಗೆ ಉದಾಹರಣೆಗಳನ್ನು ಕೊಡಿರಿ. (ಗೃಹಪಾಠಕ್ಕಾಗಿ.)

೧. ಶೀಖರೆಂದರೆ ಶಿಷ್ಯರೆಂದು ಅರ್ಥ

## ೬ನೆಯ ಪ್ರಕರಣ

# ವಿಜಯನಗರ ಮತ್ತು ಬಹಮನೀ ರಾಜ್ಯಗಳು.

### ವಿಜಯನಗರದ ರಾಜ್ಯ

**ಉದಯ (ರಾಜ್ಯಸ್ಥಾಪನೆ) :—** ಕ್ರಿ. ಶ. ೧೩೩೬.

ದಿಲ್ಲಿಯ ಸುಲ್ತಾನ ಅಲಾಉದ್ದೀನ ಖಿಲ್ಜಿ ಮತ್ತು ಅವನ ಸೇನಾಪತಿ ಮಲಿಕ ಕಾಫೂರ ಇವರು ದಕ್ಷಿಣಾಪಥದಲ್ಲಿ ಕೈಕೊಂಡ ದಾಳಿಗಳ ಪರಿಣಾಮವಾಗಿ ದಕ್ಷಿಣದಲ್ಲಿಯ ದೇವಗಿರಿ ರಾಜ್ಯವು ಸುಲ್ತಾನನ ಆಳಿಕೆಗೆ ಒಳಪಟ್ಟಿತು. ಅದರ ಕೆಳಗಿನ ಪ್ರದೇಶವೆಲ್ಲ ಅವನ ಪ್ರಭಾವಕ್ಕೊಳಗಾಯಿತು. ಜಲಾಉದ್ದೀನ ಖಿಲ್ಜಿಯ ಆಳಿಕೆಯಲ್ಲಿ ವರಂಗಲ್ಲು ಸುಲ್ತಾನನ ಕೈವಶವಾಯಿತು. ಅತ್ತ ದಕ್ಷಿಣದ ಪಾಂಡ್ಯರ ರಾಜ್ಯದಲ್ಲಿ ಒಳ-ಜಗಳಗಳೆದ್ದ ಮೂಲಕ, ಬರಬರುತ್ತ ಮಧುರೆಯಲ್ಲಿಯೂ ಮುಸಲ್ಮಾನರದೇ ಆದ ಒಂದು ಮನೆತನವು ಆಳತೊಡಗಿತು.

ಆದರೆ ರಾಜ್ಯವನ್ನು ಕಳೆದುಕೊಂಡ ದ್ವಾರಸಮುದ್ರದ ಹೊಯ್ಸಳ ಮುಮ್ಮಡಿ ವೀರಬಲ್ಲಾಳನು ಮಾತ್ರ ಇತರರಂತೆ ಸುಮ್ಮನೆ ಕೂಡಲಿಲ್ಲ. ಅವನು ವರಂಗಲ್ಲಿನ ಕೃಷ್ಣನಾಯಕನೇ ಮೊದಲಾದವರನ್ನು ಹುರಿದುಂಬಿಸಿ ಹಿಂದು ರಾಜ್ಯದಲ್ಲಿ ಮತ್ತೆ ಜೀವಕಳೆ ತುಂಬಲು ಪ್ರಯತ್ನ ನಡೆಸಿದನು. ಇದಕ್ಕಾಗಿ ಅವನು ಮಧುರೆಯುವರೆಗೂ[1] ತಾನೇ ಸುತ್ತಾಡಿದನು. ಈತನ ಸ್ವರಾಜ್ಯ ಸ್ಥಾಪನೆಯ ಕಾರ್ಯದಲ್ಲಿ ಸಂಗಮ ವಂಶದ ಹುಕ್ಕ ಬುಕ್ಕರೆಂಬ ಅಣ್ಣತಮ್ಮಂದಿರು ಮುಂದಾಳುಗಳಾದರು. ಇವರು ಬಲ್ಲಾಳ ರಾಯನ ಆಳಿಕೆಯಲ್ಲಿ ತಮ್ಮ ಶೌರ್ಯ-ಸಾಹಸಗಳಿಗಾಗಿ ಹೆಸರಾಗಿದ್ದರು. ಇವರಿಗೆ ಮಹಾನುಭಾವರಾದ ಶ್ರೀ ವಿದ್ಯಾರಣ್ಯ ಸ್ವಾಮಿಗಳು ಸಲಹೆಗಾರರಾಗಿ ಸಹಾಯ ಸಲ್ಲಿಸಿದರು. ಇವರೆಲ್ಲರ ಪ್ರಯತ್ನದ ಪ್ರತಿಫಲವಾಗಿ ವಿಜಯನಗರವೆಂಬ ಹೊಸದೊಂದು ಹಿಂದು ರಾಜ್ಯವು ತುಂಗಭದ್ರಾತೀರದ ಹಂಪೆ[2] (ಪಂಪಾಕ್ಷೇತ್ರ) ಯಲ್ಲಿ ತಲೆಯೆತ್ತಿತು. ಹುಕ್ಕನೆ ಹರಿಹರರಾಯನೆಂಬ ಹೆಸರಿನಿಂದ ಆ ರಾಜ್ಯದ ಮೊದಲನೆಯ ಅರಸ

೧. ಮಧುರೆಯವರೆಗೆ.

೨. ಇದು ಬಳ್ಳಾರಿಜಿಲ್ಲೆಯಲ್ಲಿ ಹೊಸಪೇಟೆಯ ಹತ್ತಿರ ಹತ್ತೇ ಮೈಲು ದೂರದಲ್ಲಿದೆ.

(೩) **ಎರಡನೆಯ ಹರಿಹರ:**— ಇವನು ಬುಕ್ಕನ ಮಗ. ತಂದೆಯ ಅನಂತರ ಪಟ್ಟಕ್ಕೆ ಬಂದು ೨೭ ವರುಷ ರಾಜ್ಯವಾಳಿದನು. ಇವನು (ಕ್ರಿ. ಶ. ೧೩೮೦ ರಲ್ಲಿ) ಗೋವಾ ಪ್ರಾಂತವನ್ನು ಬಹಮನಿಯವರಿಂದ ಕಸಿದುಕೊಂಡನು. (ಕ್ರಿ. ಶ. ೧೩೯೮ ರಲ್ಲಿ) ರಾಯಚೂರು ಮುದಗಲ್ಲು ಕೋಟೆಗಳ ಸಲುವಾಗಿ ಕಲಬುರ್ಗಿಯ ಫಿರೋಜಖಾನನೊಡನೆ ಘೋರ ಕಾಳಗವಾಗಿ ಕೊನೆಗೆ ಒಪ್ಪಂದವಾಯಿತು. ಇವನ ಕಾಲದಲ್ಲಿ **ಕೆರೆಕಾಲುವೆಗಳು ಹೇರಳವಾಗಿ ಕಟ್ಟಲ್ಪಟ್ಟು ಸುಖದ ಸಮೃದ್ಧಿಯಾಯಿತು. ವ್ಯಾಪಾರವು ಅಪಾರವಾಗಿ ಬೆಳೆಯಿತು.** ವಿಜಯನಗರವಲ್ಲದೆ, **ದ್ವಾರಸಮುದ್ರ, ಪೆನುಗೊಂಡೆ, ಉದಯಗಿರಿ, ಬಂಕಾಪೂರ ಪಟ್ಟಣಗಳು ವ್ಯಾಪಾರದ ಪಡಮೂಲೆಗಳಾಗಿದ್ದವು.** ಈತನ ದೀರ್ಘ ಆಳಿಕೆಯಲ್ಲಿ **ವಿಜಯನಗರ ಸಾಮ್ರಾಜ್ಯದ ಪ್ರಭಾವವೂ ವೈಭವವೂ ಹೆಚ್ಚಿದವು.** ಇವನು ಉಜ್ವಲ ಶಿವಭಕ್ತನಾಗಿದ್ದನು.

(೪) ಮುಂದೆ ಹೆಸರಾದವನೆಂದರೆ **೨ ನೆಯ ದೇವರಾಯ** (ಕ್ರಿ. ಶ. ೧೪೨೪--೧೪೪೬). ಇವನಿಗೆ **ಪ್ರೌಢದೇವರಾಯನೆಂದೂ** ಹೆಸರಿದೆ. ಮುತ್ಸದ್ದಿಯಾದ ಈತನು ಚತುರ ಬಿಲ್ಲುಗಾರರೂ ಮೇಲಾದ ಕುದುರೆಗಳಿಂದ ಕೂಡಿದ ಒಳ್ಳೆಯ ರಾವುತರೂ ಆದ ಮುಸಲ್ಮಾನರನ್ನು ತನ್ನ ದಂಡಿನಲ್ಲಿ ಸೇರಿಸಿಕೊಂಡನು. ಅವರಿಗೆ ಜಾಗೀರುಕೊಟ್ಟು ಮಸೀದೆ ಕಟ್ಟಿಸಿಕೊಟ್ಟನು ! ಇವನ ಕಾಲದಲ್ಲಿ ವೀರಶೈವ ಮತವು ಘನತೆಗೇರಿತು. ಈ ಮತದಲ್ಲಿ ಈ ರಾಯನು ವಿಶೇಷ ವಿಶ್ವಾಸವುಳ್ಳವನಿದ್ದನು. ಇವನ ಮುಖ್ಯ ಮಂತ್ರಿ ಲಕ್ಕಣ್ಣದಂಡೇಶನೂ ದಂಡನಾಯಕ ಜಕ್ಕಣಾರ್ಯನೂ ವೀರಶೈವರಿದ್ದು ಆ ಮತದ ಬಗ್ಗೆ ಗ್ರಂಥಗಳನ್ನೂ ಬರೆದಿರುವರು. ಚಾಮರಸ, ಕುಮಾರವ್ಯಾಸರೆಂಬ ಪ್ರಸಿದ್ಧ ಕನ್ನಡ ಕವಿಗಳು ಇವನ ಕಾಲದಲ್ಲಿ ಆಗಿಹೋದರು.[೧] **ನಿಕೋಲೋ ಕೋಂಟಿ** ಮತ್ತು **ಅಬ್ದುರ್‌ರಝಾಕ** ಎಂಬ ಇಬ್ಬರು ವಿದೇಶೀಯ ಪ್ರವಾಸಿಕರು ಅನುಕ್ರಮವಾಗಿ ಇಟಲಿ ಇರಾಣಗಳಿಂದ ವಿಜಯನಗರಕ್ಕೆ ಬಂದುದು ಇವನ ಕಾಲದಲ್ಲಿಯೇ.

(೫) ಕ್ರಿ. ಶ. ೧೪೬೫ ರಲ್ಲಿ ಮೂರನೆಯ **ವಿರೂಪಾಕ್ಷನೆಂಬವನು** ಆಳುವಾಗ, ಸೇನಾಪತಿಯಾದ **ಸಾಳ್ವ ನರಸಿಂಹನು** ರಾಯನನ್ನು ತಳ್ಳಿ ತಾನೇ

---

೧. ಚಾಮರಸನ ಕಾವ್ಯ, ಪ್ರಭುಲಿಂಗಲೀಲೆ; ಕುಮಾರವ್ಯಾಸನ ಕಾವ್ಯ, ಕನ್ನಡ **ಭಾರತ.**

ಪಟ್ಟವನ್ನು ಆಕ್ರಮಿಸಿದನು. ಈತನು ಸಾಳ್ವ[1] ಮನೆತನದವನು. ಈ ಸಮಯ ದಿಂದ ಸುಮಾರು ೪೦ ವರುಷಗಳ ಅವಧಿಯಲ್ಲಿ ಬಹಮನೀ ರಾಜ್ಯವು ಒಡೆದು ಅದರಲ್ಲಿ ಐದು ಚಿಕ್ಕ ರಾಜ್ಯಗಳು[2] ಉಂಟಾದವು. ವಿಜಯನಗರ ರಾಜ್ಯಕ್ಕೆ ಸಂಬಂಧಿಸಿದ ರಾಯಚೂರು-ಮುದಗಲ್ಲು ಕೋಟೆಗಳನ್ನು ವಿಜಾಪುರ ರಾಜ್ಯ ಸ್ಥಾಪಕನಾದ **ಯುಸೂಫ ಆದಿಲಶಾಹನು** ಕೈವಶಪಡಿಸಿಕೊಂಡನು. ಆದುದ ರಿಂದ ಅವನ ಮೇಲೆ ಸಾಳ್ವನರಸಿಂಹನು ಏರಿಹೋಗಿ ಅದನ್ನು ಮತ್ತೆ ಗಳಿಸಿದನು ಅವನ ಮಗ ೨ ನೆಯ ನರಸಿಂಹನು ದುರ್ಬಲನಿದ್ದನು. ಆಗ ತುಳುನಾಡಿನ **ನರಸ**ನೆಂಬ ದಂಡನಾಯಕನು ಪಟ್ಟವೇರಿದ ಮೂಲಕ **ತುಳು ವಂಶವು** ಆರಂಭ ವಾಯಿತು. ದಕ್ಷಿಣ ಕನ್ನಡ ಅಥವಾ ಮಂಗಳೂರು ಜಿಲ್ಹೆಗೆ ಈಗಲೂ 'ತುಳುನಾಡು' ಎಂದು ಹೆಸರಿದೆ.



ಕೃಷ್ಣದೇವರಾಯನ ಪ್ರತಿಮೆ

(೬) ವಿಜಯನಗರದ ಎಲ್ಲ ರಾಜರಲ್ಲಿ ತುಳು ವಂಶದ **ಕೃಷ್ಣದೇವರಾಯನೇ** ಅತ್ಯಂತ ಖ್ಯಾತಿ ವಂತನು. ಇವನ ದಿಗ್ವಿಜಯವು ಸುಪ್ರಸಿದ್ಧವಾಗಿದೆ. ಇವನ ಕಾಲಕ್ಕೆ ರಾಯರ ರಾಜ್ಯವಿಸ್ತಾರವು ಪರ ಮಾವಧಿಗೆ ಮುಟ್ಟಿತು. ಈತನು ಮಹಾಪರಾಕ್ರಮಿ, ವಿದ್ಯಾಭಿಮಾನಿ, ಕಲಾಪ್ರೇಮಿ. ಇವನು ದಕ್ಷಿಣಕ್ಕೆ ಸಾಗಿ, ಕೊಯಿಮತ್ತೂರು, ಶ್ರೀರಂಗಪಟ್ಟಣ, ಶಿವಸಮುದ್ರ ಇವನ್ನು ಗೆದ್ದು, ಬೀಳುವ ಸ್ಥಿತಿಗೆ ಬಂದಿದ್ದ ಚೇರ, ಚೋಳ, ಪಾಂಡ್ಯ, ಮಲಯಾಳ ರಾಜರನ್ನು ಸೋಲಿಸಿ ಪೂರ್ವಕ್ಕೆ

---

೧. ವಿಜಯನಗರದ ನಾಲ್ಕು ಅರಸುಮನೆತನಗಳು ಕೆಳಗಿನಂತಿವೆ:—

(೧) ಸಂಗಮವಂಶ (೧೩೩೬-೧೪೮೫)

(೨) ಸಾಳ್ವವಂಶ (೧೪೮೫-೧೫೦೬)

(೩) ತುಳುವಂಶ (೧೫೦೬-೧೫೭೦)

(೪) ಅರವೀಡುವಂಶ (೧೫೭೦-೧೬೮೧)

೨. ವರ್ಹಾಡದ ಇಮಾದಶಾಹಿ (೧೪೮೮ ರಲ್ಲಿ)

ವಿಜಾಪುರದ ಆದಿಲಶಾಹಿ (೧೪೮೯ ರಲ್ಲಿ)

ಅಹಮುದನಗರದ ನಿಜಾಮುಶಾಹಿ (೧೪೯೦ ರಲ್ಲಿ)

ಗೋವಳಕೊಂಡದ ಕುತುಬಶಾಹಿ (೧೫೧೨ ರಲ್ಲಿ)

ಬೀದರದ ಬರೀದಶಾಹಿ (೧೫೨೬ ರಲ್ಲಿ)

ಮುನ್ನುಗ್ಗಿದನು. ತೆಲಗುಸೀಮೆಗಳಲ್ಲಿ ಮುಡುಕಿ ಈಶಾನ್ಯಕ್ಕೆ ಮುಂದುವರಿದನು. ಓಡಿಸಾ ಅಥವಾ ಉತ್ಕಲ ರಾಜ್ಯವನ್ನು ಗೆದ್ದು ಅದರ ರಾಜನ ಮಗಳನ್ನು ಮದುವೆಯಾದನು. ಉತ್ಕಲ ವಿಜಯದ ನೆನಪಿಗಾಗಿ 'ಗೆಲುವಿನ ಮನೆ' ಎಂಬ ಭವ್ಯ ಸಭಾಮಂದಿರವನ್ನು ಕಟ್ಟಿಸಿದನು. ರಾಯನ ಪರಾಕ್ರಮದ ಇನ್ನೊಂದು ಘಟನೆಯೆಂದರೆ 'ರಾಯಚೂರು ವಿಜಯ'. ೨೦೦ ವರುಷಗಳಿಂದ ಕೃಷ್ಣಾ-ತುಂಗಭದ್ರೆಗಳ ನಡುವಿನ ನಾಡಿನ ಒಡೆತನಕ್ಕಾಗಿ ದಕ್ಷಿಣದ ಹಿಂದು ಮುಸಲ್ಮಾನ ರಾಜ್ಯಗಳ ನಡುವೆ ಮೇಲಿಂದಮೇಲೆ ಕಾಳಗಗಳು ನಡೆದಿದ್ದವಷ್ಟೆ. ಹೀಗೆ ಕಲಹದ ಬೀಜವಾದ ಈ ಸೀಮೆಯನ್ನು ಕೊನೆಗೊಮ್ಮೆ ಶಾಶ್ವತವಾಗಿ ಕೈವಶ ಮಾಡಿಕೊಳ್ಳಲು ನಿರ್ಧರಿಸಿ ರಾಯನು ಹೊರಹೊರಟನು. ಎದುರಾದ ವಿಜಾಪುರದ ಇಬ್ರಾಹಿಮ ಆದಿಲಶಾಹನನ್ನು ಮತ್ತೆಂದೂ ಏಳದಂತೆ ಹೊಡೆದೋಡಿಸಿದನು. ವಿಜಾಪುರವನ್ನು ಹಾಳುಗೆಡವಿ ಮುದಗಲ್ಲು ಕಲಬುರ್ಗೆಗಳನ್ನು ಹಿಡಿದುಕೊಂಡನು. ಇವನ ಕೀರ್ತಿ ಸಿಂಹಳದವರೆಗೂ ಹಬ್ಬಿತ್ತು.



ವಿಜಯವಿಠ್ಠಲ ದೇವಾಲಯ

ಅಲ್ಲಿಯ ಅರಸುಮನೆತನದ ಒಳಜಗಳಗಳಲ್ಲಿ ಕೈಹಾಕಿ ಆ ನಾಡಿನಲ್ಲಿ ಶಾಂತತೆಯನ್ನುಂಟುಮಾಡಿದನು.

ಸಂಗಮ ವಂಶದವರಿಗೆ ಶ್ರೀವಿದ್ಯಾರಣ್ಯರು ಗುರುಗಳಾಗಿದ್ದಂತೆ ಕೃಷ್ಣದೇವರಾಯನಿಗೆ ಮಾಧ್ವಮತದ **ಶ್ರೀ ವ್ಯಾಸಯೋಗಿಗಳು** ಗುರುಗಳಾಗಿ ಬಹಳ ನೆರವಾದರು. ಈ ವ್ಯಾಸಯೋಗಿಗಳ ಶಿಷ್ಯರೆ ಕರ್ನಾಟಕದಲ್ಲಿ ಪ್ರಸಿದ್ಧ ಹರಿಭಕ್ತರಾದ **ಪುರಂದರದಾಸರು** ಮತ್ತು **ಕನಕದಾಸರು**. ತಮಿಳು ನಾಡಿನ ವೈಷ್ಣವ ಗುರುಗಳಾದ **ವೆಂಕಟತಾತಾಚಾರ್ಯರಿಗೂ** ಗುಜರಾತದ

ವೈಷ್ಣವ ಪಂಥಸ್ಥಾಪಕರಾದ ಶ್ರೀ **ವಲ್ಲಭಾಚಾರ್ಯರಿಗೂ** ಕೃಷ್ಣದೇವರಾಯನ ಆಸ್ಥಾನದಲ್ಲಿ ರಾಜಮಾನ್ಯತೆ ದೊರೆಯಿತು.

ಕೃಷ್ಣದೇವರಾಯನು ೨೧ ವರುಷ ಆಳಿ ರಾಜ್ಯದಲ್ಲೆಲ್ಲ ಶಾಂತಿ ಸಮೃದ್ಧಿಗಳನ್ನು ಅತಿಶಯವಾಗಿ ಉಂಟುಮಾಡಿದನು. ಆದರೆ ಗೋವೆಯು ಮಾತ್ರ ಇವನ ಆಳಿಕೆಯಲ್ಲಿ ಪೋರ್ತುಗೀಜರ ಕೈವಶವಾಯಿತು. ಇವನ ಕಾಲದಲ್ಲಿ ಮೂವರು ಪೋರ್ತುಗೀಜ ಪ್ರವಾಸಿಗಳು ವಿಜಯನಗರವನ್ನು ಸಂದರ್ಶಿಸಿ ಅದರ ವೈಭವವನ್ನು ಬಣ್ಣಿಸಿದ್ದಾರೆ. ಅವರಲ್ಲಿ **ಪಾಜನೆಂಬವನು** ಪ್ರಸಿದ್ಧನು. ಧರ್ಮಬುದ್ಧಿಯುಳ್ಳವನೂ ಕಲಾಪ್ರೇಮಿಯೂ ಆದ ಈ ರಾಯನು ವಿಜಯ ವಿಠ್ಠಲ ದೇವಾಲಯ ಹಜಾರರಾಮ ದೇವಾಲಯ ಮೊದಲಾದ ಅನೇಕ ಸುಂದರ ದೇವಾಲಯಗಳನ್ನು ಕಟ್ಟಿಸಿ ಪ್ರಸಿದ್ಧಿಗೆ ಬಂದಿರುವನು.

**ವಿಜಯನಗರದ ಪತನ (ಅವನತಿ) :—**

ಕೃಷ್ಣದೇವರಾಯನ ತರುವಾಯ ಪಟ್ಟಕ್ಕಾಗಿ ಮತ್ತೆ ಕಲಹಗಳೆದ್ದವು. ಈ ಹೊತ್ತಿಗೆ ಈತನ ಅಳಿಯನಾದ **ರಾಮರಾಯನು** ಸರ್ವಾಧಿಕಾರಿಯಾದನು. ತುಳುವಂಶದ ಕೊನೆಯ ಅರಸನಾದ **ಸದಾಶಿವರಾಯ**ನ ಕಾಲದಲ್ಲಿ ರಾಮರಾಯನೇ ಪ್ರತ್ಯಕ್ಷ ಅರಸನಂತೆ ಅಧಿಕಾರ ನಡೆಸಿದನು. ಅಧಿಕಾರಮದದಿಂದ ಈತನು ಶಾಹೀ ರಾಜ್ಯಗಳ ಒಳಜಗಳಗಳಲ್ಲಿ ಕೈಹಾಕತೊಡಗಿ ತನ್ನ ವಿನಾಶಕ್ಕೆ ತಾನೇ ಕಾರಣನಾದನು. ವಿಜಾಪುರದ ಅಲಿ ಆದಿಲಶಾಹನಿಗೆ ರಾಮರಾಯನು ನೆರವಾದುದನ್ನು ಕಂಡು ಅಹಮದನಗರದ ನಿಜಾಮಶಾಹನು ಸಹಿಸಲಿಲ್ಲ. ಆತನು ತನ್ನ ಸಹೋದರಿಯಾದ **ಚಾಂದಬೀಬಿ**ಯನ್ನು ಆದಿಲಶಾಹನಿಗೆ ಮದುವೆಮಾಡಿಕೊಟ್ಟು ಅವನನ್ನು ತನ್ನೆಡೆಗೆ ಎಳೆದುಕೊಂಡನು. ಹೀಗೆ ಶಾಹೀರಾಜ್ಯಗಳು ತಮ್ಮತಮ್ಮಲ್ಲಿಯ ಒಳಜಗಳಗಳನ್ನು ಮರೆತು ಒಟ್ಟಾದವು. ಮತ್ತು ಒಕ್ಕಟ್ಟಿನಿಂದ ವಿಜಯನಗರದ ರಾಜ್ಯದಮೇಲೆ ಏರಿಹೋದವು. ಕ್ರಿ. ಶ. ೧೫೬೫ ರಲ್ಲಿ **ರಕ್ಕಸಗಿ-ತಂಗಡಗಿ**[೧] ಯಲ್ಲಿ ತುರುಸಿನ ಕಾಳಗವೆಸಗಿತು. ರಾಮರಾಯನ ಸೈನ್ಯವು ಪರಾಕ್ರಮದಿಂದ ಕಾದಿದರೂ ಮೊದಲಿಗಷ್ಟೇ ಅದಕ್ಕೆ ವಿಜಯವಾಯಿತು. ಏಕೆಂದರೆ, ಅದು ಪ್ರಥಮವಿಜಯದ ಸೊಕ್ಕಿನಿಂದುಬ್ಬಿ ಮೈಮರೆತಿರುವಾಗಲೇ ಮುಸಲ್ಮಾನ

೧. ಇದನ್ನು ರಕ್ಕಸ-ತಂಗಡಿಗಿಯೆಂದೂ ಕರೆಯುತ್ತಾರೆ. ಈ ಊರು ವಿಜಾಪುರ ಜಿಲ್ಲೆಯಲ್ಲಿ ತಾಳೀಕೋಟೆಯ ಹತ್ತಿರ ಕೃಷ್ಣಾನದಿಗೆ ಸಮೀಪದಲ್ಲಿದೆ.

ಸೈನ್ಯವು ಆದರಮೇಲೆ ಒಮ್ಮಿಂದೊಮ್ಮೆ ಎರಗಿಹೋಗಿ ಗಾಬರಿಗೊಳಿಸಿತು. ಅದೇ ವೇಳೆಗೆ, ಮದ್ದಾನೆಯ ಗೊಂದಲವೆಸ್ಟು ರಾಮರಾಯನು ಸೆರೆಸಿಕ್ಕನು. ಹುಸೇನ ನಿಜಾಮಶಾಹನೇ ರಾಮರಾಯನ ತಲೆಯನ್ನು ತುಂಡರಿಸಿದನು. ವಿಜಯ ನಗರದ ಸೈನಿಕರಲ್ಲಿ ಲಕ್ಷಗಟ್ಟಲೆ ಜನರು ಸತ್ತರು. ರಣಾಂಗಣದಲ್ಲಿ ವೈರಿಗೆ ದೊರೆತ ಲೂಟಿಯು ಅಷ್ಟಿಷ್ಟಲ್ಲ! ವಿಜಯಶಾಲಿಗಳಾದ ಮುಸಲ್ಮಾನರು ರಾಜ ಧಾನಿಯಾದ ವಿಜಯನಗರವನ್ನು ಹೊಕ್ಕರು. ಸದಾಶಿವರಾಯನು ಓಡಿ ಹೋಗಿ ಪೆನುಗೊಂಡೆಯನ್ನು[೧] ಆಶ್ರಯಿಸಿದನು. ಬಳಿಕ ಪೆನುಗೊಂಡೆಯೇ ರಾಜಧಾನಿಯಾಯಿತು. ವಿರಾಮವಿಲ್ಲದೆ ಐದು ತಿಂಗಳು ವಿಜಯನಗರದ ಸುಲಿಗೆ ನಡೆಯಿತು. ವಿಜಯನಗರದ ವೈಭವವು ಕಳಚಿ ಕಣ್ಮರೆಯಾಯಿತು. ಹಂಪೆ ಕೊಂಪೆಯಾಯಿತು. ಸಾಮ್ರಾಜ್ಯವು ಮೂರು ಭಾಗವಾಯಿತು.

ಪೆನುಗೊಂಡೆಯಲ್ಲಿ ಆಳಿದ ವಂಶವೇ **ಅರವೀಡು** ವಂಶವು. ಅಲ್ಲಿಂದ ಆಳಿದವರಲ್ಲಿ **ವೆಂಕಟಪತಿದೇವರಾಯನೇ** ಮುಖ್ಯನು. ಅಳಿದುಳಿದ ವಿಜಯ ನಗರ ಸಾಮ್ರಾಜ್ಯದಲ್ಲಿ ಶಕ್ಯವಿದ್ದಷ್ಟು ಉತ್ಸಾಹ ಹುಟ್ಟಿಸಲು ಇವನು ಪ್ರಯತ್ನ ಪಟ್ಟನು. ಪೆನುಗೊಂಡೆಯನಂತರ ತಿರುಪತಿಕ್ಷೇತ್ರದ ಬಳಿಯಲ್ಲಿಯ **ಚಂದ್ರ ಗಿರಿಯೂ** ಕೆಲಕಾಲ ರಾಜಧಾನಿಯಾಯಿತು. ಉತ್ತರದ ಸೀಮೆಗಳೆಲ್ಲ ಶಾಹೀರಾಜ್ಯಗಳ ಪಾಲಾದವು. ದಕ್ಷಿಣದಲ್ಲಿ ಅರವೀಡು ವಂಶವು ಹಾಗೂ ಹೀಗೂ ೧೦೦ ವರುಷ ರಾಜ್ಯನಡೆಸಿತು. ಮುಂದೆ ಪಾಳಯಗಾರರೆಲ್ಲರು ಬರ ಬರುತ್ತ ಸ್ವತಂತ್ರರಾಜರಾದರು. ಮಧುರೆಯ ನಾಯಕರು, ಮೈಸೂರಿನ ಒಡೆಯರು, ಕೆಳದಿಯ ಅರಸರು, ಇವರಲ್ಲಿ ಮುಖ್ಯರು.

**ವಿಜಯನಗರದ ವೈಭವ: ವಿದ್ಯೆ ಮತ್ತು ಕಲೆಗಳಿಗೆ (ರಾಯರ) ಆಶ್ರಯ.**

ವಿಜಯನಗರದ ವೈಭವವು ಇತಿಹಾಸ ಪ್ರಸಿದ್ಧವಾದುದು. ಆ ಕಾಲ ದಲ್ಲಿ ಅದನ್ನು ಪ್ರತ್ಯಕ್ಷವಾಗಿ ಕಂಡ ವಿದೇಶೀಯ ಪ್ರವಾಸಿಕರ ವೃತ್ತಾಂತಗಳು ಈ ಮಾತಿಗೆ ಸಾಕ್ಷಿಯಾಗಿವೆ.

ಅಬ್ದುರ್ ರಝಾಕನು ಹೀಗೆ ಹೇಳಿರುವನು:— "ರಾಯನ ಹತ್ತಿರ ೧೧ ಲಕ್ಷ ಸೈನ್ಯವಿದೆ. ವಿಜಯನಗರಕ್ಕೆ ಸರಿಗಟ್ಟುವ ಪಟ್ಟಣವನ್ನು ಕಣ್ಣು ಕಂಡಿಲ್ಲ, ಕಿವಿ ಕೇಳಿಲ್ಲ ...........ಇಲ್ಲಿ ಎಲ್ಲಿ ನೋಡಿದರೂ ಗುಲಾಬಿ ಹೂಗಳ

೧. ಮದ್ರಾಸ ರಾಜ್ಯದಲ್ಲಿ ಇದು ಈಗ ಒಂದು ತಾಲೂಕು ಸ್ಥಳವಾಗಿದೆ.

ಸುಗ್ಗಿ. ಇಲ್ಲಿಯ ಜನರಿಗೆ ಊಟ ಇಲ್ಲದೆ ನಡೆದೀತು, ಹೂ ಇಲ್ಲದೆ ನಡೆಯು ವಂತಿಲ್ಲ. ............... ಮುತ್ತು ರತ್ನ ಪಚ್ಚೆ ವಜ್ರಗಳ ವ್ಯಾಪಾರವು ಪ್ರತಿ ನಿತ್ಯ ನಡೆದಿರುತ್ತದೆ. "

ನಿಕೋಲಸ ಕೋಂಟಿ ಹೇಳುವದೇನೆಂದರೆ, " ಪಟ್ಟಣದ ಸುತ್ತಳತೆ ೬೦ ಮೈಲು ........ ಇದಕ್ಕೆ ಏಳು ಸುತ್ತಿನ ಭದ್ರವಾದ ಕೋಟೆಯಿದೆ. ನೀರಿನ ವಿಪುಲತೆಯಿಂದ ಎಲ್ಲಿ ನೋಡಿದಲ್ಲಿ ಬನಗಳೂ ಬತ್ತ ಕಬ್ಬುಗಳ ತೋಟಗಳೂ ಕಂಗೊಳಿಸುವವು. ಅಲ್ಲಲ್ಲಿ ಭವ್ಯ ಸುಂದರ ದೇವಾಲಯುಗಳೂ ಅವಕ್ಕೆ ಹೊಂದಿ ಮಹಾ ಪಾಠಶಾಲೆಗಳೂ ವಿದ್ಯಾಲಯಗಳೂ ತುಂಬಿವೆ."

ಪಾಜನು, " ಇಲ್ಲಿ ಅನೇಕ ದೇಶವಿದೇಶಗಳ ಜನರು ಏಕತ್ರರಾಗಿರುವರು. ಇಲ್ಲಿಯ ವ್ಯಾಪಾರವು ವಿವಿಧವೂ ಅಮಿತವೂ ಸಮೃದ್ಧವೂ ಆಗಿದೆ. ಜನಸಂಖ್ಯೆ ಹೇಳಿದರೆ ಕಟ್ಟುಕತೆಯೆನಿಸೀತು. ರಾಯನು ಅತ್ಯಂತ ಸುಂದರನು ಮತ್ತು ತೇಜಸ್ವಿ. "

ಇಂಥ ವಿಜಯನಗರದ ರಾಯರು ವಿದ್ಯೆ-ಕಲೆಗಳಿಗೆ ಆಶ್ರಯವಿತ್ತರೆಂದು ಬೇರೆಯಾಗಿ ಹೇಳಬೇಕಿಲ್ಲ. ಬಹುಮಟ್ಟಿಗೆ ಎಲ್ಲ ರಾಯರೂ ವಿದ್ಯಾಭಿಮಾನಿ ಗಳು. ವಿಜಯನಗರದ ಮತ್ತೊಂದು ಹೆಸರು ವಿದ್ಯಾನಗರ. ವಿದ್ಯಾರಣ್ಯರ ನೆನಪಿ ಗಾಗಿ ಈ ಹೆಸರು ಉಂಟಾಗಿ ವಿಜಯನಗರವು ವಿದ್ಯೆಯ ತವರೂರಾಯಿತು.

ವಿರೂಪಾಕ್ಷದೇವಾಲಯ, ವಿಜಯವಿಠ್ಠಲಗುಡಿ, ಗಜಶಾಲೆ, ಅಶ್ವಶಾಲೆ ಮುಂತಾದ ಅದ್ಭುತ ಕಟ್ಟಡಗಳನ್ನೂ ಸುಂದರ ರಾಜಧಾನಿಯನ್ನೂ ಕಟ್ಟುವದ ರಲ್ಲಿ ಅನೇಕ ವಾಸ್ತುಶಿಲ್ಪಿಗಳಿಗೆ ಈ ರಾಯರು ಆಶ್ರಯವಿತ್ತರು.

ಸಂಸ್ಕೃತ, ಕನ್ನಡ, ತೆಲಗು, ತಮಿಳು ಸಾಹಿತ್ಯಗಳ ಬೆಳವಣಿಗೆಗೆ ಈ ಕಾಲವು ಸುಗ್ಗಿಯ ಕಾಲ. ವಿದ್ಯಾರಣ್ಯರೂ ಅವರ ತಮ್ಮ **ಸಾಯಣಾ ಚಾರ್ಯರೂ** ವೇದಗಳಿಗೆ ಭಾಷ್ಯಬರೆದರು. ಪ್ರಖ್ಯಾತ ಪಂಡಿತರಾದ **ಅಪ್ಪಯ್ಯ ದೀಕ್ಷಿತರೂ** ಕೃಷ್ಣರಾಯನ ಕಾಲದಲ್ಲಿದ್ದರು. **ತೆನ್ನಾಲ ರಾಮಕೃಷ್ಣ**ನಂತಹ ಹಾಸ್ಯಕಾರನೂ ಇದೇ ಕಾಲದವನು. **ಚಾಮರಸ, ನಿಜಗುಣ ಶಿವಯೋಗಿ, ಕುಮಾರವ್ಯಾಸ, ಪುರಂದರದಾಸ, ಕನಕದಾಸ**ರಂತಹ ಶ್ರೇಷ್ಠ ಕನ್ನಡ ಕವಿಗಳೂ ಭಗವದ್ಭಕ್ತರೂ ಆಗಿಹೋದ ಚಿನ್ನದ ಕಾಲವು ಇದೇ. ಕರ್ನಾಟಕದಲ್ಲಿ ವೀರಶೈವ ವಚನಕಾರರ ಪರಂಪರೆಯು ಮುಂದುವರೆಯಿತು. ವೈಷ್ಣವ 'ಧಾಸಕೂಟ'ದ ಸಂಪ್ರದಾಯವು ಹೊಸದಾಗಿ ತಲೆಯೆತ್ತಿತು. ಅನೇಕ

ಸ್ತ್ರೀಯರು ಈ ಕಾಲದಲ್ಲಿ ವಿದುಷಿಯರೂ, ಕವಿಯಿತ್ರಿಗಳೂ, ನೃತ್ಯ-ಗಾನ ಮುಂತಾದ ಲಲಿತಕಲೆಗಳನ್ನು ಬಲ್ಲವರೂ ಇದ್ದರು.

ವಿಜಯನಗರದಲ್ಲಿ ನವರಾತ್ರಿಯ ಉತ್ಸವಾಚರಣೆಯು ಅತ್ಯಂತ ಸಡಗರದಿಂದ ಸಾಗುತ್ತಿತ್ತು.

## ಬಹಮನೀ ರಾಜ್ಯ

**ಉದಯ (ರಾಜ್ಯಸ್ಥಾಪನೆ)** :— ಕ್ರಿ. ಶ. ೧೩೪೭.

ಬಹಮನೀ ರಾಜ್ಯವು ಮುಹಮ್ಮದ ತುಘಲಕನು ದಿಲ್ಲಿಯ ಸುಲ್ತಾನನಿದ್ದಾಗ ದಕ್ಷಿಣದಲ್ಲಿ ಹೊಸದಾಗಿ ಕಟ್ಟಲ್ಪಟ್ಟ ಎರಡನೆಯ ರಾಜ್ಯ. ಇದನ್ನು ಸ್ಥಾಪಿಸಿದವನು ಮುಹಮ್ಮದ ತುಘಲಕನ ಸರದಾರನಾದ **ಜಾಫರಖಾನನೆಂಬವನು.** ಕಲಬುರ್ಗಿಯು[1] ಇದರ ರಾಜಧಾನಿಯಾಯಿತು.



ಹಸನ ಗಂಗೂ ಬಹಮನೀ

ಜಾಫರಖಾನನು ಮೊದಲು ಅಲಾಉದ್ದೀನ ಹಸನ ಎಂಬ ಹೆಸರಿನಿಂದ ದಿಲ್ಲಿಯಲ್ಲಿ ಗಂಗೂ ಎಂಬ ಬ್ರಾಹ್ಮಣನಲ್ಲಿ ಆಳಾಗಿದ್ದನಂತೆ. ಸುಲ್ತಾನನಲ್ಲಿ ಜ್ಯೋತಿಷಿಯಾಗಿದ್ದ ಆ ಗಂಗೂ ಬ್ರಾಹ್ಮಣನು ಹಸನನಿಗೆ ಸುಲ್ತಾನನ ದಂಡಿನಲ್ಲಿ ಒಂದು ಕೆಲಸವನ್ನು ಕೊಡಿಸಿದನು. ಇವನು ತನ್ನ ಸಾಹಸದಿಂದ ಅಲ್ಲಿ ಘನತೆಗೇರಿದನು. ಬಳಿಕ, ದಕ್ಷಿಣದಲ್ಲಿ ಸುಲ್ತಾನನ ದಂಡಿನ ಮುಖ್ಯಾಧಿಕಾರಿಯಾದನು. ಒಮ್ಮೆ ದೇವಗಿರಿಯ ಮುಸಲ್ಮಾನ ಸರದಾರರು ಬಂಡು ಹೂಡಿದರು. ಮುಹಮ್ಮದ ತುಘಲಕನು ಅವರನ್ನು ಸದೆಬಡಿಯಲು ದೇವಗಿರಿಗೆ ಬಂದನು. ಬಂಡುಗಾರರು ಕಲಬುರ್ಗಿಗೆ ಓಡಿ ಹೋದರು. ಅಷ್ಟರಲ್ಲಿ ಗುಜರಾಥದಲ್ಲಿಯ ಮುಸಲ್ಮಾನ ಸರದಾರರು ದಂಗೆಯೆದ್ದರು. ಮುಹಮ್ಮದನು ದೇವಗಿರಿಯಿಂದ ಅತ್ತಕಡೆಗೆ ನಡೆದನು. ಜಾಫರಖಾನನು ಸುಲ್ತಾನನ ಪರವಾಗಿ ದಂಗೆಯನ್ನು ಅಡಗಿಸುವದರ ಪ್ರತಿಯಾಗಿ ತಾನೇ ಆ ಬಂಡುಗಾರರ ಮುಖಂಡನಾದನು.

---

೧. ಇದು ಈಗ ಹೈದರಾಬಾದ ರಾಜ್ಯದಲ್ಲಿ ಕನ್ನಡ ಭಾಗದಲ್ಲಿ ಒಂದು ಜಿಲ್ಹಾ-ಸ್ಥಳ.

ಸುಲ್ತಾನನ ಸೈನ್ಯವನ್ನು ಸೋಲಿಸಿದನು. ಬಳಿಕ, ಸರದಾರರು ಕೇಳಿಕೊಂಡ ಮೇರೆಗೆ ಕಲಬುರ್ಗಿಯಲ್ಲಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದನು (೧೩೪೭). ಇವನು ತನ್ನ ಮೊದಲಿನ ಬ್ರಾಹ್ಮಣ ಒಡೆಯನ ಉಪಕಾರವನ್ನು ಸ್ಮರಿಸಿ, '**ಅಲಾಉದ್ದೀನ ಹಸನ ಗಂಗೂ ಬಹಮನೀ**' ಎಂಬ ಹೆಸರಿನಿಂದ ಪಟ್ಟವೇರಿದನು. ಅಷ್ಟೇ ಅಲ್ಲ; ಗಂಗೂನನ್ನು ದಿಲ್ಲಿಯಿಂದ ಕರೆಯಿಸಿ ತನ್ನ ಕೋಶಾಧಿಕಾರಿಯನ್ನಾಗಿ ಮಾಡಿಕೊಂಡನಂತೆ. ಈ ರೀತಿಯಾಗಿ ಜಾಫರ ಖಾನನು ಸ್ಥಾಪಿಸಿದ ರಾಜ್ಯಕ್ಕೆ ಬಹಮನೀ ರಾಜ್ಯವೆಂದು ಹೆಸರುಬಿದ್ದಿತು. ಅವನ ವಂಶಜರು ಬಹಮನೀ ವಂಶಜರಾದರು.[1]

'**ಉತ್ಕರ್ಷ**' (ಏಳಿಗೆ) :—

(೧) **ಹಸನ ಗಂಗೂ ಬಹಮನೀ** (ಕ್ರಿ. ಶ. ೧೩೪೭–೧೩೫೮) **:—** ಇವನು ನ್ಯಾಯಪ್ರಿಯನೂ ಜನಹಿತದಕ್ಷನೂ ಧರ್ಮನಿಷ್ಠನೂ ಆಗಿದ್ದನು. ತನ್ನ ಆಳಿಕೆಯಲ್ಲಿ ರಾಜ್ಯವನ್ನು ವಿಸ್ತರಿಸಿ ಬಲಪಡಿಸಿದನು. ಉತ್ತರದಲ್ಲಿ ವೈನ ಗಂಗಾನದಿ, ದಕ್ಷಿಣದಲ್ಲಿ ಕೃಷ್ಣಾನದಿ, ಪಶ್ಚಿಮಕ್ಕೆ ದೌಲತಾಬಾದ, ಪೂರ್ವಕ್ಕೆ ಭೋಂಗಿರ್[2] ಇವು ಇವನ ರಾಜ್ಯದ ಮೇರೆಗಳು. ಇವನು ಆಡಳಿತಕ್ಕಾಗಿ ತನ್ನ ರಾಜ್ಯದಲ್ಲಿ **ಕಲಬುರ್ಗಿ, ದೌಲತಾಬಾದ, ಬಿರಾರ (ವರ್ಹಾಡ), ಬೀದರ** ಎಂಬ ನಾಲ್ಕು ಪ್ರಾಂತಗಳನ್ನು ಮಾಡಿದನು.

(೨) **೧ ನೆಯ ಮುಹಮ್ಮದಶಾಹ :—** ಇವನು ಹಸನನ ಹಿರಿಯ ಮಗನು. ಇವನು ಪಟ್ಟವೇರಿದ ಕೂಡಲೆ ಆಳಿಕೆಯಲ್ಲಿ ಸಂಘಟನೆ ಮಾಡಿದನು. ಆದರೆ, ಮುಖ್ಯವಾಗಿ ವರಂಗಲ್ಲು ಮತ್ತು ವಿಜಯನಗರಗಳ ಅರಸರೊಂದಿಗೆ ಯುದ್ಧಮಾಡುವದರಲ್ಲಿಯೆ ಇವನ ದಿನಗಳು ಕಳೆದವು. ಇಬ್ಬರನ್ನೂ ಹಣ್ಣಿಗೆ ತಂದನು. ಮುದಗಲ್ಲು ಕೋಟೆಯು ಇವನ ಕೈವಶವಾಯಿತು. ಇವನು ೧೩೭೭ ರಲ್ಲಿ ಮರಣ ಹೊಂದಿದನು.

(೩) **೩ ನೆಯ ಮುಹಮ್ಮದಶಾಹ :—** ಇವನು ಅಲಾಉದ್ದೀನ ಹಸನನ ಮೊಮ್ಮಗ. ಶಾಂತಿಪ್ರಿಯ ಮತ್ತು ವಿದ್ಯಾಭಿಮಾನಿ. ಇವನ ಆಳಿಕೆಯಲ್ಲಿ ಯುದ್ಧಗಳು ನಡೆಯಲಿಲ್ಲ. ಇವನು ಮಸೀದೆಗಳನ್ನು ಕಟ್ಟಿಸಿದನು.

---

೧. ಇದರ ಬಗೆಗೆ ಕೆಲವು ವಿದ್ವಾಂಸರು ಕೆಳಗಿನಂತೆ ಅಭಿಪ್ರಾಯಪಡುವರು : ಜಾಫರಖಾನನು ಇರಾಣದ 'ಬಹಮನ' ಎಂಬ ವಂಶದವನು. ಆದ್ದರಿಂದ ಇವನ ವಂಶಕ್ಕೆ ಬಹಮನೀ ವಂಶವೆಂದು ಹೆಸರು ಬಂದಿತು.

೨. ಇದು ಈಗ ಹೈದರಾಬಾದ ರಾಜ್ಯದಲ್ಲಿದೆ.

**'ಉರ್ದೂ' ಶಬ್ದವು ಒಂದು ಭಾಷೆಯ ಹೆಸರಾದ ಬಗೆ: —**

ಭಾರತದೇಶಕ್ಕೆ ದಾಳಿಗಾಗಿ ಆರಂಭದಲ್ಲಿ ಬಂದ ಮುಸಲ್ಮಾನ ದಂಡನಾಯಕರು ಒಡ್ಡೋಲಗದ ಕಾರ್ಯಕಲಾಪಗಳನ್ನು ತಮ್ಮ ದಂಡಿನ ಶಿಬಿರ[1]ಗಳಲ್ಲಿಯೇ ಸಾಗಿಸಿದರು. ಇದರಲ್ಲಿ ಸ್ವಾಭಾವಿಕವಾಗಿ ಅವರು ಭಾರತೀಯರೊಡನೆ ಸಂಪರ್ಕ ಬೆಳೆಸಬೇಕಾಯಿತು. ಆದರೆ ಅವರ ಭಾಷೆ ತುರ್ಕೀ ಇಲ್ಲವೆ ಫಾರ್ಸೀ; ಭಾರತೀಯರ ಭಾಷೆಯಾದರೋ, ಹಿಂದೀ. ಆದುದರಿಂದ ಅವರು ಈ ದೇಶದ ಜನಭಾಷೆಯಾದ ಹಿಂದೀ ಭಾಷೆಯಲ್ಲಿ ಮಾತು-ಕತೆ ಮುಂತಾದವನ್ನು[2] ಸಾಗಿಸುವದು ಅಗತ್ಯವಾಯಿತು. ಆದರೆ ಅವರು ಬಳಸಿದ ಹಿಂದೀ ಭಾಷೆಯಲ್ಲಿ ಅವರ ಎಷ್ಟೋ ಫಾರ್ಸೀ ಅರಬೀ ತುರ್ಕೀ ಮುಂತಾದ ಭಾಷೆಗಳ ಶಬ್ದಗಳೂ ಶಬ್ದಪ್ರಯೋಗಗಳೂ ಬೆರೆತವು. ಈ ಪ್ರಕಾರ ಮಿಶ್ರಣ ಹೊಂದಿದ ಭಾಷೆಯು ಹೊಸದೊಂದು ಭಾಷೆ ಎನಿಸಿತು! ಈ ಹೊಸ ಭಾಷೆಯ ಹೆಸರೇ ಉರ್ದೂ. ಇದರ ಹುಟ್ಟು ಮೊದಲಿಗೆ ದಂಡಿನ ಶಿಬಿರದಲ್ಲಿ ಆದ ಮೂಲಕ ಇದಕ್ಕೆ 'ಉರ್ದೂ' ಎಂಬ ಹೆಸರುಂಟಾಯಿತು. ಮುಸಲ್ಮಾನ ಅರಸರ ಆಳಿಕೆಯಲ್ಲಂತೂ ಭಾರತದಲ್ಲಿ ಈ ಭಾಷೆಯ ಪ್ರಭಾವವು ಹೆಚ್ಚಾಗಿ ಬೆಳೆಯಿತು.

ವಿದೇಶೀಯ ಆಳರಸರ ಮೇಲೆ ಭಾರತದೇಶದ ಜನಭಾಷೆಯು ತನ್ನ ಪ್ರಭಾವ ಬೀರಿದುದಕ್ಕೆ ಇದೊಂದು ಉದಾಹರಣೆಯು. ಈ ದೇಶದಲ್ಲಿ ಹಿಂದು-ಮುಸ್ಲಿಂ ಸಂಸ್ಕೃತಿಗಳು ಒಂದುಗೂಡಿದುದಕ್ಕೂ ಇದೊಂದು ಉದಾಹರಣೆಯಲ್ಲವೇ?

ಉರ್ದೂ ಭಾಷೆಯನ್ನು ಫಾರ್ಸೀ ಲಿಪಿಯಲ್ಲಿ ಬರೆಯಲಾಗುತ್ತದೆ. ಅದನ್ನು ಮೊಟ್ಟ ಮೊದಲು ಆ ಲಿಪಿಯಲ್ಲಿ ಬರೆಯಿಸಿ ಇದಕ್ಕೆ ಸಾಹಿತ್ಯರೂಪ ಕೊಡಿಸಿದವನು ಗೋವಳಕೊಂಡದ ಸುಲ್ತಾನನಾದ ಮುಹಮ್ಮದ ಕುಲಿ ಕುತುಬಶಾಹನು. (ಕ್ರಿ. ಶ. ೧೫೮೦–೧೬೧೧).

## ದಿಲ್ಲಿಯಲ್ಲಿ ಪಠಾಣರ ಆಳಿಕೆಯ ಅಳಿಗಾಲ

ತೈಮೂರನ ದಾಳಿಯ ತರುವಾಯ ದಿಲ್ಲಿಯಲ್ಲಿ ಸೈಯ್ಯದ ಮತ್ತು ಲೋದಿ ಎಂಬ ಎರಡು ಮನೆತನಗಳ ಅರಸರು ಆಳಿದರು (೧೪೧೪–೧೫೨೬). ಸೈಯ್ಯದ

೧. ಇಂಗ್ಲೀಷ ಭಾಷೆಯಲ್ಲಿ ಇದಕ್ಕೆ 'ಮಿಲಿಟರಿ ಕ್ಯಾಂಪ' ಎಂದೆನ್ನುವರು.
೨. ಮಾತು-ಕತೆ ಮುಂತಾಗಿ.

ಮನೆತನದವರು ದುರ್ಬಲರು. ಲೋದೀ ಮನೆತನದ ಮೂವರಲ್ಲಿ ಕೊನೆಯವನಾದ ಇಬ್ರಾಹೀಮ ಲೋದಿಯು ಪಠಾಣ ಸರದಾರರ ಮೇಲೆ ಕ್ರೂರ ದಬ್ಬಾಳಿಕೆ ನಡೆಸಿದನು. ಆಗ ಪಂಜಾಬದ ಸುಭೇದಾರನಾದ ದೌಲತಖಾನ ಲೋದಿಯು ಕಾಬೂಲದ ಅರಸನಾದ ಬಾಬರನಿಗೆ ಭಾರತದ ಮೇಲೆ ದಾಳಿಗಾಗಿ ಕರೆ ಕಳುಹಿದನು. ಇದೇ ದಿಲ್ಲಿಯ ಪಠಾಣರ ಆಳಿಕೆಯ ಸಮಾಪ್ತಿಗೆ ಕಾರಣವಾಯಿತು.

## ಅಭ್ಯಸನಗಳು.

೧ ಈ ಪ್ರಕರಣದಲ್ಲಿ ಕೊಟ್ಟಿರುವ ವಿಜಯನಗರ ಮತ್ತು ಬಹಮನೀ ರಾಜ್ಯಗಳ ಅರಸರಲ್ಲಿ ಅತಿ ಮುಖ್ಯರ ಹೆಸರು ಬರೆಯಿರಿ. ಅಂತಹ ಪ್ರತಿಯೊಬ್ಬನ ಶ್ರೇಷ್ಠತೆಯ ಬಗೆಗೆ ಒಂದೊಂದು ಅತಿ ಮಹತ್ವದ ಉದಾಹರಣೆ ಕೊಡಿರಿ.

೨ 'ಆಳಾಗಿದ್ದ ಜಾಫರಖಾನನು ಸ್ವತಂತ್ರ ರಾಜ್ಯ ಸಂಸ್ಥಾಪಕನಾದನು.' ನೀವೇ ಜಾಫರಖಾನನೆಂದು ಭಾವಿಸಿ ಈ ಸಂಗತಿಯ ಕತೆ ಹೇಳಿರಿ. (ಕಾಲ್ಪನಿಕ ಆತ್ಮಕಥೆ ಹೇಳುವದಕ್ಕಾಗಿ.)

೩ ವಿಜಯನಗರದ ಸಾಮ್ರಾಜ್ಯ ಸ್ಥಾಪನೆಯಲ್ಲಿ ನೀವು ಅತ್ಯಂತ ಮಹತ್ವದ ಸ್ಥಾನವನ್ನು ಯಾರಿಗೆ ಕೊಡುವಿರಿ? (ವರ್ಗದ ಬಾಲಕರಲ್ಲಿ ಚರ್ಚೆಗಾಗಿ ಈ ವಿಷಯವನ್ನು ಆಯ್ದುಕೊಳ್ಳಬಹುದು.)

೪ ಕೆಳಗಿನ ವಾಕ್ಯಗಳಲ್ಲಿ ತೆರವಿರುವ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿರಿ:—

೧ ............ಯು ಬಹಮನೀ ರಾಜ್ಯದ ಮೊದಲಿನ ರಾಜಧಾನಿಯು. ಆದರೆ ಬಳಿಕ, ............... ಎಂಬ ಅರಸನು ಅದನ್ನು ............ ಕ್ಕೆ ಸ್ಥಳಾಂತರಿಸಿದನು.

೨ ಬಹಮನೀ ರಾಜ್ಯವು ಪರಮಾವಧಿ ವಿಸ್ತಾರವಾದುದು ............... ಎಂಬ ಅರಸನ ಆಳಿಕೆಯಲ್ಲಿ.

೩ ಬಹಮನೀ ವಂಶದಲ್ಲಿ ಒಟ್ಟಾರೆ............ಜನರು ರಾಜರಾಗಿ ಹೋದರು. ಆ ವಂಶವು............ರಲ್ಲಿ ಕಣ್ಮರೆಯಾಯಿತು.

———

# ೭ನೆಯ ಪ್ರಕರಣ

# ಮೊಗಲ ಸಾಮ್ರಾಜ್ಯಸ್ಥಾಪನೆ

## ಬಾಬರ ಹಾಗೂ ಹುಮಾಯೂನ ಇವರ ಆಳಿಕೆ.

## (೧೫೨೬–೧೫೫೬)

### ಸಾಮ್ರಾಜ್ಯ ಸ್ಥಾಪನೆ.

ಭಾರತ ದೇಶದಲ್ಲಿ ಪಠಾಣ ಅರಸರ ಆಳಿಕೆಯನ್ನು ಕೊನೆಗಾಣಿಸಿ ಮೊಗಲ ಸತ್ತೆಯನ್ನು ಆರಂಭಿಸಿದವನು **ಬಾಬರನು.** ಅವನು ಸ್ಥಾಪಿಸಿದ ರಾಜ್ಯವು ಮೊದಲಿಗೆ ಚಿಕ್ಕದಿತ್ತು. ಆದರೆ ಅವನ ತರುವಾಯದವರ ಆಳಿಕೆಯಲ್ಲಿ ಅದು ವಿಸ್ತಾರಹೊಂದಿ ದೊಡ್ಡ ಸಾಮ್ರಾಜ್ಯವಾಯಿತು. ಕೊನೆಯ 'ದೊಡ್ಡ'[೧] ಸಮ್ರಾಟನ ಆಳಿಕೆಯಲ್ಲಂತೂ ಬಹುಮಟ್ಟಿಗೆ ಇಡೀ ಭಾರತವು ಮೊಗಲರ ಆಳಿಕೆಗೆ ಒಳಪಟ್ಟಿತು. ಅಂತೆಯೇ ಬಾಬರನು ಇತಿಹಾಸದಲ್ಲಿ 'ಮೊಗಲ ಸಾಮ್ರಾಜ್ಯ ಸಂಸ್ಥಾಪಕ' ನೆಂದು ಹೆಸರಾಗಿರುವನು.



ಬಾಬರ

**ಬಾಬರ :—** ೧೫೨೬–೧೫೩೦.

**ಪೂರ್ವ ಚರಿತ್ರೆ :—** ಇವನು ಮಧ್ಯ ಏಶಿಯಾದಲ್ಲಿಯ ಫರಘಾನಾ ಎಂಬ ಪ್ರಾಂತದಲ್ಲಿ ಜನಿಸಿದನು (೧೪೮೩). ಆಗ ಅದು ಒಂದು ಚಿಕ್ಕ ರಾಜ್ಯವಾಗಿತ್ತು. ಬಾಬರನ ತಂದೆಯಾದ ಉಮರಶೇಖನೇ ಅದರ ದೊರೆಯಾಗಿದ್ದನು. ತಂದೆಯ ಕಡೆಯಿಂದ ಬಾಬರನು ತುರ್ಕನಾದ ತೈಮೂರನ ವಂಶಜ. ತಾಯಿಯ ಕಡೆಯಿಂದ ಅವನು ಮಂಗೋಲನಾದ ಚಂಗೀಜಖಾನನ ವಂಶಜ. ಆದುದರಿಂದ ಬಾಬರನಲ್ಲಿ ಧೈರ್ಯ ಶಕ್ತಿ ಸಾಹಸ ಇವು ಸಹಜವಾಗಿ ಅಂಕುರಿಸಿದವು.

೧. ಮೊಗಲ ಬಾದಶಾಹ (ಸಮ್ರಾಟ) ರಲ್ಲಿ ಮೊದಲಿನ ಆರು ಬಾದಶಾಹರನ್ನು ಇತಿಹಾಸದಲ್ಲಿ 'ದೊಡ್ಡ' ಬಾದಶಾಹರೆಂದು ಕರೆಯಲಾಗುತ್ತದೆ.

ತಂದೆಯ ಮರಣದಿಂದ, ೧೧ ವರುಷ ವಯಸ್ಸಿನವನಿರುವಾಗಲೇ ಬಾಬರನಿಗೆ ಫರಘಾನಾದ ದೊರೆತನವು ದೊರೆಯಿತು. ಆದರೆ, ಆಗಿನಿಂದ ೧೦ ವರ್ಷಗಳವರೆಗೆ ಅವನು ಜೀವನದಲ್ಲಿ ಕಷ್ಟಪರಂಪರೆಯನ್ನು ಎದುರಿಸ ಬೇಕಾಯಿತು. ಅವನು 'ಸಮರ್ಕಂದ' ವನ್ನು[1] ಗೆಲ್ಲಬಯಸಿದನು. ಏಕೆಂದರೆ, ಅದು ಒಂದು ಕಾಲದಲ್ಲಿ ತೈಮೂರನ ರಾಜಧಾನಿಯಾಗಿತ್ತು. (ಅತಿ ಸುಂದರ ವಾದ ನಗರ, ಕಲೆಗಳ ಆಗರ, ಸಂಸ್ಕೃತಿಯ ನೆಲೆವೀಡು.) ಆದರೆ ಬಾಬರನ ಪ್ರಯತ್ನದಲ್ಲಿ ಮೊದಲಿಗೆ ಅವನ ಬಂಧು ಬಳಗದವರೇ ಅಡ್ಡಬಂದರು. ಮುಂದೆ ಅವನು ಎರಡು ಸಲ ಪ್ರಯತ್ನಮಾಡಿದರೂ ಅವನ ಗುರಿ ಸಾಧಿಸಲಿಲ್ಲ.[2] ಒಮ್ಮೆಯಂತೂ ತನ್ನ ತಂದೆಯಿಂದ ಗಳಿಸಿದ ಫರಘಾನಾ ರಾಜ್ಯವೇ ಬಾಬರನ ಕೈಬಿಟ್ಟಿತು. ಬಾಬರನು ೧ ವರ್ಷ ಕಾಲ ಮನೆಮಾರಿಲ್ಲದೆ ಅಲೆದಾಡಿದನು. ಅಷ್ಟೊತ್ತಿಗೆ ಕಾಬೂಲದಲ್ಲಿ ದಂಗೆ ಎದ್ದ ಸುದ್ದಿಯು ಅವನ ಕಿವಿಗೆ ಮುಟ್ಟಿತು. ಬಾಬರನು ಅಲ್ಲಿಗೆ ಹೋಗಿ ಅದನ್ನು ಆಕ್ರಮಿಸಿದನು (೧೫೦೪). ಆಮೇಲೂ ಅವನು ಸಮರ್ಕಂದವನ್ನು ಗೆಲ್ಲುವ ಆಶೆ ಬಿಡಲಿಲ್ಲ! ಏಳು ವರ್ಷಗಳ ಬಳಿಕ ಕೊನೆಯದಾಗಿ ಪ್ರಯತ್ನಿಸಿದನು. ಆಗಲೂ ಅವನಿಗೆ ಸೋಲುಂಟಾಯಿತು. ಆಗ ಅವನು ಅತ್ತಕಡೆಯ ರಾಜ್ಯದ ಬಗೆಗೆ ನಿರಾಶನಾಗಿ ಮರಳಿ ಕಾಬೂಲಕ್ಕೆ ಬಂದನು (೧೫೧೨), ಮತ್ತು ಭಾರತ ದೇಶದ ಕಡೆಗೆ ತನ್ನ ದೃಷ್ಟಿಯನ್ನು ಹೊರಳಿಸಿದನು.

ಬಾಬರನು ಕಾಬೂಲದಲ್ಲಿರುವಾಗ ತನ್ನ ಸೈನ್ಯದಲ್ಲಿ 'ಫಿರಂಗಿದಳ' ವನ್ನು ರಚಿಸಿದನು. ರಾಜ್ಯದಲ್ಲಿ ವ್ಯವಸ್ಥೆಯನ್ನುಂಟುಮಾಡಿದನು. ಅಲ್ಲಿಂದಲೇ ಭಾರತದ ಮೇಲೆ ನಾಲ್ಕುಸಲ ಚಿಕ್ಕ ಪುಟ್ಟ ದಂಡಯಾತ್ರೆಗಳನ್ನು ಕೈಕೊಂಡು ಲಾಹೋರದ ವರೆಗೆ ಬಂದು ಹೋದನು. ಇದರಿಂದ ಬಾಬರನಿಗೆ ಭಾರತದ ಮೇಲೆ ದೊಡ್ಡ ದಾಳಿಮಾಡಬೇಕೆಂಬ ಹಿರಿಯಾಶೆಯುಂಟಾಯಿತು.

**ಪಾಣಿಪತ ಕಾಳಗ (೧೫೨೬)** :—ಅಷ್ಟರಲ್ಲಿ, ಇಬ್ರಾಹೀಮ ಲೋದಿಯ ಮೇಲೆ ಸಿಟ್ಟಿಗೆದ್ದ ದೌಲತಖಾನ ಲೋದಿಯೆಂಬ ಬಲಿಷ್ಠ ಪಂಜಾಬ ಪ್ರಾಂತಾಧಿ ಕಾರಿಯು ದಿಲ್ಲಿಯ ದಾಳಿಗಾಗಿ ಬಾಬರನನ್ನು ಕರೆಕಳುಹಿದನು. ಮೇವಾಡದ

---

೧. ಇದು ತೈಮೂರನ ವಂಶಜರ ವಶದಲ್ಲಿದ್ದ ಮತ್ತೊಂದು ಚಿಕ್ಕ ರಾಜ್ಯ.

೨. ಒಮ್ಮೆ ಬಾಬರನು ಸಮರ್ಕಂದದಲ್ಲಿ ನೂರು ದಿನಗಳ ವರೆಗೆ ವೈಭವದಿಂದ ರಾಜ್ಯವಾಳಿದನೆಂದು ಹೇಳಲಾಗುತ್ತದೆ.

ರಾಣಾಸಂಗನೂ ಬಾಬರನೊಂದಿಗೆ ಸಂಧಾನ ನಡೆಸಿದಂತೆ ತೋರುತ್ತದೆ! ಬಾಬರನು ತನ್ನ ಸಜ್ಜುಗೊಳಿಸಿದ ಸೈನ್ಯದೊಡನೆ ದಿಲ್ಲಿಯ ಮೇಲೆ ಸಾಗಿಬಂದನು. ಇಬ್ರಾಹೀಮ ಲೋದಿಯು ೧ ಲಕ್ಷ ಸೈನ್ಯದೊಂದಿಗೆ ಅವನನ್ನು ಪಾಣಿಪತದಲ್ಲಿ ಎದುರಿಸಿದನು. ಆದರೇನು ? ಇಬ್ರಾಹೀಮನು ಯುದ್ಧಾನುಭವವಿಲ್ಲದವನು. ಶಿಸ್ತು ಗೊತ್ತಿಲ್ಲದ ಸೇನೆಯು ಅವನದು. ಬಾಬರನು ನುರಿತ ಸೇನಾಪತಿ. ಮೇಲಾಗಿ ಅವನು ವ್ಯೂಹರಚನೆಯಲ್ಲಿ ಕುಶಲನು. ಅವನಲ್ಲಿ ಎರಡು ನೂರು ತೋಫುಗಳೂ ಫಿರಂಗಿಗಳೂ ಇದ್ದವು. ಕಾಳಗದಲ್ಲಿ ಬಾಬರನಿಗೆ ಪ್ರಚಂಡ ಜಯವಾಯಿತು. ಇಬ್ರಾಹೀಮನು ಕಾದುತ್ತ ರಣರಂಗದಲ್ಲಿಯೇ ಮಡಿದನು. ಬಾಬರನು ಲಗುಬಗೆಯಿಂದ ದಿಲ್ಲಿ ಆಗ್ರಾಗಳನ್ನು ಆಕ್ರಮಿಸಿದನು. ದಿಲ್ಲಿಯಲ್ಲಿ ದೊರೆಯಾದನು. ಆಗ್ರಾದ ದಾಳಿಯಲ್ಲಿ ಅವನಿಗೆ ಕೋಹಿನೂರ ಎಂಬ ಅಮೌಲ್ಯ ರತ್ನವು ದೊರೆಯಿತು.

### ಬಾಬರನು ಕಂಡ ಭಾರತ

ದಿಲ್ಲಿ ಆಗ್ರಾಗಳು ದೊರೆತ ಮಾತ್ರದಿಂದಲೇ ಬಾಬರನಿಗೆ ಉತ್ತರ ಭಾರತವೆಲ್ಲ ವಶವಾದಂತಾಗಲಿಲ್ಲ. ಏಕೆಂದರೆ, ಅವನನ್ನು ಎದುರಿಸಲು ಅಲ್ಲಿ ಇತರ ಪ್ರಬಲ ವೈರಿಗಳಿದ್ದರು. ಗಂಗಾ–ಯಮುನಾ ನದಿಗಳ ಮಧ್ಯಪ್ರದೇಶದ ಉತ್ತರಕ್ಕೂ ದಕ್ಷಿಣಕ್ಕೂ ಪೂರ್ವಕ್ಕೂ ಬಲಿಷ್ಠ ಪಠಾಣ ಸರದಾರರಿದ್ದರು. ಮೇವಾಡದ ರಾಣಾಸಂಗನು ರಾಜಪುತರ ಮುಖಂಡನಾಗಿದ್ದನು. ತಾನು ಭಾರತದ ಸಾರ್ವಭೌಮನಾಗಬಹುದೆಂಬ ಆಶೆಯನ್ನು ಅವನು ಇನ್ನೂ ಬಿಟ್ಟಿರಲಿಲ್ಲ. ಚಂದೇರಿಯ ರಾಜಪುತ ರಾಜನಾದ ಮೇದಿನೀರಾಯನು ಮತ್ತೊಬ್ಬ ವೈರಿಯಾಗಿದ್ದನು. ಬಾಬರನು ಇವರನ್ನು ಎದುರಿಸಲೇ ಬೇಕಾಯಿತು.

## ಬಾಬರ ಹುಮಾಯೂನರ ಆಳಿಕೆಗಳು

### ಬಾಬರನ ರಾಜ್ಯವಿಸ್ತಾರ :—

ಬಾಬರನು ಗಂಗಾ–ಯಮುನಾ ನದಿಗಳ ಮಧ್ಯಪ್ರದೇಶವನ್ನು ಆಕ್ರಮಿಸಿದ ಬಳಿಕ, ಅದರ ಉತ್ತರ, ದಕ್ಷಿಣ ಮತ್ತು ಪೂರ್ವಗಳಲ್ಲಿಯ ಪಠಾಣ ಸರದಾರರ ದಂಗೆಗಳನ್ನು ಅಡಗಿಸಿದನು. ಆ ಪ್ರದೇಶಗಳನ್ನು ಆಕ್ರಮಿಸಲು ತನ್ನ ಸ್ವಂತ ಸರದಾರರನ್ನು ಕಳಹಿದನು. ಆಗ್ರಾದಲ್ಲಿ ತಾನು ರಾಣಾ ಸಂಗನನ್ನು ಎದುರಿಸುವ ಸಿದ್ಧತೆ ಮಾಡತೊಡಗಿದನು. ರಾಜಪುತರನ್ನು ಗೆಲ್ಲದೆ ಅವನು ಸಮ್ರಾಟನೆಂದು ಮೆರೆಯುವಂತಿರಲಿಲ್ಲ.

**ಖಾನುವಾ ಕಾಳಗ** (೧೫೨೭) :— ರಾಣಾ ಸಂಗನು ನುರಿತ ಸೇನಾಪತಿ, ಸಂಗ್ರಾಮಶೂರ. ಮೊಗಲರನ್ನು ಹೊಡೆದೋಡಿಸಲು ಅವನು ಎಲ್ಲ ರಾಜಪುತರನ್ನು ಹುರಿದುಂಬಿಸಿದನು. ಚಂದೇರಿಯ ಮೇದಿನೀರಾಯನೂ ಮುಸಲ್ಮಾನರಾದ ಮೇವಾತಿಯ ಹಸನಖಾನನೂ, ಮಹಮೂದ ಲೋದಿಯೂ ಅವನ ಬೆಂಬಲಕ್ಕೆ ಬಂದರು. ರಾಣಾನು ಅಪಾರ ಸೇನೆಯೊಡನೆ ಆಗ್ರಾದ ಕಡೆಗೆ ಸಾಗಿದನು.

ಬಾಬರನದು ಚಿಕ್ಕ ಸೈನ್ಯ. ಸೈನಿಕರು ಬೆದರಿದರು. ಆದರೆ ಬಾಬರನು ಧೈರ್ಯಶಾಲಿ. ಸೈನಿಕರಲ್ಲಿ ಧೈರ್ಯೋತ್ಸಾಹಗಳನ್ನು ತುಂಬಿದನು. ಮದ್ಯವನ್ನು ಬಿಟ್ಟನು. ಮದ್ಯಪಾತ್ರೆಗಳನ್ನು ಒಡೆದು ಮದ್ಯವನ್ನು ಹರಿಬಿಟ್ಟನು. ಮುಂದೆಂದೂ ಮದ್ಯವನ್ನು ಸೇವಿಸುವದಿಲ್ಲವೆಂದು ಪ್ರತಿಜ್ಞೆ ಮಾಡಿದನು. ಸೈನಿಕರನ್ನುದ್ದೇಶಿಸಿ ಆವೇಶಗೊಳಿಸುವ ಭಾಷಣಮಾಡಿದನು. ಇದರಿಂದ ಅವನ ಸೈನಿಕರಲ್ಲಿ ಹೊಸ ಹುರುಪು ಬಂದಿತು. "ಖಾನುವಾ"[೧] ಎಂಬಲ್ಲಿ ಎರಡೂ ಸೈನ್ಯಗಳು ಸಂಧಿಸಿದವು. ರಾಜಪುತರು ವೀರಾವೇಶದಿಂದ ಕಾದಿದರು. ಆದರೆ ಬಾಬರನ ವ್ಯೂಹರಚನೆ, ತೋಫುಗಳ ಗರ್ಜನೆ ಇವುಗಳ ಮುಂದೆ ಅವರ ಆಟ ಸಾಗಲಿಲ್ಲ. ವೀರಾಧಿವೀರರೆಲ್ಲ ರಣಾಂಗಣದಲ್ಲಿ ಮಡಿದರು. ಸಂಗನು ಕಂಗೆಟ್ಟು ಅಡವೀ ಪಾಲಾಗಿ ಸತ್ತನು. ಬಾಬರನು ವಿಜಯಶಾಲಿಯಾದನು.

ಬಳಿಕ, ಬಾಬರನು ಚಂದೇರಿಯ ಮೇದಿನೀರಾಯನನ್ನು ಸೋಲಿಸಿ ಚಂದೇರಿಯನ್ನು ವಶಪಡಿಸಿಕೊಂಡನು. ತರುವಾಯ ಪೂರ್ವದಕಡೆಗೆ ಸಾಗಿ, ಒಟ್ಟುಗೂಡಿ ಎದುರಿಸಿದ ಬಿಹಾರ, ಬಂಗಾಲಗಳ ಪಠಾಣರನ್ನು ಗೋಗ್ರಾ ನದಿಯ ದಂಡೆಯ ಮೇಲೆ ಸೋಲಿಸಿದನು (೧೫೨೯).

**ಸಾರಾಂಶ**:— ಪಾಣಿಪತ, ಖಾನುವಾ ಮತ್ತು ಗೋಗ್ರಾಗಳ ವಿಜಯಗಳಿಂದ ಬಾಬರನು ಉತ್ತರ ಭಾರತದ ಸಮ್ರಾಟನಾದನು. ಪೂರ್ವದಿಕ್ಕಿನಲ್ಲಿ ಬಿಹಾರದ ವರೆಗೆ ಅವನ ರಾಜ್ಯವು ಹಬ್ಬಿತು.

**ಮರಣ**:— ಬಾಬರನು ಆಗ್ರಾದಲ್ಲಿ ಮರಣಹೊಂದಿದನು (೧೫೩೦). ತನ್ನ ಮಗನಾದ ಹುಮಾಯೂನನು ಬೇನೆಬಿದ್ದಾಗ ಅವನ ಜೀವವನ್ನು ಉಳಿಸಿ ತನ್ನ ಜೀವವನ್ನು ತೆಗೆದುಕೊಂಡು ಹೋಗಬಹುದೆಂದು ಬಾಬರನು ದೇವರಲ್ಲಿ

---

೧. ಆಗ್ರಾದಿಂದ ಪಶ್ಚಿಮಕ್ಕೆ ೨೦ ಮೈಲು ದೂರದಲ್ಲಿ.

ಪ್ರಾರ್ಥಿಸಿದನು. ದೇವರು ಅವನ ಮೊರೆಯನ್ನು ಕೇಳಿದನೇನೋ ಎಂಬಂತೆ ಹುಮಾಯೂನನ ಬೇನೆಯು ಗುಣವಾಯಿತು. ಬಾಬರನು ಹಾಸಿಗೆ ಹಿಡಿದನು. ಬರಬರುತ್ತ ಅವನ ಆರೋಗ್ಯವು ಕೆಟ್ಟು ಮರಣಹೊಂದಿದನು.[೧]

**ಬಾಬರನ ಗುಣಾತಿಶಯಗಳು :—** ಬಾಬರನು ಬುದ್ಧಿಶಾಲಿ, ಪರಾಕ್ರಮಿ, ಚತುರ ಸೇನಾಪತಿ. ಇವನು ಇಟ್ಟ ಗುರಿ, ಹಾರಿಸಿದ ಗುಂಡು ಇವು ಎಂದೂ ಹುಸಿಯಾಗುತ್ತಿದ್ದಿಲ್ಲವಂತೆ. ಇವನಲ್ಲಿ ಕವಿತಾಶಕ್ತಿ ಇತ್ತು. ಇವನು ತುರ್ಕೀ ಭಾಷೆಯಲ್ಲಿ ಸುಂದರ ಕವನಗಳನ್ನು ರಚಿಸಿರುವನು. ಕಲಾ



ದೇವರಲ್ಲಿ ಬಾಬರನ ಪ್ರಾರ್ಥನೆ (ಹುಮಾಯೂನನ ಜೀವ ಉಳಿಯಲೆಂದು)

ಪ್ರೇಮಿಯಿದ್ದನು. ಪ್ರಕೃತಿ ಸೌಂದರ್ಯವನ್ನು ನೋಡಿ ನಲಿಯುತ್ತಿದ್ದನು. ಆಗ್ರಾಪಟ್ಟಣಕ್ಕೆ ರಾಜಧಾನಿಯ ರೂಪುಕೊಡಲು ಕಾನ್ಸ್ಟಾಂಟಿನೋಪಲದ ವಾಸ್ತುಶಿಲ್ಪಿಯನ್ನು ಕರೆಸಿದ್ದನಂತೆ. ಬಾಬರನಿಗೆ ಉತ್ತರ ಭಾರತದಲ್ಲಿ ಸಂಸ್ಕೃತಿಯ ಕೊರತೆಯು ಕಂಡುಬಂದಿತು. ತನ್ನ ತಾಯ್ನಾಡಿನ ಸುಖ

೧. ಇದು ಮುಸಲ್ಮಾನ ಇತಿಹಾಸಕಾರರ ಹೇಳಿಕೆ.

ಜೀವನದ ಸಾಧನಗಳು ಅವನಿಗೆ ಭಾರತದಲ್ಲಿ ದೊರೆಯಲಿಲ್ಲ. ಆದರೂ ಭಾರತವು ಅತಿ ಸುಂದರ ದೇಶವೆಂದು ಆತನು ಹೇಳಿರುವನು.

**ಹುಮಾಯೂನ :**— ೧೫೩೦–೧೫೪೦; ೧೫೫೫–೧೫೫೬.

ಬಾಬರನ ತರುವಾಯ ಅವನ ಹಿರಿಯ ಮಗನಾದ ಹುಮಾಯೂನನು ದಿಲ್ಲಿಯ ಪಟ್ಟವೇರಿದನು. ಅವನಿಗೆ ಕಾಮರಾನ, ಹಿಂದಾಲ ಮತ್ತು ಅಸ್ಕರೀ ಎಂಬ ಮೂರು ಜನ ತಮ್ಮಂದಿರಿದ್ದರು.

**ಆಳಿಕೆಯ ಆರಂಭದಲ್ಲಿಯ ಪರಿಸ್ಥಿತಿ :**— ಹುಮಾಯೂನನಿಗೆ ಎಲ್ಲೆಲ್ಲೂ ವಿರೋಧಿಗಳೇ ಕಂಡುಬಂದರು. ಸಿಂಹಾಸನಕ್ಕಾಗಿ ಆಸೆಪಟ್ಟ ಇವನ ತಮ್ಮಂದಿರು ಇವನಿಗೆ ಹಿತಶತ್ರುಗಳಾದರು. ಇವನ ದರಬಾರದಲ್ಲಿ ಎಷ್ಟೋ ಸರದಾರರು ಸಿಂಹಾಸನವನ್ನು ಆಕ್ರಮಿಸುವದಕ್ಕಾಗಿ ಒಳಸಂಚು ನಡೆಸಿದ್ದರು. ಇವನ ಸೈನಿಕರು ವಿವಿಧ ಜನಾಂಗಗಳಿಗೆ ಸೇರಿದವರೂ ಸ್ವಾರ್ಥಸಾಧಕರೂ ಇದ್ದರು. ಆದುದರಿಂದ ಹುಮಾಯೂನನು ಆಸರೆಗಾಗಿ ಬಂಧುಗಳ ಮೇಲಾಗಲಿ, ಸರದಾರ ಮೇಲಾಗಲಿ, ಸೈನಿಕರ ಮೇಲಾಗಲಿ ಭರವಸೆ ಇಡುವಂತಿರಲಿಲ್ಲ.



ಹುಮಾಯೂನ

ರಾಜ್ಯದಲ್ಲಿಯೂ ಸಮಾಧಾನಕರವಾದ ಪರಿಸ್ಥಿತಿ ಇರಲಿಲ್ಲ. ಬಾಬರನು ರಾಜ್ಯವನ್ನು ಗೆದ್ದುದು ನಿಜ. ಆದರೆ ಅವನಿಗೆ ಸುವ್ಯವಸ್ಥೆ ಉಂಟುಮಾಡಲು ಸಮಯ ಸಿಗಲಿಲ್ಲ. ರಾಜಪುತರು ಅವನಿಂದ ತಮಗಾದ ಸೋಲನ್ನು ಮರೆತಿರಲಿಲ್ಲ. ಅಫಗಾನರ ಸೊಕ್ಕು ಶಾಶ್ವತವಾಗಿ ಮುರಿದಿರಲಿಲ್ಲ. ತಾವು ಕಳೆದುಕೊಂಡ ರಾಜ್ಯವನ್ನು ಮರಳಿ ಪಡೆಯಲು ಅವರು ಕತ್ತಿಯನ್ನು ಝಳಪಿಸುತ್ತಿದ್ದರು. ಗುಜರಾತದ ಬಹಾದುರಶಾಹನೂ ಪ್ರಬಲನಾಗಿ ಮೊಗಲ ಸಾಮ್ರಾಜ್ಯಕ್ಕೆ ಗಂಡಾಂತರಪ್ರಾಯನಾಗಿದ್ದನು. ಈ ರೀತಿಯಾಗಿ ಹುಮಾಯೂನನಿಗೆ ರಾಜ್ಯದಲ್ಲಿ ಸುತ್ತೂ ಕಡೆಗೆ ವೈರಿಗಳೇ ವೈರಿಗಳು.

ಆದರೆ, "ಹುಮಾಯೂನನ ಕಡುತರ ವೈರಿಯೆಂದರೆ ಹುಮಾಯೂನನೇ" ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಅವನು ಪರಾಕ್ರಮಿಯೇನೋ

ನಿಜ. ಆದರೆ ಅವನು ಹೆಚ್ಚು ಬುದ್ಧಿವಂತನಲ್ಲ; ರಾಜಕಾರಣಿಯಲ್ಲ. ಹಿಡಿದ ಕೆಲಸಗಳನ್ನು ಅವನು ಕೊನೆಗಾಣಿಸುತ್ತಿರಲಿಲ್ಲ. ವಿಜಯದ ಉನ್ಮಾದದಲ್ಲಿ ಮೈಮರೆತು ವಿಲಾಸಭೋಗಗಳಲ್ಲಿ ಕಾಲಕಳೆಯುವ ಸ್ವಭಾವ ಅವನದು. ಹುಮಾಯೂನನು ದಯಾಳು. ಆದರೇನು? ದಯೆಗೆ ಯೋಗ್ಯರಲ್ಲದವರನ್ನೂ ಕ್ಷಮಿಸಿಬಿಡುವನು. ಇದರಿಂದ ತನ್ನ ಗೌರವಕ್ಕೆ ಕುಂದಾದರೂ ಅವನು ಲೆಕ್ಕಿಸುತ್ತಿರಲಿಲ್ಲ.

**ಆಡಳಿತ:**— ಹುಮಾಯೂನನು ಕೊನೆಯ ತಮ್ಮನಾದ ಅಸ್ಕರಿಗೆ ಸಂಭಳ, ನಡುವಿನ ತಮ್ಮನಾದ ಹಿಂದಾಲನಿಗೆ ಅಳ್ವಾರ ಮತ್ತು ಹಿರಿಯ ತಮ್ಮನಾದ ಕಾಮರಾನನಿಗೆ ಕಾಬೂಲ ಕಂದಹಾರಗಳನ್ನು ಬಿಟ್ಟುಕೊಟ್ಟನು. ಕಾಮರಾನನು ಅಷ್ಟಕ್ಕೇ ತೃಪ್ತನಾಗದೆ ಪಂಜಾಬ ಪ್ರಾಂತವನ್ನು ಆಕ್ರಮಿಸಿದನು. ಅಲ್ಲಿ ತಾನೇ ಸ್ವತಂತ್ರ ಆಳಿಕೆ ನಡೆಸಿದನು! ಕಾಮರಾನನು ಹುಮಾಯೂನನಿಗೆ ತಮ್ಮನಾದರೂ ಕಡು ವೈರಿ. ಅವನಿಗೆ ಕಾಬೂಲ ಕಂದಹಾರಗಳನ್ನು ಒಪ್ಪಿಸಿದುದು ದೊಡ್ಡ ತಪ್ಪು. ಏಕೆಂದರೆ, ಅವು ಮೊಗಲ ಬಾದಶಾಹರಿಗೆ ಸೈನ್ಯ-ಭರತಿಯ ಪ್ರದೇಶಗಳಾಗಿದ್ದವು. ಹುಮಾಯೂನನ ಈ ಕೃತಿಯಿಂದ ಅವನಿಗೆ ಅಲ್ಲಿಂದಾಗುತ್ತಿದ್ದ ಸೈನಿಕ-ಪೂರೈಕೆಯು ನಿಂತು ಹೋಯಿತು.

**ಹುಮಾಯೂನನ ಯುದ್ಧಗಳು:**— ಮೊದಲಿಗೆ ಹುಮಾಯೂನನು ಬುಂದೇಲಖಂಡದಲ್ಲಿಯ **ಕಾಲಿಂಜರ** ಕೋಟೆಯನ್ನು ಮುತ್ತಲು ದಂಡೆತ್ತಿ ಹೋದನು. ಆದರೆ ಕೋಟೆಯು ಕೈವಶವಾಗುವ ಮೊದಲೇ, ಪೂರ್ವ ದಿಕ್ಕಿನಲ್ಲಿ ಅಫಗಾನರು **ಜೋನಪುರ**ವನ್ನು ವಶಪಡಿಸಿಕೊಂಡಿದ್ದರು. ಆದುದರಿಂದ ಕಾಲಿಂಜರದ ಮುತ್ತಿಗೆಯನ್ನು ಬಿಟ್ಟುಗೊಟ್ಟು ಹುಮಾಯೂನನು ಪೂರ್ವಕ್ಕೆ ಸಾಗಿ ಕಾಳಗದಲ್ಲಿ ಅಫಗಾನರನ್ನು ಸೋಲಿಸಿ ಜೋನಪುರವನ್ನು ಮರಳಿ ಪಡೆದನು. ಮರಳಿ ಬರುವಾಗ **ಚುನಾರ** ಕೋಟೆಗೆ ಮುತ್ತಿಗೆ ಹಾಕಿದನು. ಅದು '**ಶೇರಖಾನ**'ನೆಂಬ ಅಫಗಾನ ಸರದಾರನ ವಶದಲ್ಲಿತ್ತು. ಅವನು ಮುತ್ತಿಗೆಯ ಕಾಟ ತಪ್ಪಿದರೆ ಸಾಕೆಂದು ಹುಮಾಯೂನನಿಗೆ ಶರಣು ಬಂದನು. ಅಷ್ಟರಿಂದಲೇ ಹುಮಾಯೂನನು ಮುತ್ತಿಗೆಯನ್ನು ಎಬ್ಬಿಸಿದನು. ಪೂರ್ವದಲ್ಲಿ ಗುಜರಾತ, ಮಾಳವಗಳ ಒಡೆಯನಾದ ಬಹಾದುರಶಾಹನ ಮೇಲೆ ದಂಡೆತ್ತಿ ಹೋದನು. ಹುಮಾಯೂನನು ಮಾಳವವನ್ನು ತಲುಪಿದಾಗ ಬಹಾದುರ

ಶಾಹನು ಚಿತ್ತೂರಗಡಕ್ಕೆ ಮುತ್ತಿಗೆಯಿಟ್ಟಿದ್ದನು. ಅವನು ಚಿತ್ತೂರನ್ನು ಕೈವಶಪಡಿಸಿಕೊಂಡು ಬರುವವರೆಗೂ ಹುಮಾಯೂನನು ಸುಮ್ಮನಿದ್ದು ಬಳಿಕ ಅವನನ್ನು ಕಾಳಗದಲ್ಲಿ ಸೋಲಿಸಿ ಬೆನ್ನಟ್ಟಿದನು. ಇದರಲ್ಲಿ **ಚಂಪಾನೇರ, ಅಹಮದಾಬಾದ, ಕಂಬಾಯತ** ಇವು ಹುಮಾಯೂನನ ಕೈವಶವಾದವು. ಕೊನೆಗೆ ಬಹಾದುರಶಾಹನು ಪೋರ್ತುಗೀಜರನ್ನು ಆಶ್ರಯಿಸಿದನು.[೧] ಗುಜರಾತ, ಮಾಳವಗಳು ಹುಮಾಯೂನನ ಕೈಗೆಬಂದವು. ಆದರೆ ಅಲ್ಲಿಂದ ಹುಮಾಯೂನನು ಹಿಂತಿರುಗುತ್ತಲೇ ಬಹಾದುರಶಾಹನು ಪೋರ್ತುಗೀಜರ ನೆರವಿನಿಂದ ತನ್ನ ರಾಜ್ಯವನ್ನು ಮರಳಿ ಗಳಿಸಿದನು.

**ಶೇರಖಾನನೊಂದಿಗೆ ಯುದ್ಧ :—** ಚುನಾರ ಕಿಲ್ಲೇದಾರನಾಗಿದ್ದ ಶೇರಖಾನನು ಈ ಸಮಯದಲ್ಲಿ ದಿನದಿನಕ್ಕೂ ಪ್ರಬಲನಾಗಹತ್ತಿದ್ದನು. ಅವನ ಪ್ರತಿಷ್ಠೆಯು ಬೆಳೆಯಹತ್ತಿತು. ಅವನು ಬಿಹಾರದ ಒಡೆಯನಾದನು. ಬಂಗಾಲದ ಮೇಲೆ ದಂಡಯಾತ್ರೆಯನ್ನು ಕೈಕೊಂಡು ಅದರ ರಾಜಧಾನಿಯಾದ 'ಗೌಡ' ವನ್ನು ಮುತ್ತಿದನು. ಆಗ ಹುಮಾಯೂನನ ಲಕ್ಷ್ಯವು ಅವನ ಕಡೆಗೆ ಹೊರಳಿತು. ಅವನು ಗೌಡವನ್ನು ಪ್ರವೇಶಿಸಿದನು. (೧೫೩೮). ಮುಂದೆ ಎರಡು ವರ್ಷಗಳಲ್ಲಿ ಎರಡು[೨] ಮಹತ್ವದ ಕಾಳಗಗಳಾದವು. ಎರಡರಲ್ಲೂ ಹುಮಾಯೂನನೇ ಸೋತನು. ಹುಮಾಯೂನನು ದಿಲ್ಲಿಯನ್ನು ಬಿಟ್ಟು ಹೊರಟನು. ಮೊಗಲ ಸಾಮ್ರಾಜ್ಯವು ಮರಳಿ ಪಠಾಣರ ಕೈಸೇರಿತು.

**ವನವಾಸ:—** ಹುಮಾಯೂನನಿಗೆ ವನವಾಸ ಪ್ರಾಪ್ತವಾಯಿತು. ಪಂಜಾಬ, ಸಿಂಧ, ಕಾಬೂಲಗಳಲ್ಲಿ ಸುತ್ತಾಡಿ ಕೊನೆಗೆ ಇರಾಣಕ್ಕೆ ಹೋದನು. ಅಲ್ಲಿಯ ಅರಸನ 'ಶಿಯಾ' ಪಂಥವನ್ನು ಸ್ವೀಕರಿಸಿ ಅವನಿಂದ ಸೈನ್ಯಸಹಾಯ ಪಡೆದನು. ಮರಳಿ ಬಂದು ಕಂದಹಾರ ಕಾಬೂಲಗಳನ್ನು ಕೈವಶ ಮಾಡಿಕೊಂಡನು.

**ಮತ್ತೆ ದಿಲ್ಲಿಯ ಪಟ್ಟ ಹಾಗೂ ಮರಣ :—** ಹುಮಾಯೂನನು ಶೇರಶಾಹನ ಸಂತತಿಯ ಕೊನೆಯ ದುರ್ಬಲ ಅರಸನನ್ನು ಸೋಲಿಸಿ ಮತ್ತೆ ದಿಲ್ಲಿಯ ಪಟ್ಟವನ್ನು ಗಳಿಸಿದನು (೧೫೫೫). ಆದರೆ ಮುಂದೆ ಒಂದೇ ವರ್ಷದ ಮೇಲೆ ಅವನು ಮರಣ ಹೊಂದಿದನು.

---

೧. ಅವರ ವಶದಲ್ಲಿದ್ದ 'ದೀವ' ನಡುಗಡ್ಡೆಯಲ್ಲಿ ಕೆಲವು ದಿವಸಗಳನ್ನು ಕಳೆದನು.

೨. ಚೌಸ್ಸಾ ಮತ್ತು ಕನೋಜ.

ಸಿಂಧದಲ್ಲಿ ಸುತ್ತಾಡುವಾಗ ಒಮ್ಮೆ ರಾಣಾಪ್ರಸಾದನೆಂಬ ರಾಜಪುತನ ಆಶ್ರಯದಲ್ಲಿದ್ದಾಗ ಅಮರಕೋಟೆಯೆಂಬಲ್ಲಿ ಹುಮಾಯೂನನಿಗೆ ಅಕಬರನೆಂಬ ಮಗನು ಜನಿಸಿದನು (೧೫೪೨).

**ಶೇರಶಾಹ** (೧೫೪೦–೧೫೪೫) :—

ಇವನು ಹುಮಾಯೂನನನ್ನು ಸೋಲಿಸಿ ಅವನಿಂದ (ಬಾಬರನು ಸ್ಥಾಪಿಸಿದ) ಮೊಗಲ ಸಾಮ್ರಾಜ್ಯವನ್ನು ಕಸಿದುಕೊಂಡನು.

**ಪೂರ್ವಚರಿತ್ರೆ** :— ಶೇರಶಾಹನು 'ಸೂರ' ಮನೆತನದ ಅಫಗಾನನು. ಇವನ ಮೊದಲಿನ ಹೆಸರು **ಫರೀದಖಾನ**.[೧] ಇವನ ತಂದೆ, ಹಸನಖಾನ. ಅವನು ಜೋನಪುರ ಪ್ರಾಂತಾಧಿಕಾರಿಯ ಕೈಕೆಳಗಿನ ಒಬ್ಬ ಜಾಗೀರದಾರನು. 'ಸಸರಾಮ' ಎಂಬುದು ಅವನ ಜಾಗೀರು. ಮಲತಾಯಿಯ ಮತ್ಸರದ ಮೂಲಕ ಫರೀದನು ಮನೆಬಿಟ್ಟು ಜೋನಪುರವನ್ನು ಸೇರಿದನು.[೨] ಓದುಬರೆಹಗಳಲ್ಲಿ ಅವನು ಅಲ್ಲಿ ಕೆಲಕಾಲ ಕಳೆದನು. ಅವನು ಬಾಲ್ಯದಿಂದಲೂ ಚುರುಕುಬುದ್ಧಿಯವನು. ಆದುದರಿಂದ ಬೇಗನೆ ಫಾರ್ಸೀ ಆರಬೀ ಭಾಷೆಗಳಲ್ಲಿ ಪಾಂಡಿತ್ಯವನ್ನು ಗಳಿಸಿದನು. ತಂದೆ ಇರುವಾಗಲೇ ಅವನ ಜಾಗೀರಿನ ಆಡಳಿತದ ಅಧಿಕಾರವು ಫರೀದಖಾನನಿಗೆ ದೊರೆಯಿತು. ಅವನ ಆಳಿಕೆಯು ಅತಿ ಜನಪ್ರಿಯವಾಯಿತು. ಜೊತೆಗೆ, ಜಾಗೀರಿನ ಸಂಪತ್ತೂ ಬೆಳೆಯಿತು. ಆದರೆ ಇದರಿಂದ ಮಲತಾಯಿಯ ಮತ್ಸರ ಬಲಿಯಿತು. ಫರೀದಖಾನನು ಮತ್ತೊಮ್ಮೆ ಮನೆಬಿಟ್ಟು ಹೊರಬಿದ್ದನು. ಅವನು ಆಗ್ರಾದಲ್ಲಿ ಕೆಲವು ಕಾಲ ಕಳೆದನು. ತಂದೆಯ ಮರಣದ ತರುವಾಯ ಅವನ ಆಸ್ತಿಯನ್ನು ತನ್ನ ವಶಪಡಿಸಿಕೊಂಡನು.[೩]

**ಫರೀದಖಾನನು ಶೇರಖಾನನಾದನು** (೧೫೨೫) :— ಫರೀದಖಾನನು ಬಿಹಾರದ ದೊರೆಯ ಊಳಿಗದಲ್ಲಿ ಸೇರಿದನು. ಪ್ರಾಮಾಣಿಕ ಸೇವೆಯಿಂದ ದೊರೆಯ ಪ್ರೀತಿಯನ್ನು ಗಳಿಸಿದನು. ಒಮ್ಮೆ ಇಬ್ಬರೂ ಒಟ್ಟಾಗಿ ಬೇಟೆಗೆ ಹೋದಾಗ ಒಂದು ಹುಲಿಯು ದೊರೆಯ ಮೈಮೇಲೆ ಒಮ್ಮೆಲೆ ಹಾರಿತು.

೧. ಇವನು ೧೪೭೨ ರಲ್ಲಿ ಜನಿಸಿದನು.

೨. ಆಗ ಅವನು ೨೨ ವರ್ಷ ವಯಸ್ಸಿನವ.

೩. ಇದರ ಸಲುವಾಗಿ ಅವನು ಆಗ್ರಾದಲ್ಲಿರುವಾಗಲೇ ದಿಲ್ಲೀಶ್ವರನ ಅಪ್ಪಣೆ ಪಡೆದಿದ್ದನಂತೆ.

ಆಗ ಫರೀದಖಾನನು ಅವನ್ನು ತಾನೊಬ್ಬನೇ ಎದುರಿಸಿ ಕತ್ತಿಯ ಒಂದೇ ಹೊಡೆತದಿಂದ ಕೊಂದೊಗೆದನು. ಅವನ ಶೂರತನವನ್ನು ಕಂಡು ಆ ದೊರೆಯು ಅವನಿಗೆ **ಶೇರಖಾನ** ನೆಂಬ ಬಿರುದು ಕೊಟ್ಟನು. ಅಷ್ಟೇ ಅಲ್ಲ; ಅವನನ್ನು ತನ್ನ ರಾಜ್ಯದಲ್ಲಿ ಪ್ರತಿನಿಧಿಯನ್ನಾಗಿ ಮಾಡಿಕೊಂಡನು. ತನ್ನ ಚಿಕ್ಕ ಮಗನ ವಿದ್ಯಾಭ್ಯಾಸಂಗದ ಮೇಲ್ವಿಚಾರಣೆಯನ್ನು ಅವನಿಗೇ ಒಪ್ಪಿಸಿದನು.

ಆದರೆ ಶೇರಖಾನನಿಗೆ ದೈವವು ಮತ್ತೊಮ್ಮೆ ಪ್ರತಿಕೂಲವಾಯಿತು. ಚಾಡಿಕೋರರ ಚಾಡಿಗೆ ಕಿವಿಗೊಟ್ಟು ಬಿಹಾರದ ದೊರೆಯು ಅವನ ಜಾಗೀರಿಯನ್ನು ಕಿತ್ತುಕೊಂಡನು. ಆಗ ಶೇರಖಾನನು **ಬಾಬರನ** ಶಿಬಿರಕ್ಕೆ ಹೋದನು (೧೫೨೭). ಅಲ್ಲಿ ಒಂದು ವರ್ಷ ಬಾಬರನ ದಂಡಯಾತ್ರೆಗಳಲ್ಲಿ ಅವನಿಗೆ ಬಹಳ ಉಪಯೋಗ ಬಿದ್ದನು. ಅವನಿಂದ ಶೇರಖಾನನಿಗೆ ತನ್ನ ಜಾಗೀರಿಯು ಮರಳಿ ದೊರೆಯಿತು. ಆದರೆ ಶೇರಖಾನನು ಮೊಗಲರ ಸೇವೆಯಲ್ಲಿ ಬಹಳ ಕಾಲ ನಿಲ್ಲಲಿಲ್ಲ.

**ಶೇರಖಾನನು ಶೇರಶಾಹನಾದನು** (೧೫೪೦) :—

ಈಗ ಶೇರಖಾನನು ಮತ್ತೆ ಬಿಹಾರಕ್ಕೆ ಬಂದನು. ಆದರೆ ಈ ಸಲ ಅಲ್ಪವಯಿಯಾದ ರಾಜಕುಮಾರನು ಹೆಸರಿಗೆ ಮಾತ್ರ ದೊರೆ. ಆಡಳಿತದ ಎಲ್ಲ ಅಧಿಕಾರವೂ ಶೇರಖಾನನದೇ. ಇದೇ ಸಮಯದಲ್ಲಿ ಅವನು **ಚುನಾರದ** ಕಿಲ್ಲೇದಾರನ ವಿಧವೆಯ ಪ್ರೇಮಕ್ಕೆ ಪಾತ್ರನಾದನು. ಅವಳನ್ನು ಮದುವೆಯಾಗಿ ಆ ಕೋಟೆಯ ಒಡೆಯನಾದನು. ಆದರೆ ಅವನ ಅಕ್ರಮ ಮತ್ತು ನಿರಂಕುಶ ಆಳಿಕೆ ಇವುಗಳನ್ನು ಬಿಹಾರದ ರಾಜಕುಮಾರನೂ ಸರದಾರರೂ ಸಹಿಸದಾದರು. ಅವನಿಂದ ತಪ್ಪಿಸಿಕೊಳ್ಳಲು ಅವರು ಬಂಗಾಲದ ಸುಲ್ತಾನನ ನೆರವು ಪಡೆದರು. ಆದರೆ ಶೇರಖಾನನು ಸಾಮಾನ್ಯನಲ್ಲ! ಒಟ್ಟುಗೂಡಿ ಬಂದ ಅವರ ಸೈನ್ಯಗಳನ್ನು ಬಿಹಾರದ ಬಳಿಯ ಕಾಳಗದಲ್ಲಿ ಸೋಲಿಸಿ ಚದರಿಸಿದನು. ಇದರಿಂದ ಅವನೇ ಬಿಹಾರ ರಾಜ್ಯದ ದೊರೆಯಾದನು.

ಹುಮಾಯೂನ ಬಾದಶಾಹನು ಗುಜರಾತದ ದಂಡಯಾತ್ರೆಯಲ್ಲಿ ತೊಡಗಿದಾಗ ಶೇರಖಾನನು ಬಂಗಾಲದಲ್ಲಿ ನುಗ್ಗಿ ಅದರ ರಾಜಧಾನಿಯನ್ನು[೧] ಸುಲಿದು ಸೂರೆಗೊಂಡನು. ಹುಮಾಯೂನನು ಇವನ ಮೇಲೆ ಅಭಿಯೋಗಕ್ಕಾಗಿ ಅಲ್ಲಿಗೆ ಬಂದಾಗ ಇವನು ಬಂಗಾಲದಿಂದ ಹೊರಬಿದ್ದನು.

---

೧. 'ಗೌಡ'

ಮತ್ತು ಬಿಹಾರ ಜೋನಪುರಗಳಲ್ಲಿಯು ಮೊಗಲ ಪ್ರದೇಶಗಳನ್ನು ಆಕ್ರಮಿಸು ವದರಲ್ಲಿಯೂ ಪಶ್ಚಿಮಕ್ಕೆ ಕನೋಜದವರೆಗೆ ಲೂಟಿ ಮಾಡುವದರಲ್ಲಿಯೂ ಕಾಲಕಳೆದನು. (ಹುಮಾಯೂನ ಶೇರಖಾನ ಇವರ ಕಾಳಗಗಳು ಮತ್ತು ಅವುಗಳ ಪರಿಣಾಮಗಳಿಗಾಗಿ ೯೨ ನೆಯ ಪುಟ ನೋಡಿರಿ.)

**ಶೇರಶಾಹನ ದಂಡಯಾತ್ರೆಗಳು :—** ದಿಲ್ಲಿಯ ಸಮ್ರಾಟನಾದ ಮೇಲೆ ಶೇರಶಾಹನು ರಾಜಪುತರ ಮಾಳವಾ, ರಾಯಸೀನ, ಮಾರವಾಡ ಕಾಲಿಂಜರಗಳನ್ನು ಮುತ್ತಿ ಕೈವಶಪಡಿಸಿಕೊಂಡನು. ಸಿಂಧ, ಮುಲ್ತಾನಗಳನ್ನು ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಕಾಬೂಲದಿಂದ ಬಂಗಾಲದ ವರೆಗೂ ಪಂಜಾಬದಿಂದ ಗುಜರಾತದ ವರೆಗೂ ಇವನ ಸಾಮ್ರಾಜ್ಯವು ಹಬ್ಬಿತು.

**ಶೇರಶಾಹನ ರಾಜ್ಯಭಾರ :—** ಇವನು ಆಡಳಿತದ ಎಲ್ಲ ಅಂಗ (ಶಾಖೆ) ಗಳಲ್ಲಿಯೂ ಉಪಯುಕ್ತವಾದ ಸುಧಾರಣೆಗಳನ್ನು ಮಾಡಿದನು. **ಆಡಳಿತದ ಅನುಕೂಲತೆಗಾಗಿ,** 'ಸರಕಾರ'[೧] ಮತ್ತು 'ಪರಗಣೆ'[೨] ಗಳೆಂಬ ವಿಭಾಗಗಳನ್ನು ಮಾಡಿದನು. ಪ್ರತಿಯೊಂದು ಪರಗಣೆಯಲ್ಲಿ ಇತರ ಅಧಿಕಾರಗಳ ಜೊತೆಗೆ, ಲೆಕ್ಕಪತ್ರಗಳನ್ನು ಬರೆದಿಡುವದಕ್ಕಾಗಿ ಒಬ್ಬ ಹಿಂದು ಮತ್ತು ಒಬ್ಬ ಮುಸಲ್ಮಾನ ಕಾರಕೂನರಿದ್ದರು. 'ಪರಗಣೆ' ಯ ಅಧಿಕಾರಿಗಳ ಮೇಲ್ವಿಚಾರಣೆಯು 'ಸರಕಾರ' ದಲ್ಲಿಯ ಅಧಿಕಾರಿಗಳಿಂದ ನಡೆಯುತ್ತಿತ್ತು. ೨-೩ ವರ್ಷಗಳಿಗೊಮ್ಮೆ ಅಧಿಕಾರಿಗಳನ್ನು ಸ್ಥಳಾಂತರ ಮಾಡಲಾಗುತ್ತಿತ್ತು.



ಶೇರಶಾಹ

**ಕಂದಾಯ :—** ಒಕ್ಕಲತನದ ಏಳ್ಗೆಗಾಗಿ ಇವನು ಮಾಡಿದ ಸುಧಾರಣೆಗಳು ಸುಪ್ರಸಿದ್ಧವಿರುವವು. ಭೂಮಿಯನ್ನು ಯೋಗ್ಯ ರೀತಿಯಿಂದ ಅಳೆಯಿಸಿದನು. ಸರಾಸರಿ ಹುಟ್ಟುವಳಿಯ ನಾಲ್ಕರಲ್ಲೊಂದು ಭಾಗವನ್ನು (ಇಲ್ಲವೆ ಮೂರರಲ್ಲೊಂದು ಭಾಗವನ್ನು) ಸರಕಾರಕ್ಕೆ ಸಲ್ಲಬೇಕಾದ ಕಂದಾಯವೆಂದು

೧. ಇದು ಈಗಿನ 'ಜಿಲ್ಹೆ' ಗೆ ಸಮಾನವಾದುದೆಂದು ತಿಳಿಯಬಹುದು.

೨. ಇದು ಈಗಿನ 'ತಾಲೂಕು.'

ಗೊತ್ತುಪಡಿಸಿದನು. ಇದನ್ನು ನಾಣ್ಯದ ಇಲ್ಲವೆ ಧಾನ್ಯದ ರೂಪದಲ್ಲಿ ಕೊಡ ಬಹುದಿತ್ತು. ಒಕ್ಕಲಿಗರಿಗೆ ಕಷ್ಟಕಾಲದಲ್ಲಿ 'ಸೂಟು ಬಿಡುವದು', 'ಸಾಲ ಕೊಡುವದು' ಮುಂತಾದ ಸೌಕರ್ಯಗಳನ್ನು ಸರಕಾರವು ಕೊಡುತ್ತಿತ್ತು.

**ವ್ಯಾಪಾರ :**— ಶೇರಶಾಹನು ತೂಕ ಅಳತೆಗಳನ್ನು ಗೊತ್ತುಪಡಿಸಿದನು. ತೊಂದರೆಯುಂಟುಮಾಡುವ ಸುಂಕಗಳನ್ನು ತೆಗೆದೊಗೆದನು. ರಾಜ್ಯದಲ್ಲಿ ದೊಡ್ಡ ದೊಡ್ಡ ರಸ್ತೆಗಳನ್ನು ಮಾಡಿಸಿದನು. ಅವುಗಳ ಎರಡೂ ಬದಿಗೆ ನೆರಳಿಗಾಗಿ ಗಿಡಗಳನ್ನು ನೆಡಿಸಿದನು. ನಾಲ್ಕು ಮೈಲಿಗೊಂದರಂತೆ ಧರ್ಮಶಾಲೆ ಗಳು. ಅವುಗಳಲ್ಲಿ ಹಿಂದು ಮುಸ್ಲಿಂ ಇವರಿಗಾಗಿ ಬೇರೆ ಬೇರೆ ಊಟ ವಸತಿಗಳ ಏರ್ಪಾಡು.

**ನ್ಯಾಯದಾನ :**— ಇದರಲ್ಲಿ ಭೇದಭಾವವಿರಲಿಲ್ಲ. ಎಲ್ಲರಿಗೂ ಕಾನೂನು ಗಳಿಗೆ ಅನುಸಾರವಾಗಿ ಯೋಗ್ಯ ನ್ಯಾಯವು ದೊರೆಯುತ್ತಿತ್ತು. ಅಪರಾಧಗಳು ತೀರ ವಿರಳವಿದ್ದವು. ಏಕೆಂದರೆ, ಅವುಗಳ ಸಲುವಾಗಿ ಸ್ಥಳಿಕ ಅಧಿಕಾರಿಗಳನ್ನೇ ಹೊಣೆಗಾರರೆಂದು ಹಿಡಿಯಲಾಗುತ್ತಿತ್ತು. ಅಲ್ಲದೆ, ಪೋಲೀಸಖಾತೆ, ಗೂಢ ಚಾರರ ಖಾತೆಗಳಿದ್ದವು.

**ಸೈನ್ಯಖಾತೆ :**—ಶೇರಖಾನನಲ್ಲಿ ದೊಡ್ಡ ಶಾಶ್ವತ ಸೈನ್ಯವಿತ್ತು. ಅವನು ತಾನೇ ಪರೀಕ್ಷಿಸಿ ಸೈನ್ಯ-ಭರತಿ ಮಾಡುತ್ತಿದ್ದನು. ರಾಜ್ಯದ ಆಯಕಟ್ಟಿನ ಸ್ಥಳಗಳಲ್ಲಿ ಸೈನ್ಯವನ್ನಿಟ್ಟನು. ಸೈನ್ಯದಲ್ಲಿ ಕಟ್ಟುನಿಟ್ಟಿನ ಶಿಸ್ತು. ಸೈನಿಕರಿಗೆ ಗೊತ್ತುಪಡಿಸಿದ ಸಂಬಳ. ಲಂಚಗುಳಿತನಕ್ಕೆ ಎಡೆಯಿರಲಿಲ್ಲ. ಕುದುರೆಗಳಿಗೆ ಸುಡುಮುದ್ರೆ ಒತ್ತಲಾಗುತ್ತಿತ್ತು.

**ಟಪಾಲಖಾತೆ :**— ಸರಕಾರದ ಕಾಗದ ಪತ್ರಗಳು ಬೇಗನೆ ಮುಟ್ಟು ವದಕ್ಕಾಗಿ ಶೇರಖಾನನು ಕುದುರೆಸವಾರರ ವ್ಯವಸ್ಥೆ ಇಟ್ಟಿದ್ದನು.

**ನಾಣ್ಯಚಲಾವಣೆ :**— ನಾಣ್ಯಪದ್ಧತಿಯಲ್ಲೂ ಶೇರಶಾಹನಿಂದ ಸುಧಾರಣೆ ಮಾಯಿತು. ತನ್ನ ಹೆಸರಿನ ನಾಣ್ಯಗಳನ್ನು ಅವನು ಮುದ್ರಿಸಿದನು.

**ಮರಣ :**— ಕಾಲಿಂಜರ ಕೋಟೆಗೆ ಮುತ್ತಿಗೆ ಹಾಕಿದಾಗ ಶೇರಶಾಹನು ಮದ್ದು ಸಿಡಿದು ಮರಣ ಹೊಂದಿದನು (೧೫೪೫).

**ಯೋಗ್ಯತೆ :**— ಶೇರಶಾಹನು ಇಸ್ಲಾಂ ಧರ್ಮನಿಷ್ಠನು. ಆದರೆ ಅವನು ಆ ಧರ್ಮದ ದುರಭಿಮಾನಿಯಲ್ಲ. ಆಡಳಿತದಲ್ಲಿ ಹಿಂದುಗಳಿಗೆ ದೊಡ್ಡ ಹುದ್ದೆ

ಗಳನ್ನು ಕೊಟ್ಟನು. ಅವರನ್ನು ನ್ಯಾಯಬುದ್ಧಿಯಿಂದ ನೋಡಿಕೊಂಡನು. ಅವನು ಭಾರತ ದೇಶದ ಶ್ರೇಷ್ಠ ಅರಸರಲ್ಲೊಬ್ಬನು. ಅವನದು ಪ್ರಜಾ ವಾತ್ಸಲ್ಯದ ಆಳಿಕೆ.

## ಅಭ್ಯಸನಗಳು.

(೧) "ವೀರರೇ, ಈ ಪ್ರಪಂಚದಲ್ಲಿ ಎಲ್ಲವೂ ಕ್ಷಣಿಕ. ನಾವೆಲ್ಲ ಮರಣಾಧೀನರು. ದೇವರು ಮಾತ್ರ ಅಮರನು, ಶಾಶ್ವತನು. ಜೀವನದ ಸವಿಯುಂಡವರೆಲ್ಲ ಸಾವಿನ ಕಹಿಯನ್ನೂ ರುಚಿಸಬೇಕು. ಹೇಡಿಗಳಾಗಿ ಬಾಳುವದಕ್ಕಿಂತ ವೀರರಾಗಿ ಮಡಿಯುವದೇ ಲೇಸಲ್ಲವೇ? ನಮ್ಮ ದೇಹವು ಮೃತ್ಯುವಿನದಾದರೂ ಕೀರ್ತಿಯು ನಮ್ಮದಾಗಲಿ! ಇದು ನಮ್ಮ ಸತ್ತ್ವಪರೀಕ್ಷೆಯ ಕಾಲ. ಗೆದ್ದರೆ ರಾಜ್ಯಭೋಗ, ಮಡಿದರೆ ವೀರಸ್ವರ್ಗ. ಆದುದರಿಂದ ನಾವು ರಣಾಂಗಣದಿಂದ ಎಂದೂ ಓಡಿಹೋಗುವದಿಲ್ಲವೆಂದು ಇಂದೇ ಕುರಾನದ ಸಾಕ್ಷಿಯಾಗಿ ಪ್ರತಿಜ್ಞೆ ಮಾಡೋಣ." (ಬಾಬರ)

ಮೇಲಿನ ಅವತರಣಿಕೆಯನ್ನು ಓದಿ, ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—

* (ಅ) ಬಾಬರನು ಈ ಭಾಷಣವನ್ನು ಯಾವ ಸಮಯದಲ್ಲಿ ಮಾಡಿದನು? (ಆ) ಅಲ್ಲಿಯ ಆಗಿನ ಪರಿಸ್ಥಿತಿಯನ್ನು ವರ್ಣಿಸಿರಿ. (ಇ) ಈ ಭಾಷಣದಲ್ಲಿ ಬಾಬರನ ಉದ್ದೇಶ ವೇನಿತ್ತು? (ಈ) ಜನನ-ಮರಣಗಳ ಬಗೆಗೆ ಬಾಬರನ ಅಭಿಪ್ರಾಯವೇನಿತ್ತು?

(೨) ೮೯ ನೆಯ ಪುಟದ ಮೇಲಿನ ಚಿತ್ರದ ವಿವರಗಳನ್ನು ನಿಮ್ಮ ಮಾತಿನಲ್ಲಿ ವರ್ಣಿಸಿರಿ.

(೩) ಹುಮಾಯೂನನು ತನ್ನ ರಾಜ್ಯವನ್ನು ಕಳೆದುಕೊಂಡ ಕಾರಣಗಳು ಯಾವವು?

(೪) ಶೇರಶಾಹನ ಸುಧಾರಣೆಗಳಲ್ಲಿ ಕೆಳಗೆ ಕೊಟ್ಟ ಶಾಖೆಗಳಿಗೆ ಸಂಬಂಧಿಸಿದ ಸುಧಾರಣೆಗಳನ್ನು ಚಿತ್ರಿಸಿರಿ:- (ಅ) ಕಂದಾಯ (ಆ) ವ್ಯಾಪಾರ (ಇ) ಅಂಚೆ (ಟಪಾಲು) (ಈ) ರಾಜಮಾರ್ಗ.

ಆಗ ಅತಿ ಗೌರವದಿಂದ ಅಕಬರನು ಬೈರಾಮನನ್ನು ಸನ್ಮಾನಿಸಿದನು. ಬಳಿಕ ಬೈರಾಮನು ಮಕ್ಕಾಯಾತ್ರೆಗೆ ಹೊರಟನು. ಆದರೆ ಗುಜರಾತದಲ್ಲಿ ಅವನ ಕೊಲೆಯಾಯಿತು.

## ರಾಜ್ಯವಿಸ್ತರಣೆ

**ಅಕಬರನ ಸಂಕಲ್ಪ :**— " ಇಡೀ ಭಾರತದಲ್ಲೆಲ್ಲ ನನ್ನ ಪ್ರಭುತ್ವವನ್ನು ಹರಡಬೇಕು; ಹಿಂದು-ಮುಸಲ್ಮಾನರು ಹಳೆಯ ವೈರವನ್ನು ಬಿಟ್ಟು ಸುಖ-ಶಾಂತಿಗಳಿಂದ ಬಾಳಬೇಕು; ಭಾರತವು ಏಕರಾಷ್ಟ್ರವಾಗಬೇಕು. " ಇದುವೆ ಅಕಬರನ ದೃಢ ಸಂಕಲ್ಪ. ರಾಜ್ಯವಿಸ್ತರಣೆಯ ಉದ್ದೇಶ. **ಅಕಬರನ ದಿಗ್ವಿಜಯಗಳು :**— ಅಕಬರನ ದಿಗ್ವಿಜಯಗಳನ್ನು (ಅ) ಉತ್ತರ ಭಾರತದ ದಿಗ್ವಿಜಯವೆಂದೂ (ಆ)ದಕ್ಷಿಣಾಪಥದ ದಿಗ್ವಿಜಯವೆಂದೂ ವಿಂಗಡಿಸಬಹುದು.

### (೧) **ಉತ್ತರ ಭಾರತದ ದಿಗ್ವಿಜಯ** (೧೫೬೦-೧೫೯೨).

(೧) ' ಮಾಳವ ' ' ಗೊಂಡವನ ' ಗಳ ಕೈವಶ (೧೫೬೧) : — ಅಕಬರನ ದಿಗ್ವಿಜಯದಲ್ಲಿ ಮಾಳವ ಗೊಂಡವನ ರಾಜ್ಯಗಳು ಎಲ್ಲಕ್ಕೂ ಮೊದಲು ಅವನ ಕೈವಶವಾದವು. ಮಾಳವದ ಬಾಜಬಹಾದುರನು ಸೋತು ಮೇವಾಡದ ಉದಯಸಿಂಹನನ್ನು ಆಶ್ರಯಿಸಿದನು. ಗೊಂಡವನದ ರಾಣಿ ದುರ್ಗಾವತಿಯು ರಣರಂಗದಲ್ಲಿ ವೀರಾವೇಶದಿಂದ ಕಾದಿದಳು. ವಿಜಯದಾಸೆ ತಪ್ಪಿದಕೂಡಲೆ, ಅಲ್ಲಿಯೇ ಕಠಾರಿಯಿಂದ ಇರಿದುಕೊಂಡು ಪ್ರಾಣಬಿಟ್ಟಳು.


ಮಾನಸಿಂಗ

(೨) **ಅಕಬರನೂ ರಾಜಪುತರೂ:**— ಅಕಬರನು ಬುದ್ಧಿವಂತನು. ರಾಜಪುತರೊಡನೆ ವೈರವು ಪ್ರಯೋಜನವಿಲ್ಲೆಂದು ಬಗೆದು ಅವರ ಪ್ರೀತಿ ವಿಶ್ವಾಸಗಳನ್ನು ಗಳಿಸಲು ಪ್ರಯತ್ನಿಸಿದನು. ಕ್ರಿ.ಶ. ೧೫೬೨ ರಲ್ಲಿ ಅಂಬರ (' ಜಯಪುರ ')ದ ರಾಣಾ ' ವಿಹಾರಿಮಲ್ಲ ' ನ ಮಗಳಾದ ' ಜಯಾರಾಣಿ ' ಯನ್ನು ಮದುವೆಯಾದನು. ಅಕಬರನು ವಿಹಾರಿಮಲ್ಲನನ್ನು ೫೦೦೦

ಕುದುರೆಗಳ ಮನಸಬದಾರನನ್ನಾಗಿ ನೇಮಿಸಿದನು. ಅವನ ಮಗನಾದ 'ಭಗವಾನದಾಸ' ನಿಗೂ, ಮೊಮ್ಮಗನಾದ 'ಮಾನಸಿಂಗ' ನಿಗೂ ಅಕಬರನ ಸೈನ್ಯದಲ್ಲಿ ದೊಡ್ಡ ಹುದ್ದೆಗಳು ದೊರೆತವು. ಹೀಗೆ ಈ ಮದುವೆಯಿಂದ ಹಿಂದು ಮುಸಲ್ಮಾನರಲ್ಲಿ ಪರಸ್ಪರ ಪ್ರೀತಿ, ವಿಶ್ವಾಸಗಳು ಹೆಚ್ಚಿದವು.

**ಚಿತ್ತೂರಿನ ಮುತ್ತಿಗೆ (೧೫೬೭) :—** ಆದರೆ ರಾಜಪುತಸ್ಥಾನದಲ್ಲೆಲ್ಲ ದೊಡ್ಡ ರಾಜ್ಯವಾದ ಮೇವಾಡದ ರಾಜಪುತರ ಮಾತೇ ಬೇರೆ! ಅವರು ಸ್ವಾಭಿಮಾನಿಗಳು. ಮೊಗಲರೆಂದರೆ ಅವರಿಗೆ ತಿರಸ್ಕಾರ. ಇಲ್ಲದೆ 'ಉದಯ ಸಿಂಹ' ನು ಬಾಜ ಬಹಾದುರನಿಗೆ ಆಶ್ರಯ ಕೊಟ್ಟಿದ್ದನು. ಆದುದರಿಂದ ಅಕಬರನು ಚಿತ್ತೂರಿನ ಕೋಟೆಯನ್ನು ಮುತ್ತಿದನು. ಆಗ ರಾಣಾ ಉದಯ ಸಿಂಹನು ಚಿತ್ತೂರಿನ ಸಂರಕ್ಷಣೆಯ ಹೊಣೆಯನ್ನು ಜಯಮಲ್ಲನೆಂಬ ವೀರನಿಗೊಪ್ಪಿಸಿ ತಾನು ಅರವಲೀ ಬೆಟ್ಟದಲ್ಲಿ ಅಡಗಿಕೊಂಡನು. ಜಯ ಮಲ್ಲನು ವೃದ್ಧನಾದರೂ ಗಂಡುಗಲಿ. ಸ್ವಾತಂತ್ರ್ಯರಕ್ಷಣೆಗಾಗಿ ಎಲ್ಲರನ್ನೂ ಹುರಿದುಂಬಿಸಿದನು. ೪ ತಿಂಗಳು ಕೋಟೆಯನ್ನು ಸಂರಕ್ಷಿಸಿದನು. ಕೊನೆಗೆ ಅಕಬರನು ಸುರಂಗಗಳಿಂದ ಕೋಟೆಯ ಗೋಡೆಗಳನ್ನು ಭೇದಿಸಿದನು. ರಾಜಪುತರು ಕ್ಷಾತ್ರತೇಜದಿಂದ ಹೋರಾಡಿದರು. ಜಯಮಲ್ಲನು ಅಕಬರನ ಗುಂಡಿಗೆ ಆಹುತಿಯಾದನು. ಆ ಮೇಲೆ ಕೋಟೆಯು ಅಕಬರನ ವಶವಾ ಯಿತು. ಆದರೆ ರಾಣಾನ ಹೋರಾಟವು ಇಲ್ಲಿಗೆ ಮುಗಿಯಲಿಲ್ಲ.

ಚಿತ್ತೂರಿನ ಪತನಾನಂತರ ರಣಸ್ತಂಭಪುರ, ಕಾಲಿಂಜರ, ಜೋಧಪುರ, ಬಿಕಾನೇರ ರಾಜಪುತ ರಾಜ್ಯಗಳು ಅಕಬರನ ಪ್ರಭುತ್ವವನ್ನು ಒಪ್ಪಿಕೊಂಡವು. ಬಿಕಾನೇರದ ಕಲ್ಯಾಣಮಲ್ಲನು ತನ್ನ ಮಗಳನ್ನೇ ಅಕಬರನಿಗೆ ಮದುವೆ ಮಾಡಿಕೊಟ್ಟನು.

ಆಮೇಲೆ ಅಕಬರನು ಮುಸಲ್ಮಾನರ ರಾಜ್ಯಗಳಾದ ಗುಜರಾತ, ಬಂಗಾಲಗಳನ್ನು ಕೈವಶಪಡಿಸಿಕೊಂಡನು (೧೫೭೨-೧೫೭೪).

**ಪ್ರತಾಪ ಸಿಂಹ :—** ಇವನು ಉದಯಸಿಂಹನ ಮಗ. ಅರವಲೀ ಬೆಟ್ಟದಲ್ಲಿ ಅಡಗಿದ್ದ ಉದಯಸಿಂಹನು 'ಉದಯಪುರ' ವೆಂಬ ಹೊಸ ರಾಜ ಧಾನಿಯನ್ನು ನಿರ್ಮಿಸಿ ಕಾಲವಾದನು. ಪ್ರತಾಪಸಿಂಹನಿಗೆ ಪಟ್ಟವಾಯಿತು. ಅವನು ಸಿಂಹನಂತೆಯೇ ಪ್ರತಾಪಶಾಲಿ. ಅಕಬರನೊಂದಿಗೆ ವಿವಾಹ ಸಂಬಂಧ ಗಳನ್ನು ಬೆಳೆಯಿಸಿದ ರಾಜಪುತರೆಂದರೆ ಇವನಿಗೆ ತುಂಬ ತಿರಸ್ಕಾರ.


ಪ್ರತಾಪಸಿಂಹ

'ಚಿತ್ತೂರು ಕೈವಶವಾಗುವವರೆಗೂ ಮೀಸೆಯನ್ನು ಹುರಿಮಾಡುವದಿಲ್ಲ, ರಾಜವೈಭವದಿಂದ ಮೆರೆಯುವದಿಲ್ಲ, ರಣಭೇರಿಯನ್ನು ಸೈನ್ಯದ ಮುಂದೆ ಹೊಡೆಯಿಸುವದಿಲ್ಲ' ಎಂದು ಪ್ರತಾಪನು ಪ್ರತಿಜ್ಞೆ ಮಾಡಿದನು. ಅರವಲೀಬೆಟ್ಟದಲ್ಲಿದ್ದ 'ಕುಂಭಲಗಡ' ದುರ್ಗವೇ ಇವನ ನೆಲೆಯಾಯಿತು. ನೆರೆಹೊರೆಯಲ್ಲಿ ಮುಸಲ್ಮಾನರು ಆಕ್ರಮಿಸಿದ ಪ್ರದೇಶಗಳಲ್ಲಿದ್ದ ರಾಜಪುತರನ್ನೆಲ್ಲ ಪ್ರತಾಪಸಿಂಹನು ತನ್ನೆಡೆಗೆ ಸೆಳೆದುಕೊಂಡನು. ಆಮೇಲೆ ಮೊಗಲರ ಶಿಬಿರಗಳ ಮೇಲೆ ಮಿಂಚಿನಂತೆ ದಾಳಿ, ಕೊಲೆ, ಸುಲಿಗೆಗಳು ನಡೆದವು. ಅರವಲಿಬೆಟ್ಟದ ಮಾರ್ಗವಾಗಿ ಸಾಗುತ್ತಿದ್ದ ವ್ಯಾಪಾರವೇ ಕಟ್ಟಾಯಿತು.


ಕುಂಭಲಗಡ

**ಹಳದೀಘಟ್ಟದ ಕಾಳಗ** (೧೫೭೬):— ಪ್ರತಾಪನ ಸೊಕ್ಕನ್ನು ಅಡಗಿಸಲು ಅಕಬರನು ಮಾನಸಿಂಗ, ಅಸಫಖಾನರನ್ನು ಬಲಿಷ್ಠ ಸೈ

ದೊಂದಿಗೆ ಕಳುಹಿದನು. ಹಳದೀಘಟ್ಟದ ಬಳಿ ಯುದ್ಧವಾಯಿತು. ಇದರಲ್ಲಿ ' ವೀರರು ಉರುಳಿದರು. ರಕ್ತದ ಹೊಳೆ ಹರಿಯಿತು. ' ರಣರಂಗದಲ್ಲಿ ಎಲ್ಲೆಲ್ಲೂ ಪ್ರತಾಪನ ಸಿಂಹಗರ್ಜನೆ. ಆದರೆ ಕೊನೆಗೆ ಪ್ರತಾಪನಿಗೆ ಏಳು ಗಾಯಗಳಾಗಲು ಅವನ ಶಕ್ತಿಯು ಕುಂದತೊಡಗಿತು. ಆಗ ' ಮನ್ನಾ ' ಎಂಬ ಒಬ್ಬ ರಾಜಪುತ ವೀರನು ಪ್ರತಾಪನ ಶ್ವೇತಛತ್ರವನ್ನು ತಾನು ಹಿಡಿದುಕೊಂಡು ಓಡ ತೊಡಗಿದನು. ಮೊಗಲರು ಅವನನ್ನು ಬೆನ್ನಟ್ಟಿ ಬೇಟೆಯಾಡಿ, ಪ್ರತಾಪನನ್ನು ಕೊಂದೆವೆಂದು ಹರ್ಷಪಟ್ಟರು!

ಇತ್ತ ಪ್ರತಾಪನು ರಣಾಂಗಣದಿಂದ ಪಾರಾದನು. ಚಿಕ್ಕ ಮಗುವನ್ನೂ ಹೆಂಡತಿಯನ್ನೂ ಕಟ್ಟಿಕೊಂಡು ಗುಹೆಯಿಂದ ಗುಹೆಗೆ, ಬೆಟ್ಟದಿಂದ ಬೆಟ್ಟಕ್ಕೆ, ಕಾಡಿನಿಂದ ಕಾಡಿಗೆ ಅಲೆದನು. ಈ ಕಷ್ಟಕಾಲದಲ್ಲಿ ಅವನನ್ನು ರಕ್ಷಿಸಿದ ಕೀರ್ತಿಯು ಭಿಲ್ಲರದು. ಆಮೇಲೆ 'ಭಾಮಾಸಾ' ಎಂಬ ಮಂತ್ರಿಯು ತನ್ನ ಸಕಲ ಐಶ್ವರ್ಯವನ್ನು ಪ್ರತಾಪನಿಗೆ ಕೊಟ್ಟನು. ಪ್ರತಾಪನು ಮತ್ತೆ ರಣಕಹಳೆಯನ್ನು ಊದಿದನು. ಒಂದೊಂದಾಗಿ ಎಲ್ಲ ಕೋಟೆಗಳನ್ನು ಗೆದ್ದುಕೊಂಡನು. ಚಿತ್ತೂರು ಮಾತ್ರ ಕೈವಶವಾಗಲಿಲ್ಲ. ಆ ಕೊರಗಿನಿಂದಲೇ ಅವನು ಪ್ರಾಣ ಬಿಟ್ಟನು.

**(೩) ಇತರ ಗೆಲವುಗಳು** (೧೫೮೧-೯೪) :– ೧೫೮೦ ರಲ್ಲಿ ಅಕರಬರನ ಮಲತಮ್ಮನಾದ ಹಕೀಮನು ಕಾಬೂಲದಲ್ಲಿ ದಂಗೆಯೆದ್ದನು. ಆ ದಂಗೆ ಯನ್ನು ಅಡಗಿಸಿ ಅಕಬರನು ಕಾಬೂಲವನ್ನು ತನ್ನ ರಾಜ್ಯಕ್ಕೆ ಸೇರಿಸಿ ಕೊಂಡನು. ಆ ಮೇಲೆ ಕಾಶ್ಮೀರ, ಸಿಂಧ, ಬಲೂಚಿಸ್ಥಾನ, ಕಂದಹಾರಗಳನ್ನು ಗೆದ್ದುಕೊಂಡನು. ಪೂರ್ವ ದಿಕ್ಕಿನಲ್ಲಿ ಓರಿಸಾ ಪ್ರಾಂತವೂ ಅಕಬರನ ಸಾಮ್ರಾಜ್ಯಕ್ಕೆ ಸೇರಿತು.

**(೨) ದಕ್ಷಿಣಾಪಥದ ದಿಗ್ವಿಜಯ** (೧೫೯೨-೧೬೦೦) :—

**ಅಹಮದನಗರದ ಕೈವಶ:**— ೧೫೯೪ ರಲ್ಲಿ ಅಹಮದನಗರದ ನಿಜಾಮಶಾಹನು ಮಡಿದನು. ಅಲ್ಲಿ ಪಟ್ಟಕ್ಕಾಗಿ ಐವರಲ್ಲಿ ಜಗಳಗಳೆದ್ದವು. ಅವರಲ್ಲೊಬ್ಬನು ಅಕಬರನ ಸಹಾಯವನ್ನು ಕೋರಿದನು. ಸಹಾಯ ಸಲ್ಲಿಸುವದರ ಬದಲು ಅಹಮದನಗರದ ರಾಜ್ಯವನ್ನು ತಾನೇ ವಶಪಡಿಕೊಳ್ಳಲು ಅಕಬರನು ತನ್ನ ಮಗನಾದ ಮುರಾದನನ್ನು ಕಳುಹಿದನು. ಆಗ ಅಹಮದ ನಗರವನ್ನು ರಕ್ಷಿಸಿದ ವೀರೆ **ಚಾಂದಬೀಬಿ.** ಇವಳು ನಿಜಾಮಶಾಹನ

ಮಗಳು, ವಿಜಾಪುರದ ಅಲೀ ಆದಿಲಶಾಹನ ವಿಧವೆ. ಅಹಮದನಗರದ ರಕ್ಷಣೆಗಾಗಿ ತಾನೇ ಖಡ್ಗವನ್ನು ಹಿಡಿದಳು. ವಿಜಾಪುರ ಗೋವಳ ಕೊಂಡಗಳಿಂದ ಅವಳಿಗೆ ಸೈನ್ಯಸಹಾಯವೂ ಬಂದಿತು. ಇದರಿಂದ ಭಯ ಭೀತನಾದ ಮುರಾದನು ಚಾಂದಬೀಬಿಯೊಡನೆ ಸಂಧಿಯನ್ನು ಮಾಡಿ ಕೊಂಡನು. ವರ್ಹಾಡ ರಾಜ್ಯವು ಮಾತ್ರ ಅವನಿಗೆ ದೊರೆಯಿತು. ಇದರಿಂದಲೇ ಅವನು ತೃಪ್ತ ನಾಗಿ ಂದಿರುಗಿದನು. (೧೫೯೬)



ಚಾಂದಬೀಬಿ

ಇದು ಅಕಬರನ ಮನಸ್ಸಿಗೆ ಬರಲಿಲ್ಲ. ೧೬೦೦ ರಲ್ಲಿ ತಾನೇ ಅಹಮದನಗರದ ಮೇಲೆ ಏರಿ ಹೋದನು. ಇಷ್ಟರಲ್ಲಿ ಚಾಂದ ಬೀಬಿಯನ್ನು ಅವಳ ಸರದಾರರೇ ಕೊಲೆಮಾಡಿದ್ದರು. ಅಹಮದ ನಗರ, ವಿಜಾಪುರ, ಗೋವಳ ಕೊಂಡಗಳ ಸಂಯುಕ್ತ ಸೈನ್ಯವು ಅಕಬರನನ್ನು ಎದುರಿಸಿ ಸೋತು ಹಿಮ್ಮೆಟ್ಟಿತು. ಅಹಮದನಗರವು ಅಕಬರನ ವಶವಾಯಿತು. ಗೋವಳಕೊಂಡವು ಅಕಬರನ ಸಾರ್ವಭೌಮ ತ್ವವನ್ನು ಒಪ್ಪಿಕೊಂಡಿತು. ವಿಜಾಪುರದ ಸುಲ್ತಾನನು ತನ್ನ ಮಗಳನ್ನು ಅಕಬರನ ಮೂರನೆಯ ಮಗನಾದ ದಾನಿಯಾಲನಿಗೆ ಮದುವೆ ಮಾಡಿಕೊಟ್ಟನು.

**ಅಸೀರಗಡದ ಕೈವಶ** (೧೬೦೧): – ಅಸೀರಗಡವು ಖಾನದೇಶದಲ್ಲಿಯ ಭದ್ರವಾದ ಕೋಟೆ. ಇದನ್ನೂ ಅಕಬರನು ವಶಪಡಿಸಿ ಕೊಂಡನು.



ಅಲೀ ಆದಿಲಶಾಹ

**ಸಾಮ್ರಾಜ್ಯ ವಿಸ್ತಾರ :—** ಈ ದಿಗ್ವಿಜಯಗಳ ಪರಿಣಾಮವಾಗಿ ಅಕಬರನ ಸಾಮ್ರಾಜ್ಯವು ಕಂದಹಾರದಿಂದ ಬಂಗಾಲ ಉಪಸಾಗರದವರೆಗೂ ಕಾಶ್ಮೀರದಿಂದ ಗೋದಾವರಿಯ ವರೆಗೂ ಹಬ್ಬಿತು.

(ಎಳ ನೆಯ ಪುಟದ ನಕಾಶೆ ನೋಡಿರಿ)

## ಸಾಮ್ರಾಜ್ಯದ ಸುವ್ಯವಸ್ಥೆ

ಅಕಬರನು ನಿರಂಕುಶ ಪ್ರಭು. ಆದರೂ ಅವನು ವಿವೇಕಿ, ನ್ಯಾಯ ಪರನು, ಪ್ರಜಾವತ್ಸಲನು. ಮತ್ತು ಮೇಲಿಂದ ಮೇಲೆ ಅವನು ಮಂತ್ರಿಗಳ ಸಲಹೆಯನ್ನು ಪಡೆಯುತ್ತಿದ್ದನು.

**ಮನಸಬದಾರರು :—** ಇವರು ಅಕಬರನ ರಾಜ್ಯದಲ್ಲಿ ಉನ್ನತಾಧಿ ಕಾರಿಗಳು. ಇವರಲ್ಲಿ ತಮ್ಮದೇ ಆದ ಅಶ್ವಬಲವಿತ್ತು. ಮನಸಬದಾರರ ದರ್ಜೆಯು ಅವರಲ್ಲಿಯ ಅಶ್ವಬಲದ ಸಂಖ್ಯೆಯನ್ನು ಅವಲಂಬಿಸಿತ್ತು. ೧೦ ಕುದುರೆಗಳ ಮನಸಬದಾರರಿಂದ ೧೦ ಸಾವಿರ ಕುದುರೆಗಳ ಮನಬಸದಾರರಿದ್ದರು. ಅವರು ಬಾದಶಾಹನಿಗೆ ಯುದ್ಧದಲ್ಲಿ ಸೇವೆ ಸಲ್ಲಿಸುತ್ತಿದ್ದರು. ಮನಸಬದಾರರಿಗೆಲ್ಲ ಜಾಗೀರಿನ ಬದಲು ಸಂಬಳವು ದೊರೆಯುತ್ತಿತ್ತು.

**ಸೈನ್ಯ :—** ಅಕಬರನ ಸೈನ್ಯದ ಬಹು ಭಾಗವು ಮನಸಬದಾರರ ಅಶ್ವ ಬಲಗಳಿಂದ ಕೂಡಿತ್ತು. ಅವನ ಸ್ವಂತ ಅಶ್ವಬಲವು ೨೫ ಸಾವಿರ ಮಾತ್ರ. ಕಾಲ್ಬಲಕ್ಕೆ ಅಷ್ಟೊಂದು ಮಹತ್ವವಿರಲಿಲ್ಲ. ದೊಡ್ಡ ದೊಡ್ಡ ತೋಫುಗಳನ್ನು ಎಳೆಯಲು ಆನೆಗಳನ್ನು ಉಪಯೋಗಿಸುತ್ತಿದ್ದರು. ಅಕಬರನ ನೌಕಾಬಲವು ಬಲಿಷ್ಠವಾಗಿರಲಿಲ್ಲ.

**ಸುಭೆಗಳು :—** ಅಕಬರನು ತನ್ನ ಸಾಮ್ರಾಜ್ಯವನ್ನು ೧೫ **ಸುಭೆ** (ಪ್ರಾಂತ) ಗಳನ್ನಾಗಿ ಭಾಗ ಮಾಡಿದನು. ಪ್ರತಿಯೊಂದು ಸುಭೆಗೂ **ಸುಭೇದಾರ**ನೆಂಬ ಒಬ್ಬ ಅಧಿಕಾರಿಯಿದ್ದನು. ಅವನೇ ಅಲ್ಲಿಯ ಆಡಳಿತದ ಮುಖ್ಯಾಧಿಕಾರಿ. ಸುಭೆಯಲ್ಲಿ **ಸರಕಾರ** (ಜಿಲ್ಹೆ) ಗಳೆಂದೂ, ಸರಕಾರದಲ್ಲಿ **ಪರಗಣೆ** (ತಾಲೂಕು) ಗಳೆಂದೂ ವಿಭಾಗಗಳಿದ್ದವು. **ಕೊತವಾಲ**ನೆಂಬ ಅಧಿಕಾರಿಯು ನಗರ ರಕ್ಷಕನು. ಅವನಿಗೆ ಅನೇಕ ಹೊಣೆಗಾರಿಕೆಗಳನ್ನು ಒಪ್ಪಿಸಲಾಗಿತ್ತು.

**ನ್ಯಾಯದಾನ :—** ಬಾದಶಾಹನೇ ಮುಖ್ಯ ನ್ಯಾಯಾಧೀಶನು. ಅವನು ಜಾತಿಮತಗಳನ್ನು ಲೆಕ್ಕಿಸದೆ ತೀರ್ಪು ಕೊಡುತ್ತಿದ್ದನು. ಆ ಕಾಲದಲ್ಲಿ

ಬರೆದಿಟ್ಟ ಕಾನೂನುಗಳಿರಲಿಲ್ಲ. ನ್ಯಾಯದಾನದಲ್ಲಿ ಕುರಾನದ ವಾಕ್ಯಗಳಿಗೂ ಕಾಜಿಗಳ ಸಲಹೆಗೂ ಗೌರವವಿತ್ತು. ಕಾಜಿಗಳು ಹಿಂದುಗಳ ರೀತಿನೀತಿಗಳನ್ನು ಬಲ್ಲವರಾಗಿದ್ದರು.

**ಕಂದಾಯ ನೀತಿ :—** ಕಂದಾಯ ನೀತಿಯನ್ನು ಕ್ರಮಪಡಿಸಿದ ಕೀರ್ತಿಯು ತೋಡರಮಲ್ಲನೆಂಬ ಮಂತ್ರಿಯದು. ಇವನು ಶೇರಶಾಹನ ಕಂದಾಯ ನೀತಿಯನ್ನು ಪರಿಪೂರ್ಣಗೊಳಿಸಿದನು. ಭೂಮಿಯ ವಿಸ್ತೀರ್ಣ, ಯೋಗ್ಯತೆ, ಬೆಳೆ ಇವುಗಳ ಮೇಲಿಂದ ಕಂದಾಯವನ್ನು ಗೊತ್ತುಪಡಿಸಿದನು. ಬೆಳೆಯ ಮೂರನೆಯ ಭಾಗವು ಕಂದಾಯವಾಯಿತು. ದ್ರವ್ಯ ಇಲ್ಲವೇ ಧಾನ್ಯ ರೂಪದಲ್ಲಿ ಕಂದಾಯವನ್ನು ಕೊಡಬಹುದಾಗಿತ್ತು.

**ಪ್ರಜಾವಾತ್ಸಲ್ಯ :—** ಅಕಬರನು ತನ್ನ ಪ್ರಜೆಗಳನ್ನು ಪ್ರೀತಿ ವಿಶ್ವಾಸ ಗಳಿಂದ ಕಾಣುತ್ತಿದ್ದನು. ಯುದ್ಧದಲ್ಲಿ ಸೋತ ವೈರಿಗಳನ್ನು ಅವಮಾನ ಗೊಳಿಸುತ್ತಿರಲಿಲ್ಲ. ರಾಜ್ಯಕಾರಭಾರದಲ್ಲಿ ಹಿಂದುಗಳಿಗೆ ದೊಡ್ಡ ದೊಡ್ಡ ಹುದ್ದೆಗಳನ್ನು ಕೊಟ್ಟು ಗೌರವಿಸಿದನು. ಹಿಂದು ಯಾತ್ರಿಕರು ಕೊಡ ಬೇಕಾಗಿದ್ದ ಕರವನ್ನೂ, ಜಿಜಿಯಾ ಎಂಬ ತಲೆಗಂದಾಯವನ್ನೂ ರದ್ದು ಗೊಳಿಸಿದನು. ಶಿಶುಹತ್ಯೆ, ಒತ್ತಾಯದ ಸಹಗಮನ, ಪಶುಬಲಿ, ಗೋವಧೆಗಳನ್ನು ನಿಲ್ಲಿಸಿದನು. ಮದ್ಯಪಾನ, ಬಾಲವಿವಾಹಗಳನ್ನು ನಿಷೇಧಿಸಿದನು. ವಿಧವಾ ವಿವಾಹವನ್ನು ಪ್ರೋತ್ಸಾಹಿಸಿದನು. ಅಕಬರನ ರಾಜ್ಯದಲ್ಲಿ ಬಲಾತ್ಕಾರದ ಧರ್ಮಾಂತರಕ್ಕೆ ಅವಕಾಶವಿರಲಿಲ್ಲ.

**ಧರ್ಮ ಸಹಿಷ್ಣುತೆ :—** ಧರ್ಮಸಹಿಷ್ಣುತೆಯು ಅಕಬರನಲ್ಲಿ ಹುಟ್ಟುಗುಣ. ಮೊದಲಿನಿಂದ ಅವನಿಗೆ ಧಾರ್ಮಿಕ ಚರ್ಚೆಗಳಲ್ಲಿ ವಿಶೇಷ ಆಸಕ್ತಿ ಇದ್ದಿತು. ಬಾದಶಾಹನಾದಮೇಲೆ ಇದಕ್ಕಾಗಿಯೇ ಫತೆಪುರ (ಸಿಕ್ರಿ)ದಲ್ಲಿ **'ಇಬಾದತ ಖಾನಾ'** ಎಂಬ ಮಂದಿರವನ್ನು ಸ್ಥಾಪಿಸಿದನು. ಅಲ್ಲಿಯ ಧಾರ್ಮಿಕ ಚರ್ಚೆಗಳಲ್ಲಿ ಮುಸಲ್ಮಾನರೂ ಫಾರ್ಸಿಗಳೂ ಕ್ರಿಸ್ತರೂ ಹಿಂದುಗಳೂ ಜೈನರೂ ಭಾಗವಹಿಸುತ್ತಿದ್ದರು. ಇದರಿಂದ ಅಕಬರನು ಎಲ್ಲ ಧರ್ಮಗಳಲ್ಲಿಯೂ ಸತ್ಯಾಂಶಗಳನ್ನು ಕಂಡನು. ಫಾರ್ಸಿ ಧರ್ಮದಿಂದ ಅಕಬರನು ಸೂರ್ಯಾರಾಧನೆ ಯನ್ನು ಕಲಿತನು. ಜೈನ ಗುರುವಿನ ಉಪದೇಶದಿಂದ ಅಹಿಂಸೆಯ ಮಹತ್ವ ವನ್ನು ಅರಿತನು. ಕೆಲವು ಸಲ ಹಿಂದುಗಳಂತೆ ವೇಷ ಭೂಷಣಗಳನ್ನು ಧರಿಸುತ್ತಿದ್ದನು. ತನ್ನ ಹಿಂದು ಹೆಂಡಂದಿರೊಡನೆ ಹೋಮಹವನಗಳಲ್ಲಿ

ಭಾಗವಹಿಸುತ್ತಿದ್ದನು. ಗಡ್ಡವನ್ನು ತೆಗೆಯಿಸಿದನು. ಮಾಂಸ, ಮದ್ಯ, ಬೆಳ್ಳುಳ್ಳಿ, ಉಳ್ಳೇಗಡ್ಡೆಗಳನ್ನು ತ್ಯಜಿಸಿದನು. ಶಿವರಾತ್ರಿಯನ್ನು ಬಹು ಭಕ್ತಿಯಿಂದ ಆಚರಿಸಹತ್ತಿದನು.



ಅಕಬರ

**ದೀನ್–ಇ–ಇಲಾಹಿ:—** ಇದು ಅಕಬರನು ಸ್ಥಾಪಿಸಿದ ಹೊಸ ಧರ್ಮ. "ದೇವರು ಒಬ್ಬನೇ. ಅವನೇ ವಿಶ್ವದ ಒಡೆಯನು. ಆ ವಿಶ್ವದೊಡೆಯನ ಪ್ರತಿನಿಧಿಯೇ ರಾಜನು" ಎಂಬ ಮುಖ್ಯ ಮೂಲ ತತ್ತ್ವಗಳು ಇದರಲ್ಲಿ ಅಡಕವಾಗಿದ್ದವು. ಆದುದರಿಂದ ಇದನ್ನು **ಏಕೇಶ್ವರೀ ಧರ್ಮ**ವೆಂದೂ **ವಿಶ್ವಧರ್ಮ**ವೆಂದೂ ಕರೆಯಬಹುದು. ಅಕಬರನು ಯಾರ ಮೇಲೂ ಈ ಹೊಸ ಧರ್ಮವನ್ನು ಒತ್ತಾಯಪಡಿಸಲಿಲ್ಲ.

## ಸಾಹಿತ್ಯ ಕಲೆಗಳಿಗೆ ಆಶ್ರಯ.

ಅಕಬರನು ಓದುಬರಹಗಳನ್ನು ಕಲಿತವನಲ್ಲ. ಆದರೂ ಕೂಡ ಸುಸಂಸ್ಕೃತನು, ವಿದ್ಯಾಭಿಮಾನಿಯು, ಕಲಾಪೋಷಕನು. ಸಾಹಿತ್ಯ, ಸಂಗೀತ, ಚಿತ್ರಕಲೆ, ವಾಸ್ತುಶಿಲ್ಪಗಳಲ್ಲಿ ಅಕಬರನಿಗೆ ಅಭಿರುಚಿ. ಈತನ ಗ್ರಂಥಾಲಯದಲ್ಲಿ ೨೪,೦೦೦ ಗ್ರಂಥಗಳಿದ್ದವು. ಇವನ ಆಶ್ರಯದಲ್ಲಿ ಸಂಸ್ಕೃತ, ಫಾರ್ಸೀ, ಹಿಂದೀ ಕವಿಗಳಿದ್ದರು.

**ಅಬುಲ್ ಫೈಜಿಯು** ಅಕಬರನ ಆಸ್ಥಾನ ಕವಿ. ಇವನು ಭಗವದ್ಗೀತೆಯನ್ನು ಫಾರ್ಸೀ ಭಾಷೆಗೆ ತರ್ಜುಮೆಮಾಡಿದನು. ಇವನ ತಮ್ಮನಾದ **ಅಬುಲ ಫಜಲ**ನು ಅಕಬರನ ಜೀವದ ಗೆಳೆಯನು. 'ಅಕಬರನಾಮಾ' ಮತ್ತು 'ಆಯಿನ್–ಇ–ಅಕ್ಬರೀ' ಎಂಬ ಉತ್ತಮ ಗ್ರಂಥಗಳನ್ನು ಫಜಲನು ಬರೆದನು. ಇವುಗಳಿಂದ ಅಕಬರನ ಜೀವನ ಚರಿತ್ರೆ, ರಾಜ್ಯಭಾರ ಕ್ರಮ ಇವನ್ನು ತಿಳಿದು

ಕೊಳ್ಳಬಹುದು. **ಬಡಾವುನಿ** ಎಂಬ ಬೇರೊಬ್ಬ ವಿದ್ವಾಂಸನೂ ಅಕಬರನ ಚರಿತ್ರೆಯನ್ನು ಬರೆದನು. **ತಾನ ಸೇನನು** ಶ್ರೇಷ್ಠ ಸಂಗೀತಗಾರ. **ಬೀರ ಬಲ್ಲನೆಂಬ** ಬ್ರಾಹ್ಮಣನು ಚತುರೋಕ್ತಿ, ಹಾಸ್ಯಗಳಿಗಾಗಿ ಹೆಸರಾದವ **ಮುಲ್ಲಾ–ದೋ–ಪ್ಯಾಜಾ** ಎಂಬವನೂ ಹಾಸ್ಯ ಪ್ರಿಯನು, ನಿಷ್ಠುರವಾದಿ. ಇವನಿಗೂ ಬೀರಬಲ್ಲನಿಗೂ ಆಗಾಗ್ಗೆ ಆಗುತ್ತಿದ್ದ ವಾಗ್ಯುದ್ಧಗಳನ್ನು ಕೇಳಲು ಅಕಬರನಿಗೆ ತುಂಬ ಇಷ್ಟ. **ಹಕೀಮ ಹುಮಾಮ** ನೆಂಬವನು ರಾಜವೈದ್ಯನು. **ರಾಜಾ ಮಾನಸಿಂಗನು** ಪ್ರಸಿದ್ಧ ಸೇನಾಪತಿ. **ರಾಜಾ ತೋಡರಮಲ್ಲನು** ಮತ್ತೊಬ್ಬ ಪ್ರಸಿದ್ಧ ಸೇನಾಪತಿ, ಹಾಗೂ ಕಂದಾಯ ನೀತಿ ನಿಪುಣನು.


ಅಬುಲ್ ಫಜಲ

ಇವರು **ಅಕಬರನ ಆಸ್ಥಾನದ ನವರತ್ನ**ಗಳೆಂದು ಹೆಸರಾಗಿರುವರು.

ಈ ಕಾಲದಲ್ಲಿಯೇ **ತುಳಸೀದಾಸ**ನೆಂಬ ಭಗವದ್ಭಕ್ತನು ರಾಮಾಯಣವನ್ನು ಹಿಂದೀ ಭಾಷೆಯಲ್ಲಿ ಬರೆದನು. ಆತನು ರಾಜಾ ತೋಡರಮಲ್ಲನ ಪರಮ ಸ್ನೇಹಿತನಿದ್ದನು.

**ಅಕಬರನ ಮರಣ** (೧೬೦೫) :– (೧೬೦೪ ರಲ್ಲಿ) ಸಲೀಮನು ದಂಗೆಯೆದ್ದು ಅಬುಲ ಫಜಲನ ಕೊಲೆಮಾಡಿಸಿದನು. ಇದರಿಂದ ಅಕಬರನಿಗೆ ಸಿಡಿಲು ಬಡಿದಂತಾಯಿತು. ಹಗಲಿರುಳು ಅವನು ಕೊರಗ ತೊಡಗಿದನು. ತಂದೆಯು ಮರಣ ಶಯ್ಯೆಯಲ್ಲಿದ್ದಾಗ ಸಲೀಮನು ಬಿಕ್ಕಿ ಬಿಕ್ಕಿ ಅಳುತ್ತ ಅವನ ಕ್ಷಮೆಬೇಡಿದನು. ಪುತ್ರ–ವಾತ್ಸಲ್ಯದಿಂದ ಅಕಬರನು ಮಗನನ್ನು ಕ್ಷಮಿಸಿದನು.


ತೋಡರ ಮಲ್ಲನು

## ಅಭ್ಯಸನಗಳು.

(೧) ೧೦೭ ನೆಯ ಪುಟದಲ್ಲಿಯ ಚಿತ್ರವನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಕೆಳಗಿನ ಪ್ರಶ್ನೆಗಳಿಗೆ ಉತ್ತರಕೊಡಿರಿ:— (ಅ) ಇದು ಯಾರ ಚಿತ್ರ? (ಆ) ಇದರಿಂದ ಯಾವ ಸಂಗತಿಯನ್ನು ಚಿತ್ರಿಸಲಾಗಿದೆ? (ಇ) ಚಿತ್ರದ ವಿವರಗಳನ್ನು ಹೇಳಿರಿ.

(೨) ಅಕಬರನ ಪ್ರಜಾವಾತ್ಸಲ್ಯದ ಉದಾಹರಣೆಗಳನ್ನು ಕೊಡಿರಿ.

(೩) ಅಕಬರನ ಆಸ್ಥಾನದ 'ನವರತ್ನ'ಗಳ ಹೆಸರು ಬರೆಯಿರಿ.

(೪) ಅಕಬರನಿಗೆ ಬೈರಾಮಖಾನನು ಕಾಳಾನೂರಲ್ಲಿ ಪಟ್ಟಗಟ್ಟಿದನು. ಈ ಸಂಗತಿಯು ಚಿತ್ರವನ್ನು ರೇಖಿಸಿರಿ. (ಚಿತ್ರ ರೇಖನೆಗಾಗಿ)

## ೯ನೆಯ ಪ್ರಕರಣ

# ಜಹಾಂಗೀರ ಮತ್ತು ಶಾಹಜಹಾನ

(೧೬೦೫–೧೬೫೮)

### ಜಹಾಂಗೀರ (೧೬೦೫–೧೬೨೭)

**ಪೂರ್ವಚರಿತ್ರೆ:—** ಜಹಾಂಗೀರನ ಮೊದಲಿನ ಹೆಸರು ಸಲೀಮು. ಇವನ ತಾಯಿಯು ಅಕಬರನ ಹೆಂಡತಿಯಾದ ಜಯರಾಣಿ. ಇವನ ಮೇಲೆ ಅಕಬರನಿಗೆ ಬಲು ಪ್ರೀತಿ. ಚಿಕ್ಕಂದಿನಲ್ಲಿ ಅಕಬರನು ಇವನಿಗೆ ಘನವಿದ್ವಾಂಸನಾದ ಅಬ್ದುಲ್‌ರಹಿಮಾನ (ಬೈರಾಮ ಖಾನನ ಮಗ) ನಿಂದ ಒಳ್ಳೆಯ ಶಿಕ್ಷಣ ಕೊಡಿಸಿದನು. ಸಲೀಮನು ತುರ್ಕೀ, ಹಿಂದೀ ಭಾಷೆಗಳೆರಡನ್ನೂ ಕಲಿತನು. ಕುರಾನದಲ್ಲಿ ಭಕ್ತಿಯುಳ್ಳವನೂ ಆದನು. ಆದರೆ ಸಲೀಮನು ಬೆಳೆದಂತೆ ಅವನ ಭೋಗವಿಲಾಸವೂ ರಾಜ್ಯಲಾಲಸೆಯೂ ಬೆಳೆದವು. ತಂದೆಯ ವಿರುದ್ಧ ಅವನ ದಂಗೆ, ಅಬುಲಫಜಲನ ಕೊಲೆ ಇವುಗಳನ್ನು ಕುರಿತು ೮ ನೆಯ ಪ್ರಕರಣದಲ್ಲಿ ಹೇಳಲಾಗಿದೆ.



ಜಹಾಂಗೀರ

**ಅಹಮದನಗರ** (೧೬೧೬) :— ಇದು ಅಕಬರನ ಅಧೀನದಲ್ಲಿದ್ದ ನಿಜಾಮಶಾಹೀ ರಾಜ್ಯ. ಆದರೆ ಅದು ಈಗ ಕಳೆದುಹೋದ ಸ್ವಾತಂತ್ರ್ಯವನ್ನು ಮರಳಿ ಗಳಿಸಲು ಪ್ರಯತ್ನಿಸಿತು. ಅಲ್ಲಿಯ **ಮಲಿಕ ಅಂಬರ**ನೆಂಬ ಪ್ರಸಿದ್ಧ ಮಂತ್ರಿಯ ಪ್ರಯತ್ನದಿಂದ, ಅಕಬರನು ಗೆದ್ದ ಬಹುಭಾಗವು ಮತ್ತೆ ನಿಜಾಮಶಾಹಿಯ ಕೈಸೇರಿತು. ಅವನನ್ನು ದಂಡಿಸಲು ಜಹಾಂಗೀರನು ಖುರ್ರಮನನ್ನೇ ಕಳುಹಿದನು. ಮೇವಾಡದ ಕರ್ಣಸಿಂಹನೂ ಅವನ ನೆರವಿಗೆ ಬಂದನು. ಇತ್ತ ಮಲಿಕ ಅಂಬರನಿಗೆ ಶಹಾಜಿ (ಶಿವಾಜಿಯ ತಂದೆ) ಯು ತನ್ನ ಮರಾಠಾ ಸೈನಿಕರೊಂದಿಗೆ ನೆರವಾದನು. ಆದರೆ ಅಹಮದನಗರವು ಮತ್ತೆ ಮೊಗಲರ ವಶವಾಯಿತು. ಅಪಾರ ಸಂಪತ್ತಿನೊಡನೆ ಖುರ್ರಮನು ಹಿಂತಿರುಗಿ ಬಂದನು. ಜಹಾಂಗೀರನ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು. ಅವನು ಖುರ್ರಮನಿಗೆ 'ಶಾಹಜಹಾನ' (ಜಗತ್ತಿನ ದೊರೆ) ಎಂಬ ಬಿರುದು ಕೊಟ್ಟನು.



ಮಲಿಕ ಅಂಬರ

**ಜಹಾಂಗೀರನ ಆಳಿಕೆಯ ಕೊನೆಯ ವರ್ಷಗಳು** :— ಜಹಾಂಗೀರನ ಆಳಿಕೆಯ ಕೊನೆಯ ನಾಲ್ಕೈದು ವರ್ಷಗಳೆಂದರೆ, ಮುಂದಿನ ಪಟ್ಟಕ್ಕಾಗಿ ಅವನ ಮಕ್ಕಳಲ್ಲಿ ಕುತಂತ್ರಗಳು ನಡೆದ ಕಾಲ. ಒಬ್ಬರನ್ನೊಬ್ಬರು ವಂಚಿಸುವ ರಹಸ್ಯ ಪ್ರಯತ್ನಗಳು ನಡೆದ ಕಾಲ. ಶಾಹಜಹಾನನಿಗೆ ಮಾವನಾದ ಅಸಫಖಾನನ ಬೆಂಬಲವಾದರೆ, ಶಹರ್ಯಾರನಿಗೆ ರಾಣಿಯಾದ ನೂರಜಹಾನಳ ಬೆಂಬಲ! ಶಾಹಜಹಾನನ ಪ್ರಯತ್ನದ ಕೊನೆಯ ಭಾಗದಲ್ಲಿ ದರಬಾರದ ಮಹಾಬತಖಾನನೆಂಬ ಪ್ರಬಲಸರದಾರನೂ ಅವನನ್ನು ಕೂಡಿಕೊಂಡನು. ಇಷ್ಟರಲ್ಲಿ

ಜಹಾಂಗೀರನು ಬೇನೆ ಬಿದ್ದನು. ಹವೆಯು ಬದಲಾವಣೆಗಾಗಿ ರಾಜ ದಂಪತಿಗಳು ಕಾಶ್ಮೀರಕ್ಕೆ ತೆರಳಿದರು. ಆದರೆ ಅಲ್ಲಿ ಅವನ ಬೇನೆಯು ಬಲಿಯಿತು. ಅವರು ಹಿಂದಿರುಗಿ ಬರುವಾಗ ಜಹಾಂಗೀರನು ಹಾದಿಯಲ್ಲಿಯೇ ಮರಣಹೊಂದಿದನು. ಕೂಡಲೆ ಅಸಫಖಾನನು ದಕ್ಷಿಣದಲ್ಲಿದ್ದ ಶಾಹ ಜಹಾನನಿಗೆ ಕರೆಕಳುಹಿದನು. ಅಷ್ಟರಲ್ಲಿ ಶಹರ್‍ಯಾರನು ಲಾಹೋರದಲ್ಲಿ ತಾನೇ ಬಾದಶಾಹನೆಂದು ಸಾರಿಕೊಂಡನು. ಅಸಫಖಾನನು ಅವನನ್ನು ಸೋಲಿಸಿ ಸೆರೆಹಿಡಿದು ಕೊಂದುಹಾಕಿದನು. ಶಾಹಜಹಾನನು ಅತಿ ವೈಭವದಿಂದ ಆಗ್ರಾದಲ್ಲಿ ಸಿಂಹಾಸನವೇರಿದನು (೧೬೨೭). ನೂರಜಹಾನಳು ಮುಂದೆ ೧೭ ವರ್ಷ ಜೀವಿಸಿ ತೀರಿಕೊಂಡಳು.

**ಇಂಗ್ಲಿಷರು** :— ಕ್ರಿ. ಶ. ೧೬೦೮ ರಲ್ಲಿ **ಹಾಕಿನ್ಸ** ಎಂಬ ಇಂಗ್ಲಿಷ ನಾವಿಕನು ನಮ್ಮ ದೇಶಕ್ಕೆ ಬಂದನು. ಸುರತದಲ್ಲಿ ಇಂಗ್ಲಿಷ ವರ್ತಕರಿಗೆ ವಖಾರ ವನ್ನು ಕಟ್ಟಿಕೊಳ್ಳಲು ಜಹಾಂಗೀರನ ಅಪ್ಪಣೆಯನ್ನು ದೊರಕಿಸುವದೇ ಇವನ ಉದ್ದೇಶವಾಗಿತ್ತು. ಆದರೆ ಆಸ್ಥಾನದಲ್ಲಿದ್ದ ಪೋರ್ತುಗೀಜರ ಕುತಂತ್ರಗಳಿಂದ ಅದು ಸಾಧಿಸಲಿಲ್ಲ. ಮುಂದೆ ೩-೪ ವರ್ಷಗಳಲ್ಲಿಯೇ ಪೋರ್ತುಗೀಜರು ಬಾದ ಶಾಹನ ಕೋಪಕ್ಕೆ ಗುರಿಯಾದರು. ಅವರು ಬಲಾತ್ಕಾರದಿಂದ ಮೊಗಲರ ಹಡಗುಗಳನ್ನು ಹಿಡಿದುಕೊಂಡುದೇ ಇದಕ್ಕೆ ಕಾರಣವಾಯಿತು. ಆಗ ಇಂಗ್ಲಿಷರು ಬಾದಶಾಹನ ನೆರವಿಗೆ ಬಂದರು. ಪೋರ್ತುಗೀಜರ ನೌಕೆಗೆ ಸೋಲುಂಟಾಯಿತು. ಆಗ ಬಾದಶಾಹನು ಇಂಗ್ಲಿಷರಿಗೆ ಸುರತದಲ್ಲಿ ವಖಾರವನ್ನು ಕಟ್ಟಿಕೊಳ್ಳಲು ಅಪ್ಪಣೆ ಕೊಟ್ಟನು. ಆಮೇಲೆ **ಸರ್ ಥಾಮಸ ರೋ** ಎಂಬ ಇಂಗ್ಲಿಷ ರಾಯಭಾರಿಯು ಜಹಾಂಗೀರನ ದರಬಾರಕ್ಕೆ ಬಂದನು (೧೬೧೫). ಅವನು ಎಷ್ಟೇ ಪ್ರಯತ್ನಪಟ್ಟರೂ ಇಂಗ್ಲಿಷರಿಗೆ ಹೆಚ್ಚಿನ ಸವ ಲತ್ತುಗಳು ದೊರೆಯಲಿಲ್ಲ.

**ಶಾಹಜಹಾನ** (೧೬೨೭—೧೬೫೮) :—

ಕ್ರಿ. ಶ. ೧೬೨೭ ರಲ್ಲಿ ಶಾಹಜಹಾನನು ಬಾದಶಾಹನಾದನು. ಅವನು ವೈಭವಶಾಲಿ. ಸಂಗೀತ ಶಿಲ್ಪಕಲೆಗಳಲ್ಲಿ ಅಭಿರುಚಿಯುಳ್ಳವನು. ಧರ್ಮದ ವಿಷಯದಲ್ಲಿ ಉದಾರಮತವಾದಿಯು. ಹಿಂದು ಮತ್ತು ಮುಸಲ್ಮಾನ ವಿದ್ವಾಂಸರಿಗೆ ಅವನು ಆಶ್ರಯ ಕೊಟ್ಟು ಪ್ರೋತ್ಸಾಹಿಸಿದನು. ಅವನ ಕಾಲವು

ಬಹುಮಟ್ಟಿಗೆ ಶಾಂತತೆಯ ಕಾಲ. ಅದು ಇತಿಹಾಸದಲ್ಲಿ 'ಚಿನ್ನದ ಕಾಲ' ವೆಂದು ಹೆಸರಾಗಿದೆ. [ಮೊಗಲ-ವೈಭವ-ಯುಗದ ವರ್ಣನೆಯನ್ನು ಜಹಾಂಗೀರ ಶಾಹಜಹಾನರ ಸಮಕಾಲೀನನಾದ ಬಿಹಾರಿಲಾಲನೆಂಬ ಹಿಂದೀ ಕವಿಯ ಕಾವ್ಯದಲ್ಲಿ ಕಾಣಬಹುದು. (೧೬೦೩–೧೬೬೪)]



ಶಾಹಜಹಾನ

**ವಿಜಯಗಳು :—** ಶಾಹಜಹಾನನು ಪಟ್ಟವೇರಿದ ಮರುವರ್ಷವೇ ದಕ್ಷಿಣದ ಪ್ರಾಂತಾಧಿಕಾರಿಯಾಗಿದ್ದ ಖಾನ ಜಹಾನ ಲೋದಿಯು ದಂಗೆಯೆದ್ದನು. ಅವನಿಗೆ ಅಹಮದನಗರದ ಬೆಂಬಲವೂ ಇದ್ದಿತು. ಮೂರು ವರ್ಷ ಕಾಲ ಅವನು ಶಾಹಜಹಾನನನ್ನು ಪ್ರತಿಭಟಿಸಿದನು. ಕೊನೆಗೆ ಕಾಳಿಂಜರ ಬಳಿಯ ಕಾಳಗದಲ್ಲಿ ಸೋತು ಮಡಿದನು.

ಶಾಹಜಹಾನನು ಸುನ್ನೀ ಪಂಥದ ಅಭಿಮಾನಿ. ದಕ್ಷಿಣದ ಶಾಹೀ ರಾಜ್ಯಗಳ ಸುಲ್ತಾನರು ಶಿಯಾ ಪಂಥದವರು. ಅವರು ಇವನಿಗೆ ಸೇರುತ್ತಿರಲಿಲ್ಲ. ಅಲ್ಲದೆ, ಅಹಮದನಗರ ಸುಲ್ತಾನನು ಖಾನ ಜಹಾನ ಲೋದಿಗೆ ಸಹಾಯ ಮಾಡಿದ್ದನು. ಆದುದರಿಂದ ಶಾಹಜಹಾನನು ಅಹಮದನಗರದ ರಾಜ್ಯವನ್ನು ಮುತ್ತಿ ಅದನ್ನು ಪೂರ್ತಿಯಾಗಿ ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು (೧೬೩೩). ವಿಜಾಪುರ ಗೋವಳಕೊಂಡಗಳ ಸುಲ್ತಾನರೂ ಇವನಿಗೆ ತಲೆಬಾಗಿ ಇವನ ಪ್ರಭುತ್ವವನ್ನು ಒಪ್ಪಿಕೊಳ್ಳಬೇಕಾಯಿತು.

ಬಂಗಾಲದಲ್ಲಿ ವ್ಯಾಪಾರ ಮಾಡುತ್ತಿದ್ದ ಪೋರ್ತುಗೀಜರು ವ್ಯಾಪಾರ ಮಾತ್ರದಿಂದ ತೃಪ್ತರಾಗಲಿಲ್ಲ. ಬಲಾತ್ಕಾರದಿಂದ ಅವರು ಹಿಂದು ಮುಸಲ್ಮಾನರನ್ನು ಕ್ರೈಸ್ತ ಮತಕ್ಕೆ ಸೇರಿಸತೊಡಗಿದರು. ಹಡಗುಗಳ್ಳರಿಂದ ಭಾರತೀಯರನ್ನು ಗುಲಾಮರನ್ನಾಗಿ ಕೊಳ್ಳುತ್ತಿದ್ದರು. ಇದರಿಂದ ಸಿಟ್ಟಿಗೆದ್ದ ಶಾಹಜಹಾನನು ಅವರ ಕೇಂದ್ರವಾದ ಹುಗಳಿಯನ್ನು ಕೈವಶ ಮಾಡಿಕೊಂಡನು. ಆಗ ಸಾವಿರಾರು ಪೋರ್ತುಗೀಜರ ಕೊಲೆಯಾಯಿತು.

ಶಾಹಜಹಾನನ ಆಳಿಕೆಯಲ್ಲಿ ಕಂದಹಾರವು ಮಾತ್ರ ಶಾಶ್ವತವಾಗಿ ಮೊಗಲರ ಕೈ ಬಿಟ್ಟಿತು (೧೬೪೮). ಅದು ಇರಾಣ ರಾಜ್ಯದಲ್ಲಿ ಸೇರಿತು.

**ವೈಭವ** :— ಶಾಹಜಹಾನನ ಕಾಲದಲ್ಲಿ ಮೊಗಲ ಸಾಮ್ರಾಜ್ಯವು ವೈಭವದ ಶಿಖರಕ್ಕೇರಿತು. ಇವನ ಆಸ್ಥಾನದ ವೈಭವವನ್ನೂ ರಾಜಧಾನಿಯ ಸೌಂದರ್ಯವನ್ನೂ ಎಲ್ಲರೂ ಹೊಗಳಿದ್ದಾರೆ. ಇವನ ಐಶ್ವರ್ಯವು ದಿನದಿನಕ್ಕೂ ಹೆಚ್ಚುತ್ತಿತ್ತು. ಇವನು ತನ್ನಲ್ಲಿದ್ದ ಅಮೌಲ್ಯ ರತ್ನಗಳನ್ನೂ ೧ ಲಕ್ಷ ತೊಲೆ ಚಿನ್ನವನ್ನೂ ಕೊಟ್ಟು **ಮಯೂರ ಸಿಂಹಾಸನವನ್ನು** ಮಾಡಿಸಿದನು. (ಇದರ ಉದ್ದಳತೆ ೩ ಗಜ, ಆಗಲಳತೆ ೨½ ಗಜ, ಎತ್ತರ ೫ ಗಜ! ಇದರ ಮೇಲ್ ಚಾವಣಿಯ ಹೊರಭಾಗದಲ್ಲೆಲ್ಲ ಸುಂದರವಾದ ಕೆತ್ತನೆಯ ಕೆಲಸ. ಅಲ್ಲಲ್ಲಿ ಮುತ್ತು ರತ್ನಗಳು. ಒಳಭಾಗದಲ್ಲಿ ಎಲ್ಲೆಲ್ಲೂ ವಜ್ರ, ಪಚ್ಚೆ, ಇಂದ್ರನೀಲ, ಪದ್ಮರಾಗಗಳ ಬೆಡಗು. ಚಾವಣಿಗೆ ಆಧಾರವಾಗಿ ೧೨ ಪಚ್ಚದ ಕಂಬಗಳು. ಪ್ರತಿಯೊಂದು ಕಂಬದ ಮೇಲೂ ಎರಡು ನವಿಲುಗಳು........ಈ ಸಿಂಹಾಸನಕ್ಕೆ ಸ್ಫಟಿಕದ ಮೂರು ಮೆಟ್ಟಿಲುಗಳು.)

ಶಾಹಜಹಾನನ ರಸಿಕತೆಯಿಂದ ಮನಮೋಹಕವಾದ ಹಲವು ಕಟ್ಟಡಗಳು ನಿರ್ಮಿತವಾದವು. ಅವುಗಳಲ್ಲಿ ಆಗ್ರಾದಲ್ಲಿಯ **ತಾಜಮಹಲು** ಅತಿ ರಮ್ಯವಾದುದು. ಇದು ಅವನ ಪ್ರಿಯ ರಾಣಿಯಾದ '**ಮುಮತಾಜ ಮಹಲ**'ಳ ಸಮಾಧಿಯು. (ಇವಳೇ ಆಸಫಖಾನನ ಮಗಳು) ಇವಳು ಕ್ರಿ. ಶ. ೧೬೩೧ ರಲ್ಲಿ ಮರಣ ಹೊಂದಿದಳು.



ಮುಮತಾಜ ಮಹಲ

ತಾಜಮಹಲು ಇಂದಿಗೂ ಯಮುನಾ ನದಿಯ ದಂಡೆಯಮೇಲೆ ಕಂಗೊಳಿಸುತ್ತಿರುವ ಅಮೃತಶಿಲೆಯ (ಸಂಗಮರವರೀ ಕಲ್ಲಿನ) ಕಟ್ಟಡ. ಮೇಲೆ ಆಕಾಶದ ನೀಲವರ್ಣ; ಕೆಳಗೆ ಸುಂದರೋದ್ಯಾನದ ಹಸಿರು ಬಣ್ಣ; ಮಧ್ಯದಲ್ಲಿ ತಾಜಮಹಲಿನ ಶುಭ್ರವರ್ಣ ! ಈ ನೋಟವನ್ನು ಎಷ್ಟು ನೋಡಿದರೂ ಮನಸು

ತಣಿಯುದು. ಆಗ್ರಾದ ಕೋಟೆಯೊಳಗೆ ಮುಮತಾಜಮಹಲಳ ವಾಸಕ್ಕಾಗಿ ನಿರ್ಮಿಸಿದ 'ಶಾಹಬುರ್ಜ' (ಮಲ್ಲಿಗೆಯ ಗೋಪುರವು) ಅವನ ಮತ್ತೊಂದು ಕಟ್ಟಡ. ಇದರ ಗೋಡೆ, ಕಂಬ, ಕಮಾನುಗಳು ರತ್ನಖಚಿತವಾಗಿದ್ದವು!



ತಾಜಮಹಲು



ಮೋತೀ ಮಶೀದೆ

ಅವಳಿಗಾಗಿ ಕಟ್ಟಿಸಿದ **ಮೋತಿ ಮಸೀದೆಯೂ** ಬಹು ರಮ್ಯವಾದ ಕಟ್ಟಡವು. ದಿಲ್ಲಿಯಲ್ಲಿಯ **ಜುಮ್ಮಾ ಮಸೀದೆ, ದಿವಾನ-ಈ-ಆಮ** ಮತ್ತು **ದಿವಾನ-ಈ-ಖಾಸ** ಇವು ಶಾಹಜಹಾನನು ಕಟ್ಟಿಸಿದ ಭವ್ಯವಾದ ಕಟ್ಟಡಗಳು. ಅವನು ನಿರ್ಮಿಸಿದ **ಶಾಹಜಹಾನಾಬಾದ** ಎಂಬ ಹೊಸ ರಾಧಾನಿಯೇ ಈಗಿನ **ದಿಲ್ಲೀ ಪಟ್ಟಣ.**

**ಮಕ್ಕಳಲ್ಲಿ ಪಟ್ಟಕ್ಕಾಗಿ ಕಲಹ (೧೬೫೭-೧೬೫೮) :—**ಕ್ರಿ. ಶ. ೧೬೫೭ ರಲ್ಲಿ ಶಾಹಜಹಾನನು ಒಮ್ಮೆಲೆ ಬೇನೆಬಿದ್ದನು. ಅವನಿಗೆ ನಾಲ್ವರು ಮಕ್ಕಳು. **ದಾರಾ, ಶುಜಾ, ಔರಂಗಜೇಬ** ಮತ್ತು **ಮುರಾದ**. ಅವರು ಅನುಕ್ರಮವಾಗಿ ಪಂಜಾಬ ಮತ್ತು ವಾಯುವ್ಯಪ್ರಾಂತ, ಬಂಗಾಲ, ದಕ್ಷಿಣಾಪಥ, ಗುಜರಾತಗಳ ಸುಭೇದಾರರಾಗಿದ್ದರು. ಆದರೆ ದಾರನು ಹೆಚ್ಚಾಗಿ ತಂದೆಯ ಬಳಿಯಲ್ಲಿಯೇ ಇರುತ್ತಿದ್ದನು. ಬಾದಶಾಹನು ಬೇನೆಬಿದ್ದಾಗ ಇವನೇ ಅವನ ಪರವಾಗಿ ರಾಜ್ಯಭಾರ ಮಾಡತೊಡಗಿದನು. ಇದರಿಂದ ಇವನು ತಮ್ಮಂದಿರ ಕೋಪಕ್ಕೆ ಗುರಿಯಾದನು. ಶೂಜನು ಬಂಗಾಲದಲ್ಲಿಯೂ ಮುರಾದನು ಗುಜರಾತದಲ್ಲಿಯೂ ' ಬಾದಶಾಹ ' ರೆಂದು ಸಾರಿಕೊಂಡರು. ಆದರೆ ಔರಂಗ ಜೇಬನು ಕಪಟ· ತನ್ನೊಬ್ಬನಿಂದಲೇ ಇತರ ಮೂವರನ್ನೂ ಸೋಲಿಸುವದಾಗ ದೆಂದು ಬಗೆದು, ಮುರಾದನೊಂದಿಗೆ ಅವನು ಸ್ನೇಹ ಬೆಳಸಿದನು. ಗೆಲುವಿನ ಬಳಿಕ ಇಬ್ಬರೂ ಸಾಮ್ರಾಜ್ಯವನ್ನು ಹಂಚಿಕೊಳ್ಳಬೇಕೆಂದು ಒಪ್ಪಂದವಾಯಿತು. ಶೂಜನು ಸೈನ್ಯದೊಂದಿಗೆ ಆಗ್ರಾದ ಮೇಲೆ ಸಾಗಿಬಂದನು. ಆದರೆ ದಾರಾನ ಮಗನಾದ ಸುಲೇಮಾನನು ಅವನನ್ನು ಸೋಲಿಸಿ ಬಂಗಾಲದ ಕಡೆಗೆ ಹೊಡೆ ದೋಡಿಸಿದನು. ಮುರಾದ ಮತ್ತು ಔರಂಗಜೇಬರ ಸಂಯುಕ್ತ ಸೈನ್ಯವನ್ನು ಮಾತ್ರ ದಾರಾನೇ ಎದುರಿಸಿದನು. ಸಾಮುಗಡ (ಆಗ್ರಾದಿಂದ ಪೂರ್ವಕ್ಕೆ ೮ ಮೈಲು ದೂರ) ದಲ್ಲಿ ಕಾಳಗವಾಯಿತು. ದಾರಾನು ಸೋತು ಹಿಮ್ಮೆಟ್ಟ ಬೇಕಾಯಿತು. ಆಗ್ರಾ ಕೋಟೆಯು ಮುರಾದ ಮತ್ತು ಔರಂಗಜೇಬ ಇವರ ವಶವಾಯಿತು. ಅಲ್ಲಿ ಶಾಹಜಹಾನನು ಇವರ ಕೈಸೆರೆಯಾದನು. ಬಳಿಕ ಔರಂಗಜೇಬನು ಮುರಾದನಿಗೆ ಔತಣವಿತ್ತನು. ಅವನು ಮದ್ಯದ ಅಮಲಿ ನಲ್ಲಿದ್ದಾಗ ಅವನನ್ನು ಸೆರೆಹಿಡಿದನು. ಮುಂದೆ ಅವನ ಕೊಲೆಯೂ ಆಯಿತು. ಕ್ರಿ.ಶ. ೧೬೫೮ ರಲ್ಲಿ ' ಆಲಂಗೀರ ' (ವಿಶ್ವಮರ್ದನ) ಎಂಬ ಬಿರುದಿನಿಂದ ಔರಂಗ ಜೇಬನು ದಿಲ್ಲಿಯಲ್ಲಿ ಸಿಂಹಾಸನವನ್ನು ಏರಿದನು. ಆಮೇಲೆ ಶೂಜನನ್ನು ಸೋಲಿಸಿ ಬಂಗಾಲದಾಚೆಗೆ ಓಡಿಸಿದನು. ಅಲ್ಲಿಯೇ ಅವನ ಅಂತ್ಯವಾಯಿತು. ದ್ದಾರಾ ಮತ್ತು ಸುಲೇಮಾನ ಇವರು ಔರಂಗಜೇಬನಿಂದ ಕೊಲೆಗೆ ತುತ್ತಾದರು.

**ಮರಣ** (೧೬೬೬) : — ಸಿಂಹಾಸನವನ್ನು ಕಳೆದುಕೊಂಡ ಶಾಹಜಹಾನ ನಿಗೆ ' ಶಾಹಬುರ್ಜ ' ಇದೇ ಕಾರಾಗೃಹವಾಯಿತು. ಅವನಿಗೆ ರಾಜಭೋಗ ಗಳ ಕೊರತೆ ಇರಲಿಲ್ಲ. ಆದರೆ ಹೊರಗೆ ಬರುವ ಸ್ವಾತಂತ್ರ್ಯವೂ ಇರಲಿಲ್ಲ.

ಮತ್ತೊಮ್ಮೆ ತಾಜಮಹಲನ್ನು ಸಂದರ್ಶಿಸುವ ಭಾಗ್ಯವೂ ಇರಲಿಲ್ಲ. ದೂರ ದಿಂದಲೇ ಅದನ್ನು ನೋಡುತ್ತ ಅವನು ಕೊರಗಿನಿಂದ ಪ್ರಾಣಬಿಟ್ಟನು.

### ಅಭ್ಯಸನಗಳು.

(೧) ಕೆಳಗಿನ ವಾಕ್ಯಗಳಲ್ಲಿ ಅರ್ಥವು ಸರಿಯಾಗುವಂತೆ, ಕಂಸಗಳಲ್ಲಿರುವ ಯೋಗ್ಯ ಶಬ್ದದ ಕೆಳಗೆ ಗೆರೆ ಎಳೆಯಿರಿ:—

(ಅ) ಖುಸ್ರುವು ಮಾನಸಿಂಗನ (ಮಗ, ಸೋದರಳಿಯ, ತಮ್ಮ).

(ಆ) ಮಲಿಕ ಅಂಬರನು (ವಿಜಾಪುರದಲ್ಲಿ, ಗೋವಳಕೊಂಡದಲ್ಲಿ, ಅಹಮದ ನಗರದಲ್ಲಿ) ಮಂತ್ರಿಯಾಗಿದ್ದನು.

(ಇ) ಶಾಹಜಹಾನನ ಆಳಿಕೆಯಲ್ಲಿ (ಕಂದಹಾರ, ಅಹಮದಾಬಾದ, ಹುಗಳಿ) ಮೊಗಲರ ಕೈಬಿಟ್ಟಿತು.

(ಈ) (ಕ್ರಿ. ಶ. ೧೬೦೫ ರಲ್ಲಿ, ೧೬೧೧ ರಲ್ಲಿ ೧೬೩೩ ರಲ್ಲಿ) ನೂರಜಹಾನಳು ಜಹಾಂಗೀರನನ್ನು ಮದುವೆಯಾದಳು.

(೨) ಮಾನಸಿಂಗ ಮೊದಲಾದ ಪ್ರಮುಖ ಸರದಾರರು ಸಲೀಮನ ಬದಲಾಗಿ ಖುಸ್ರುವಿಗೆ ಪಟ್ಟಗಟ್ಟಬೇಕೆಂದು ಯೋಚಿಸಿದರು. ಏಕೆ?

(೩) ಶಾಹಜಹಾನನ ವೈಭವದ ಉದಾಹರಣೆಗಳನ್ನು ಕೊಡಿರಿ.

(೪) ಮಯೂರ ಸಿಂಹಾಸನದ ಚಿತ್ರ ತೆಗೆಯಿರಿ (ಗೃಹಪಾಠ.)

## ೧೦ನೆಯ ಪ್ರಕರಣ

# ಔರಂಗಜೇಬ (ಆಲಂಗೀರ)

### (೧೬೫೮–೧೭೦೭)

ಔರಂಗಜೇಬನು ಮೊಗಲ ಬಾದಶಾಹರಲ್ಲಿ ಕೊನೆಯ ದೊಡ್ಡ ಸಮ್ರಾಟನು. ಸಿಂಹಾಸನವನ್ನು ಏರಿದಾಗ ಅವನಿಗೆ ೪೦ ವರ್ಷ ವಯಸ್ಸು.

**ಸ್ವಭಾವ ಹಾಗೂ ಧೋರಣೆ:—**

ಔರಂಗಜೇಬನು ಬುದ್ಧಿಶಾಲಿ, ಶೂರ, ಕಷ್ಟವನ್ನು ಸಹಿಸುವವನು ಮತ್ತು ರಾಜಕಾರಣದಲ್ಲಿ ಚತುರನು. ಇವನಿಗೆ ದಂಡನೀತಿಗಿಂತಲೂ ಚಾಣಕ್ಯತಂತ್ರ ದಲ್ಲಿ ಹೆಚ್ಚು ವಿಶ್ವಾಸವಿತ್ತು. ಇವನು ವಿಲಾಸಪ್ರಿಯನಲ್ಲ. ಸಂಗೀತ, ನೃತ್ಯ, ವಿನೋದಗಳಲ್ಲಿ ಕಾಲಕಳೆದವನಲ್ಲ. ಮದ್ಯ ಮಾಂಸಗಳನ್ನು ಸೇವಿಸಿದವನಲ್ಲ.

ಕುರಾನದಲ್ಲಿ ಹೇಳಿದ ವ್ರತಾಚರಣೆಗಳಲ್ಲಿ ಎಂದೂ ತಪ್ಪಿದವನಲ್ಲ. ಕುರಾನದ ಪ್ರತಿಗಳನ್ನು ಕೈಬರಹದಿಂದ ತಯಾರಿಸುವದೆಂದರೆ ಇವನಿಗೆ ತುಂಬ ಇಷ್ಟ. ತನ್ನ ಜೀವನೋಪಾಯಕ್ಕಾಗಿ ಇವನು ಟೊಪ್ಪಿಗೆಗಳನ್ನು ತಯಾರಿಸಿ ಮಾರುತ್ತಿದ್ದನು. ಇವನಿಗೆ ಸ್ವಧರ್ಮದಲ್ಲಿ ತೀವ್ರ ಅಭಿಮಾನವಿತ್ತು. ಬರಬರುತ್ತ ಅದು 'ಧರ್ಮಾಂಧತೆ'ಯ ಮಟ್ಟಕ್ಕೇರಿತು. ಆಗ ಮುಸಲ್ಮಾನರಲ್ಲದವರು ಈತನ ಕಡುವೈರಿಗಳಾದರು. ಇವನದು ಸಂಶಯ ಸ್ವಭಾವ ಇದರಿಂದ ಇವನು ತನ್ನ ಕೈಕೆಳಗಿನ ಅಧಿಕಾರಿಗಳನ್ನು ನಂಬದಾದನು. ಅಷ್ಟೇ ಏಕೆ, ತನ್ನ ಮಕ್ಕಳನ್ನೇ ನಂಬಲಿಲ್ಲ.



ಔರಂಗಜೇಬ

ಔರಂಗಜೇಬನು ಮೊದಲಿಗೆ ಹಿಂದುಗಳ ಕೆಲವು ಉತ್ಸವಾಚರಣೆಗಳನ್ನು ನಿಲ್ಲಿಸಿದನು. ಅವನಿಂದ ನಡೆದ ದೇವಾಲಯಗಳ ನಾಶ, ಜಜಿಯಾ ತಲೆಗಂದಾಯ, ಆಗ್ರಹದ ಧರ್ಮಾಂತರ ಇವುಗಳನ್ನು ಹಿಂದುಗಳು ಪ್ರತಿಭಟಿಸತೊಡಗಿದರು. ಹಿಂದುಗಳಿಗೆ ಸರಕಾರದಲ್ಲಿ ಚಿಕ್ಕ ದೊಡ್ಡ ಹುದ್ದೆಗಳು ದೊರೆಯದಾದವು. ಹಿಂದು ವರ್ತಕರು ಹೆಚ್ಚಿನ ಸುಂಕವನ್ನು ಕೊಡಬೇಕಾಯಿತು. ಹಿಂದುಗಳು ಆನೆ ಕುದುರೆಗಳನ್ನೇರುವದು, ಪಲ್ಲಕ್ಕಿಗಳಲ್ಲಿ ಕೂಡುವದು ಅಪರಾಧಗಳೆನಿಸಿದವು. ಔರಂಗಜೇಬನ ಈ ರೀತಿಯ ಧಾರ್ಮಿಕಧೋರಣೆಯಿಂದ ಅವನ ರಾಜ್ಯದಲ್ಲಿ ಕೆಳಗಿನಂತೆ ಪ್ರತಿಕ್ರಿಯೆಗಳು ಉಂಟಾದವು.

**'ಜಾಟರ' ದಂಗೆ:**—ಜಾಟರು ಮಥುರೆಯಲ್ಲಿ ಔರಂಗಜೇಬನ ಧಾರ್ಮಿಕ ದಬ್ಬಾಳಿಕೆಯನ್ನು ಸಹಿಸದೆ ದಂಗೆಯೆದ್ದರು (೧೬೬೯). ಗೋಕುಲನೆಂಬ ಜಾಟ ಜಮೀನುದಾರನು ಅವರ ಮುಖಂಡನಾದನು. ಒಂದು ವರ್ಷದವರೆಗೆ ಆ ದಂಗೆಯು ಸಾಗಿತು. ಔರಂಗಜೇಬನು ಕ್ರೂರತನದಿಂದ ಅದನ್ನು ಅಡಗಿಸಿದನು. ಗೋಕುಲ ಜಾಟನ ಕೊಲೆಯಾಯಿತು. ಆದರೂ ಜಾಟರು

ಮತ್ತೆ ೩–೪ ಸಲ ದಂಗೆಯೆದ್ದು ಔರಂಗಜೇಬನ ಧೋರಣೆಯನ್ನು ಧೈರ್ಯದಿಂದ ಪ್ರತಿಭಟಿಸಿದರು.

**ಶೀಖರ ಪ್ರತಿಭಟನೆ :—** ಔರಂಗಜೇಬನ ಧಾರ್ಮಿಕ ನೀತಿಯನ್ನು ಪಂಜಾಬದ ಶೀಖರು ಪ್ರತಿಭಟಿಸಿದರು. ಔರಂಗಜೇಬನು ಅವರ ಗುರುವಾದ **ತೇಜಬಹಾದುರನನ್ನು** ಮರಣ ದಂಡನೆಗೆ ಗುರಿಮಾಡಿದನು (೧೬೭೫). ಗುರುವಿನ ಬಲಿದಾನದಿಂದ ಶೀಖರಲ್ಲಿ ಕ್ಷಾತ್ರಬುದ್ಧಿಯು ಅಂಕುರಿಸಿತು. ಮುಂದಿನ ಗುರುವಾದ **ಗೋವಿಂದಸಿಂಗನು** ಶೀಖರನ್ನು ಉತ್ತಮ ಸೈನಿಕರನ್ನಾಗಿ ಮಾರ್ಪಡಿಸಿದನು. ಶೀಖರು 'ಸಿಂಗ' (ಸಿಂಹ) ರಾದರು. ಆಗ ಯುದ್ಧವು ಅನಿವಾರ್ಯವಾಯಿತು. ಕಾಳಗದಲ್ಲಿ ಗೋವಿಂದಸಿಂಗನ ಇಬ್ಬರು ಮಕ್ಕಳು ಮಡಿದರು. ಮಿಕ್ಕ ಇಬ್ಬರು ಮಕ್ಕಳನ್ನು ಬಾದಶಾಹನು ಸೆರೆಹಿಡಿಸಿ ಕೊಲ್ಲಿಸಿದನು. ಆದರೂ ಗುರು ಗೋವಿಂದನು ಅವನಿಗೆ ತಲೆಬಾಗಲಿಲ್ಲ.



ಗುರು ಗೋವಿಂದಸಿಂಗ

**ರಾಜಪುತರ ಯುದ್ಧ :—** ಔರಂಗಜೇಬನ ಆಳಿಕೆಯಲ್ಲೂ ರಾಜಪುತರು ಕೆಲವುಕಾಲ ಅವನ ಸಾಮ್ರಾಜ್ಯವಿಸ್ತಾರದಲ್ಲಿ ನೆರವಾದರು. ಅವರಲ್ಲಿ ಜಯಪುರ (ಅಂಬರ)ದ ಜಯಸಿಂಹನೂ ಜೋಧಪುರ (ಮಾರವಾಡ) ದ ಜಸವಂತಸಿಂಗನೂ ಪ್ರಸಿದ್ಧರು. ಅವರು ತನ್ನ ಧಾರ್ಮಿಕ ಧೋರಣೆಯನ್ನು ವಿರೋಧಿಸಬಹುದೆಂದು ಔರಂಗಜೇಬನು ಭೀತಿಗೊಂಡನು. ಆದರೆ ಜಯಸಿಂಗನು ಕ್ರಿ. ಶ. ೧೬೬೭ ರಲ್ಲಿ ಮರಣಹೊಂದಿದನು. ವಾಯುವ್ಯಗಡಿಯಲ್ಲಿ ಪುಂಡಾಟಿಕೆಯನ್ನು ನಡೆಸಿದ್ದ ಪಠಾಣರನ್ನು ಸದೆಬಡಿಯಲು, ಔರಂಗಜೇಬನು ಜಸವಂತಸಿಂಗನನ್ನೇ

ಕಳುಹಿದನು. ಅವನು ಹಿಂತಿರುಗಿ ಬರಲೇ ಇಲ್ಲ—ಅಲ್ಲಿಯೇ ಮಡಿದನು. ಆಗ ಔರಂಗಜೇಬನು ಜೋಧಪುರವನ್ನು ತನ್ನ ಆಡಳಿತಕ್ಕೆ ಒಳಪಡಿಸಿಕೊಂಡನು. ಜಸವಂತಸಿಂಗನ ಚಿಕ್ಕಮಗುವನ್ನು ತಾಯಿಯೊಂದಿಗೆ ಸೆರೆಹಿಡಿಸಿ ದಿಲ್ಲಿಗೆ ಕರೆ ತರಿಸಿದನು. ಆದರೆ ಜೋಧಪುರದ ಮಂತ್ರಿಯ ಮಗನಾದ **ದುರ್ಗಾದಾಸನು** ಯುಕ್ತಿಸಾಹಸಗಳಿಂದ ಇಬ್ಬರನ್ನೂ ಮರಳಿ ಜೋಧಪುರಕ್ಕೆ ಕರೆದೊಯ್ದನು. ಕೂಡಲೆ ಆ ರಾಜಶಿಶುವಿನ ಸಂರಕ್ಷಣೆಗೆ ರಾಜಪುತರೆಲ್ಲರೂ ಅಣಿಯಾದರು. ಉದಯಪುರ(ಮೇವಾಡ) ದ **ಮಹಾರಾಣಾ ರಾಜಸಿಂಹನೂ** ಅವರನ್ನು ಕೂಡಿಕೊಂಡನು. ಔರಂಗಜೇಬನು ಅವರಮೇಲೆ ತನ್ನ ಮಗನಾದ **ಅಕಬರ** ನನ್ನು ದೊಡ್ಡ ಸೈನ್ಯದೊಂದಿಗೆ ಕಳುಹಿದನು. ಅಕಬರನು ಅವರ ಕ್ಷಾತ್ರಕ್ಕೆ ಬೆರ ಗಾದನು. ಅವರು ಇವನಿಗೆ ದಿಲ್ಲಿಯ ಸಮ್ರಾಟ ಪದವಿಯನ್ನು ದೊರಕಿಸಿ ಕೊಡು ವೆವೆಂದು ವಾಗ್ದಾನಮಾಡಿದರು. ಅವರ ಸಂಯುಕ್ತ ಸೈನ್ಯವು ಅಜಮೀರಕ್ಕೆ ಬಂದಿದ್ದ ಔರಂಗಜೇಬನ ಮೇಲೆ ಏರಿಹೋಯಿತು! ಔರಂಗಜೇಬನು ಬೆದ ರಿದನು. ಆದರೆ ತನ್ನ ಚಾಣಕ್ಯ ತಂತ್ರದಿಂದ ರಾಜಪುತರು ತನ್ನ ಮಗನನ್ನು ತ್ಯಜಿಸುವಂತೆ ಮಾಡಿದನು. ಅಕಬರನಿಗೆ ದಿಕ್ಕು ತೋಚದಾಯಿತು. ಆಗ ಅವನು ದಕ್ಷಿಣದಲ್ಲಿ ಪ್ರಬಲರಾಗಿದ್ದ ಮರಾಠರನ್ನು ಆಶ್ರಯಿಸಿದನು. ಆದರೆ ಅಲ್ಲಿಯೂ ಅವನ ಆಸೆ ಫಲಿಸಲಿಲ್ಲ. ಕೊನೆಗೆ ಅವನು ಇರಾಣ ದೇಶಕ್ಕೆ ಓಡಿಹೋಗಿ ಅಲ್ಲಿಯೇ ಮೃತನಾದನು(೧೭೦೪).

**ದಕ್ಷಿಣದಲ್ಲಿಯ ಯುದ್ಧಗಳು :—**

ದಕ್ಷಿಣದಲ್ಲಿ ಮರಾಠಾವೀರನಾದ **ಶಿವಾಜಿಯು** ಸ್ವರಾಜ್ಯಸ್ಥಾಪನೆಗಾಗಿ ತಲೆಯೆತ್ತಿದನು. ಕ್ರಿ. ಶ. ೧೬೬೨ ರಲ್ಲಿ ಅವನು ದಕ್ಷಿಣದಲ್ಲಿಯ ಮೊಗಲ ಪ್ರದೇಶಗಳಲ್ಲಿ ಹಾವಳಿ ನಡೆಸಿದನು. ಅವನ ಪುಂಡತನವನ್ನು ಅಡಗಿಸಲು ಔರಂಗಜೇಬನು ತನ್ನ ಸೋದರಮಾವನಾದ ಶಾಯಿಸ್ತಾಖಾನನನ್ನು ಕಳು ಹಿದನು. ಆದರೆ ಆ ಖಾನನು ಪ್ರಾಣಭಯದಿಂದ ಹಿಂದಿರುಗಬೇಕಾಯಿತು. (೧೬೬೩). ಮುಂದೆ ಔರಂಗಜೇಬನು ಶಿವಾಜಿಯ ಮೇಲೆ ಜಯಸಿಂಹ ಮತ್ತು ದಿಲೀರಖಾನರನ್ನು ಕಳುಹಿದನು. ಶಿವಾಜಿಯು ದಿಗಿಲುಗೊಂಡು ಸಂಧಿಯನ್ನು ಮಾಡಿಕೊಂಡನು. ಆಗ್ರಾಕ್ಕೆ ಹೋಗಿ ಬಾದಶಾಹನನ್ನು ಕಾಣಲೂ ಒಪ್ಪಿದನು. ಆದರೆ ಅಲ್ಲಿ ಔರಂಗಜೇಬನು ತನ್ನ ದರಬಾರದಲ್ಲಿ ಅವನಿಗೆ ಯೋಗ್ಯ ಗೌರವ ಕೊಡಲಿಲ್ಲ; ಅಷ್ಟೇ ಅಲ್ಲ, ಶಿವಾಜಿಯಮೇಲೆ ಕಾವಲಿರಿಸಿದನು. ಆದರೆ ಶಿವಾಜಿಯು

ಯುಕ್ತಿಸಾಹಸಗಳಿಂದ ಪಾರಾಗಿ ಸ್ವದೇಶಕ್ಕೆ ಮರಳಿ ಬಂದನು(೧೬೬೬). ಈಗ ಶಿವಾಜಿಯು ಪರೆಬಿಟ್ಟ ಹಾವಿನಂತಾದನು. ಔರಂಗಜೇಬನು ಆವನನ್ನು 'ರಾಜ' ನೆಂದು ಒಪ್ಪಿಕೊಳ್ಳಬೇಕಾಯಿತು. ಮುಂದೆ, ಶಿವಾಜಿಯ ರಾಜ್ಯಾಭಿಷೇಕವು ಜರುಗಿತು. ಆವನು 'ಛತ್ರಪತಿ' ಯಾದನು (೧೬೭೪). ಆವನು ಮರಣಹೊಂದಲು ಆವನ ಮಗನಾದ ಸಂಭಾಜಿಯು ಛತ್ರಪತಿಯಾದನು (೧೬೮೦). ಔರಂಗಜೇಬನ ಮಗನಾದ ಆಕಬರನು ಆಶ್ರಯಿಸಿದುದು ಇವನನ್ನೇ. ಇದರಿಂದ ಕೋಪಗೊಂಡ ಔರಂಗಜೇಬನು ತಾನೇ ಯುದ್ಧಕ್ಕಾಗಿ ದಕ್ಷಿಣಕ್ಕೆ ಬಂದನು (೧೬೮೩). (ಉತ್ತರಕ್ಕೆ ಮರಳುವದು ಆವನಿಗೆ ಆಗಲೇ ಇಲ್ಲ). ಆಗಿನಿಂದ ಮೊಗಲ-ಮರಾಠರ ಹೋರಾಟಕ್ಕೆ ಹೊಸ ಕಳೆಯೇರಿತು.

ಇದರಲ್ಲಿ ಮರಾಠರಿಗೆ ಸಹಾಯಕರಾಗಿದ್ದ ವಿಜಾಪುರ, ಗೋವಳಕೊಂಡಗಳ ಶಿಯಾ ಸುಲ್ತಾನರನ್ನು ಔರಂಗಜೇಬನು ಸೋಲಿಸಿ ಆವರ ರಾಜ್ಯಗಳನ್ನು ಕೈವಶ ಮಾಡಿಕೊಂಡನು (೧೬೮೬-೧೬೮೭). ಸಂಭಾಜಿಯನ್ನು ಸೆರೆಹಿಡಿದು ಕೊಲೆ ಮಾಡಿದನು. ಮುಂದೆ ಛತ್ರಪತಿಯಾದ ರಾಜಾರಾಮನೂ ಆವನ ಮರಣದ ತರುವಾಯ ತಾರಾಬಾಯಿಯೂ (ರಾಜಾರಾಮನ ಹೆಂಡತಿ) ತಮ್ಮ ಸ್ವಾತಂತ್ರ್ಯಯುದ್ಧವನ್ನು ಮುಂದುವರಿಸಿದರು. ಮರಾಠರ 'ಕೂಟಯುದ್ಧ' ದಿಂದ, ಕೊನೆಗೆ ಔರಂಗಜೇಬನ ವಿಜಯಗಳೆಲ್ಲ ವ್ಯರ್ಥವಾದವು.

**ಔರಂಗಜೇಬನ ಕೊನೆಯ ದಿನಗಳು** :- ಔರಂಗಜೇಬನ ಕೊನೆಯ ದಿನಗಳು ದುಃಖಮಯವಾದವು. "ನನಗೀಗ ಮುಪ್ಪು; ಶಕ್ತಿಯಿಲ್ಲ. ಸಾವು ಸಮೀಪಿಸಿದೆ. ನನ್ನ ಜೀವನವು ವ್ಯರ್ಥವಾಯಿತು. ನನ್ನನ್ನು ನಾನು ಅರಿಯಲಿಲ್ಲ. ನ್ಯಾಯದಿಂದ ರಾಜ್ಯವಾಳಲಿಲ್ಲ. ರೈತರ ಕ್ಷೇಮಚಿಂತನೆ ಮಾಡಲಿಲ್ಲ. ನಾನೊಬ್ಬ ಕಡುಪಾಪಿ. ದೇವರು ನನಗಾಗಿ ಯಾವ ಶಿಕ್ಷೆಯನ್ನು ಕಾದಿಟ್ಟಿರುವನೋ ನಾನು ಕಾಣೆ." ಎಂದು ಔರಂಗಜೇಬನು ಕೊರಗುತ್ತ ಆಹಮುದನಗರದಲ್ಲಿ ಪ್ರಾಣಬಿಟ್ಟನು (೧೭೦೭).

**ಸಾಮ್ರಾಜ್ಯದ ಅಳಿಗಾಲ** (೧೭೦೭-೧೮೫೭).

ಔರಂಗಜೇಬನ ಮರಣಾನಂತರ, ಮುಂದಿನ ೧೫೦ ವರ್ಷಗಳಲ್ಲಿ ೧೫ ಜನರು ಬಾದಶಾಹರಾಗಿ ರಾಜ್ಯವಾಳಿದರು. ಆವರೆಲ್ಲ ದುರ್ಬಲರು; ಅಪ್ರಯೋಜಕರು. ಆದುದರಿಂದ ಶೀಖರಿಗೂ ರಾಜಪುತರಿಗೂ ಮರಾಠರಿಗೂ

ಪ್ರಬಲರಾಗಲು ಅವಕಾಶ ದೊರೆಯಿತು. ಔರಂಗಜೇಬನ ತರುವಾಯ ಐದನೆ ಯವನಾದ ಮುಹಮ್ಮದಶಾಹನ(೧೭೧೯-೧೭೪೮) ಆಳಿಕೆಯಲ್ಲಿ ಸುಭೇದಾರರು ಸ್ವತಂತ್ರರಾಗತೊಡಗಿದರು. ಅವರಲ್ಲಿ ದಕ್ಷಿಣದ ಅಸಫಜಾ, ಆಯೋಧ್ಯೆಯ



'ಕಠೋರಾಜ್ಞೆ'

ಸಾದತಖಾನ, ಬಂಗಾಲದ ಅಲಿವರ್ದಿಖಾನ ಇವರು ಪ್ರಸಿದ್ಧರು. ಇಂದಿನ ಹೈದ್ರಾಬಾದರಾಜ್ಯಸಂಸ್ಥಾಪಕನೇ ಅಸಫಜಾ(೧೭೨೪). ಇದೇಸಮಯದಲ್ಲಿ ಇರಾ

ಣದ ಸಮ್ರಾಟನಾದ **ನಾದಿರಶಾಹನು** ಭಾರತದ ಮೇಲೆ ದಂಡೆತ್ತಿ ಬಂದನು (೧೭೩೯). ಅವನ ಕಠೋರಾಜ್ಞೆಯಿಂದ ದಿಲ್ಲಿಯಲ್ಲಿ ಭೀಕರ ಕೊಲೆಸುಲಿಗೆಗಳು ನಡೆದವು. ಅವನು ಇಲ್ಲಿಂದ ದೋಚಿಕೊಂಡು ಹೋದ ಅಮೌಲ್ಯ ವಸ್ತುಗಳಲ್ಲಿ ' ಮಯೂರ ಸಿಂಹಾಸನ ' ವೂ ಒಂದು.

ಬಹಾದುರಶಾಹನು ಮೊಗಲವಂಶದ ಕೊನೆಯ ಬಾದಶಾಹನು.

## ಅಭ್ಯಸನಗಳು.

೧. ಹಿಂದಿನ ಪುಟದಲ್ಲಿಯ ಚಿತ್ರವನ್ನು ಸೂಕ್ಷ್ಮವಾಗಿ ಅಭ್ಯಸಿಸಿ, ಕೆಳಗಿನ ಪ್ರಶ್ನೆಗಳಿಗೆ ಉತ್ತರಕೊಡಿರಿ :—

(ಅ) ಇದರಲ್ಲಿ ಚಿತ್ರಿಸಿದ ಘಟನೆಯು ದಿಲ್ಲಿಯಲ್ಲಿ ನಡೆದುದೆಂದು ತಿಳಿಯಲಿಕ್ಕೆ ಚಿತ್ರದಲ್ಲಿ ಯಾವ ಆಧಾರವಿದೆ ?

(ಆ) ಚಿತ್ರದ ಮಧ್ಯದಲ್ಲಿ ಕುಳಿತಿರುವ ವ್ಯಕ್ತಿ ಯಾರು ?

(ಇ) ಅವನ ಎದುರಿನಲ್ಲಿ ನಿಂತ ವ್ಯಕ್ತಿ ಯಾರಿರಬಹುದು ?

೨. ಭಾರತದ ಬಾಹ್ಯರೇಷೆಯ ನಕಾಶವೊಂದರಲ್ಲಿ ಔರಂಗಜೇಬನ ಸಾಮ್ರಾಜ್ಯದ ವಿಸ್ತಾರವನ್ನು ಗುರುತಿಸಿರಿ.

೩. ಕೆಳಗಿನ ಎರಡು ಪತ್ರಗಳನ್ನು ಓದಿಕೊಳ್ಳಿರಿ. ಅವುಗಳಿಂದ ಔರಂಗಜೇಬನ ಬಗ್ಗೆ ನಿಮಗೆ ಗೊತ್ತಾಗುವ ಹೊಸ ಸಂಗತಿಗಳು ಯಾವವು ?

(ಅ) ಗುರು ಗೋವಿಂದಸಿಂಗನು ಔರಂಗಜೇಬನಿಗೆ ಬರೆದ ಪತ್ರ— " ....... ತಾವು ಭಾಗ್ಯಶಾಲಿಗಳು, ರಾಜಾಧಿರಾಜರು, ಧೀರಯೋಧರು...... ಸ್ವಧರ್ಮ ಬಾಂಧವರಲ್ಲಿ ತಾವು ಅತಿ ಉದಾರರು. ವೈರಿಗಳನ್ನು ನಾಶಗೊಳಿಸುವದರಲ್ಲಿ ದಕ್ಷರು. ರಣಾಂಗಣದಲ್ಲಿ ಸ್ಥಿರರು. ಆದರೆ........... "

(ಬ) ಅಕಬರನು ತಂದೆಯಾದ ಔರಂಗಜೇಬನಿಗೆ ಬರೆದ ಪತ್ರ— " .......... ತಮ್ಮ ಸಾರ್ವಭೌಮತ್ವದಲ್ಲಿ ಮಂತ್ರಿಗಳಿಗೆ ಅಧಿಕಾರವಿಲ್ಲ, ಸರದಾರರಲ್ಲಿ ವಿಶ್ವಾಸವಿಲ್ಲ. ಸೈನಿಕರಿಗೆ ಕಡು ಬಡತನ. ಕಲಾಕೋವಿದರಿಗೆ ಉದ್ಯೋಗವಿಲ್ಲ. ವರ್ತಕರ ಕೈಯಲ್ಲಿ ಹಣವಿಲ್ಲ. ರೈತರಲ್ಲಿ ಸುಖ ಸಮಾಧಾನಗಳಿಲ್ಲ. ಆಡಳಿತದಲ್ಲಿ ಸಂಪನ್ನರಿಗೆ ಸ್ಥಾನವಿಲ್ಲ........... "

# ೧೧ನೆಯ ಪ್ರಕರಣ

# ಶೀಖರ ಸಂಕ್ಷಿಪ್ತ ಚರಿತ್ರೆ

ಗುರು ನಾನಕರು (೧೪೬೯–೧೫೩೮) 'ಶೀಖ' ಧರ್ಮದ **ಸ್ಥಾಪಕರು.** ಇವರು ಬಾದಶಾಹನಾದ ಬಾಬರನಿಗೆ ಗೌರವಸ್ಥಾನವಾದರು. ನಾನಕರ ಕಾಲದಲ್ಲಿ ಶಾಂತಿಪ್ರಿಯರಾಗಿದ್ದ ಶೀಖರು ಬರಬರುತ್ತ ಕ್ಷಾತ್ರಜೀವಿಗಳಾದರು! ಇದರ ವಿವರಗಳನ್ನು ಈ ಪ್ರಕರಣದಲ್ಲಿ ಕೊಡಲಾಗಿದೆ.

**ಶೀಖರ ಗುರು-ಪರಂಪರೆ**:— ಶೀಖರಲ್ಲಿ ಒಟ್ಟು ೧೦ ಜನರು ಗುರುಗಳಾಗಿಹೋದರು. ಅವರಲ್ಲಿ **ನಾನಕರೇ** ಮೊದಲನೆಯ ಗುರುಗಳು. ಅವರಿಗೆ 'ಲಹನ' ನೆಂಬ ಶಿಷ್ಯನಿದ್ದನು. ಅವನನ್ನು ನಾನಕರು ತಮ್ಮ ಮಕ್ಕಳಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದರು. "ನಾನು ದೇಹವಿಟ್ಟಮೇಲೆ ಅವನೊಳಗಿರುವೆ. ಅವನು ನನ್ನ ವಿಶಿಷ್ಟದೇಹ (ಅಂಗದ)" ಎಂದು ಅನ್ನುತ್ತಿದ್ದರು. ಅಂತೆಯೇ ಅವರ ತರುವಾಯ **'ಲಹನ'** ನು **ಅಂಗದ**ನೆಂಬ ಹೆಸರಿನಿಂದ ಗುರುವಾದನು (೧೫೩೮–೧೫೫೨). ಇವನು 'ಗುರುಮುಖಿ' ಎಂಬ ಹೊಸ ಲಿಪಿಯನ್ನು ನಿರ್ಮಿಸಿ ಬಳಕೆಯಲ್ಲಿ ತಂದನು. ಇವನ ಬಳಿಕ ಇವನ ಮುಖ್ಯ ಶಿಷ್ಯನಾದ **ಅಮರದಾಸನು** ಗುರುಪಟ್ಟವನ್ನೇರಿದನು (೧೫೫೨–೧೫೭೪). ಇವನು ಗೋವಿಂದವಲ ಎಂಬಲ್ಲಿ ಪವಿತ್ರವಾದ ಪುಷ್ಕರಣಿ (ಕೆರೆ) ಯನ್ನು ಕಟ್ಟಿಸಿದನು. ಇವನಿಗೆ ಮೋಹನನೆಂಬ ಮಗನೂ ಮೋಹಿನಿ ಎಂಬ ಮಗಳೂ ಇದ್ದರು. ಮಗಳ ಇಚ್ಛೆಯಂತೆ ಇವನು ತನ್ನ ಅಳಿಯ ರಾಮದಾಸನನ್ನೇ ಗುರುಪೀಠಕ್ಕೆ ಉತ್ತರಾಧಿಕಾರಿಯನ್ನಾಗಿ ನೇಮಿಸಿದನು. ಮುಂದಿನ ಗುರುಗಳೆಲ್ಲರೂ ರಾಮದಾಸನ ವಂಶದವರು. **ರಾಮದಾಸ** (೧೫೭೪–೧೫೮೧)ನು ಬುದ್ಧಿಶಾಲಿ. ಅಕಬರ ಬಾದಶಾಹನಿಗೆ ಇವನಲ್ಲಿ ಪೂಜ್ಯಭಾವವಿತ್ತು. ಅವನು ಒಂದು ಪ್ರದೇಶವನ್ನು ಇವನಿಗೆ ಕಾಣಿಕೆಯಾಗಿ ಕೊಟ್ಟನು. ಇವನು ಅಲ್ಲಿದ್ದ ಕೆರೆಯನ್ನು ಸರಿಪಡಿಸಿ ಅದಕ್ಕೆ 'ಅಮೃತಸಾಗರ' ವೆಂದು ಹೆಸರಿಟ್ಟನು. ಅದರ ಮಧ್ಯದಲ್ಲೊಂದು ಸುಂದರವಾದ ದೇವಾಲಯವನ್ನು ನಿರ್ಮಿಸಿದನು. ಕೆರೆಯ ಸುತ್ತಲೂ ಶೀಖರ ವಸತಿಗಳಾದವು. ಅಮೃತಸಾಗರವೇ ಇಂದಿನ ಅಮೃತಸರ ಪಟ್ಟಣವು. ರಾಮದಾಸನು ನಿರ್ಮಿಸಿದ ದೇವಾಲಯವೇ ಶೀಖರ '**ಸುವರ್ಣ ಮಂದಿರ**'ವು. ಇವು ಶೀಖರಿಗೆ ಅತ್ಯಂತ ಪವಿತ್ರಸ್ಥಳಗಳು.

**ಗುರು ಅರ್ಜುನ** (೧೫೮೧ – ೧೬೦೬) :— ಇವನು ರಾಮದಾಸನ ಮಗನು. ಇವನು ತನ್ನ ಹಿಂದಿನ ಗುರುಗಳ ವಚನಗಳನ್ನೂ, ಕಬೀರ ಮುಂತಾದ ಸಾಧು ಸಂತರ ಕವನಗಳನ್ನೂ ಸಂಗ್ರಹಿಸಿ ಬರೆದಿಟ್ಟನು. ಇವನ ಈ ಗ್ರಂಥವೇ ಶೀಖರಿಗೆ ಪವಿತ್ರವಾದ '**ಆದಿಗ್ರಂಥ**' ಅಥವಾ '**ಗ್ರಂಥಸಾಹೇಬ**'.

ಅಕಬರನು ಗುರು ಅರ್ಜುನನನ್ನು ಭಯ ಭಕ್ತಿಯಿಂದ ಕಾಣುತ್ತಿದ್ದನು. ಆದರೆ ಇವನು ಜಹಾಂಗೀರನ ಆಳಿಕೆಯಲ್ಲಿ ದಂಗೆಯೆದ್ದ ಖುಸ್ರುವಿಗೆ ಧನ ಸಹಾಯ ಮಾಡಿದುದರಿಂದ ಬಾದಶಾಹನ ಕೋಪಕ್ಕೆ ಗುರಿಯಾದನು. ಜಹಾಂಗೀರನು ಇವನನ್ನು ರಾಜದ್ರೋಹಿಯೆಂದು ಬಂಧಿಸಿದನು. ಅರ್ಜುನನು ನ್ಯಾಯಾಲಯದಲ್ಲಿ ತನ್ನ ತಪ್ಪನ್ನು ಒಪ್ಪಿಕೊಳ್ಳಲಿಲ್ಲ. "ನನ್ನದು ಜಗದ್ಗುರು ಪೀಠ. ಮೊರೆಹೊಕ್ಕವರನ್ನು ರಕ್ಷಿಸುವದು ಜಗದ್ಗುರುಗಳ ಕರ್ತವ್ಯ. ನಿನಗೆ ಅಂಜಿ ನಾನು ಕರ್ತವ್ಯವನ್ನು ಬಿಡಲಾರೆ" ಎಂದು ನಿರ್ಭಯನಾಗಿ ಜಹಾಂಗೀರನಿಗೆ ಹೇಳಿದನು. ಜಹಾಂಗೀರನು ಇವನಿಗೆ ಎರಡು ಲಕ್ಷ ರೂಪಾಯಿ ದಂಡ ವಿಧಿಸಲು, ಇವನು ಅವನಿಗೆ ಹೀಗೆಂದನು: "ಬೇಡಿ ಎಲ್ಲವನ್ನು ತೆಗೆದುಕೊ. ದಂಡವೆಂದರೆ ಒಂದು ಕವಡಿಯನ್ನೂ ಕೊಡುವದಿಲ್ಲ." ಇದರಿಂದ ಸಿಟ್ಟಿಗೆದ್ದ ಜಹಾಂಗೀರನು ಇವನಿಗೆ ದೇಹಾಂತ ಶಿಕ್ಷೆಯನ್ನು ಕೊಟ್ಟನು. ಗುರುವಿನ ಕೊಲೆಯಿಂದ ಶೀಖರು ರೊಚ್ಚಿಗೆದ್ದರು. ಅರ್ಜುನನ ಅನಂತರ ಅವನ ಮಗನಾದ **ಹರಗೋವಿಂದನು** ಗುರುಪೀಠಕ್ಕೆ ಬಂದನು. (೧೬೦೬–೧೬೪೫). "ನಾನು ಬರಿ ಧರ್ಮಗುರು ಅಲ್ಲ. ಕತ್ತಿಯನ್ನೂ ಝಳಪಿಸಬಲ್ಲೆ" ಎಂದು ಇವನು ಹೆಮ್ಮೆಪಡುತ್ತಿದ್ದನು. ಇವನು ತನ್ನ ವೀರವಾಣಿಯಿಂದ ಶೀಖರಲ್ಲಿ ಜಾಗ್ರತೆಯನ್ನು ಉಂಟುಮಾಡಿದನು. ಇವನ ತಂದೆಯ ಮೇಲಿನ ಸಿಟ್ಟಿನಿಂದ ಜಹಾಂಗೀರನು ಇವನನ್ನು ಸೆರೆಯಲ್ಲಿ ಇರಿಸಿದನು. ೧೨ ವರ್ಷ ಇವನು ಕಾರಾಗೃಹದಲ್ಲಿ ಕೊಳೆಯಬೇಕಾಯಿತು. ಮುಂದೆ ಇವನಿಗೂ ಶಾಹಜಹಾನ ಬಾದಶಾಹನಿಗೂ ತಿಕ್ಕಾಟವಾಯಿತು. ಅಮೃತಸರದ ಬಳಿಯಲ್ಲಿ ಮೊಗಲ ಸೈನ್ಯವು ಸೋಲಿಸಲ್ಪಟ್ಟಿತು. ಆದರೂ ಹರಗೋವಿಂದನು ತನ್ನ ಕೊನೆಯ ದಿನಗಳನ್ನು ಕಾಶ್ಮೀರದ ಬೆಟ್ಟಗಳಲ್ಲಿ ಕಳೆಯಬೇಕಾಯಿತು. ಇವನ ತರುವಾಯ ಗುರುಗಳಾದ **ಗುರು ಹರ** (೧೬೪೫–೧೬೬೧), **ಗುರು ಕಿಶನ** (೧೬೬೧–೧೬೬೪) ಇವರ ಕಾಲದಲ್ಲಿ ಮಹತ್ವದ ಸಂಗತಿಗಳು ನಡೆಯಲಿಲ್ಲ.

**ಗುರು ತೇಜಬಹಾದುರನು** (೧೬೬೪–೧೬೭೫) ಇವನು ಶೀಖರ ೯ ನೆಯ ಗುರು ಮತ್ತು ಹರಗೋವಿಂದನ ಕಿರಿಯ ಮಗನು.

ಇವನು ಶೀಖ ಧರ್ಮದ ಪ್ರಸಾರಕ್ಕಾಗಿ ದೇಶದಲ್ಲಿ ಸಂಚಾರ ಮಾಡಿದನು. ಪಂಜಾಬಕ್ಕೆ ಹಿಂದಿರುಗಿದ ಮೇಲೆ 'ಆನಂದಪುರ' ದಲ್ಲಿ ನೆಲೆಸಿದನು. ಆಗ ಔರಂಗಜೇಬನ ಆಜ್ಞೆಯಿಂದ ನಡೆಯುತ್ತಿದ್ದ ಬಲಾತ್ಕಾರದ ಧರ್ಮಾಂತರವನ್ನು ಪ್ರತಿಭಟಿಸಿದನು. ಬಾದಶಾಹನು ಇವನನ್ನು ಸೆರೆಹಿಡಿಸಿ ದಿಲ್ಲಿಗೆ ತರಿಸಿದನು. ಮತ್ತು ಇವನನ್ನೇ ಧರ್ಮಾಂತರಿಸಲು ಪ್ರಯತ್ನಪಟ್ಟನು. ಆದರೆ ತೇಜ ಬಹಾದುರನು ಧರ್ಮಕ್ಕಾಗಿ ತಲೆಯನ್ನು ಅರ್ಪಿಸಿದನೇ ಹೊರತು ಧರ್ಮಾಂತರಕ್ಕೆ ಒಪ್ಪಲಿಲ್ಲ. ಇವನಿಗೆ ಕ್ರೂರವಾದ ಮರಣದಂಡನೆಯಾಯಿತೆಂದು ಮುಸಲ್ಮಾನ ಇತಿಹಾಸಕಾರರ ಹೇಳಿಕೆ. ಗುರುವಿನ ಬಲಿದಾನದಿಂದ ಶೀಖರ ಕ್ಷಾತ್ರವು ಕೆರಳಿತು. ಮುಂದಿನ ಗುರುವಾದ **ಗೋವಿಂದನು** (೧೬೭೫–೧೭೦೮) ತೇಜ ಬಹಾದುರನ ಮಗನು. ಅವನು ಮಹಾಯೋಧನು. ತನ್ನ ಖಡ್ಗ ತೀರ್ಥದಿಂದ ಶೀಖರಿಗೆ 'ರಣದೀಕ್ಷೆ' ಯನ್ನು ಕೊಟ್ಟನು. ಅಂದಿನಿಂದ ಶೀಖರು (ಶಿಷ್ಯರು) ಸಿಂಗ (ಸಿಂಹ) ರಾದರು. ಮೊದಲು ಗುರುಗಳ ಪಾದೋದಕವು ಪವಿತ್ರವಿದ್ದಂತೆ ಈಗ ಅವರ ಖಡ್ಗ–ತೀರ್ಥವು ಪವಿತ್ರವಾಯಿತು. ಹೀಗೆ ದೀಕ್ಷೆ ಪಡೆದವರು 'ಖಾಲಸಾ' (ಪರಿಶುದ್ಧ) ರಾದರು. ಗುರು ಗೋವಿಂದನು ಶೀಖರಲ್ಲಿ ವಿಲಕ್ಷಣವಾದ ಉತ್ಸಾಹವನ್ನುಂಟುಮಾಡಿದನು. ಪ್ರತಿಯೊಬ್ಬ ಶೀಖನಿಗೂ ಮೈಮೇಲೆ 'ಕೇಶ' (ಉದ್ದ ಕೂದಲು), 'ಕಂಗವಾ' (ಹಣಿಗೆ) 'ಕಂಗನ್' (ಉಕ್ಕಿನ ಬಳೆ), 'ಕಛ' (ಗಿಡ್ಡ ಚೊಣ್ಣ) 'ಕಿರಪಾಣ' (ಕೃಪಾಣ-ಕಿರುಗತ್ತಿ), ಎಂಬ 'ಕ' ಕಾರ ಪಂಚಕದ ಸಂಕೇತಗಳಿರಬೇಕೆಂದು ಆಗ್ರಹಮಾಡಿದನು. ಪ್ರತಿಯೊಬ್ಬನೂ ತನ್ನ ಹೆಸರಿನ ಕೊನೆಯಲ್ಲಿ 'ಸಿಂಗ' ನೆಂಬ ಉಪಪದವನ್ನು ಹಚ್ಚುವ ಕ್ರಮವೂ ಇವನಿಂದಲೇ ಆರಂಭವಾಯಿತು. ಅಲ್ಪಕಾಲದಲ್ಲಿಯೇ ಇವನು ಅಣಿಗೊಳಿಸಿದ ಶೀಖ ಸೈನ್ಯವು ೮೦ ಸಾವಿರಕ್ಕೇರಿತು. ಔರಂಗಜೇಬನು ಈ 'ಖಾಲಸಾ' ಸೈನ್ಯದ ಮೇಲೆ ಏರಿ ಹೋದನು. ಶೀಖರೇ ಸೋತರು. ಆನಂದಪುರವು ಔರಂಗಜೇಬನ ವಶವಾಯಿತು. ಗೋವಿಂದಸಿಂಗನು ಓಡಿ ಹೋಗಿ ಕೆಲವು ಕಾಲ ಕಾಡಿನಲ್ಲಿ ಅಡಗಿದನು. ಬಾದಶಾಹನು ಇವನ ಇಬ್ಬರು ಮಕ್ಕಳನ್ನು ಸೆರೆಹಿಡಿದು ಕೊಲ್ಲಿಸಿದನು. ಮುಂದಿನ ಬಾದಶಾಹನಾದ ಬಹಾದುರಶಾಹನ ಆಳಿಕೆಯಲ್ಲಿ ಗೋವಿಂದಸಿಂಗನನ್ನು ಇವನ ಹಳೆಯ ವೈರಿಯೊಬ್ಬನು ಕೊಲೆಮಾಡಿದನು (೧೭೦೮). ಗೋವಿಂದಸಿಂಗನೇ ಶೀಖರ ಕೊನೆಯ ಗುರುವು. ಗುರು ಗೋವಿಂದಸಿಂಗನು ತನ್ನ ಮರಣಸಮಯದಲ್ಲಿ ಶೀಖರಿಗೆ ಕೆಳಗಿನಂತೆ ಉಪದೇಶ ಮಾಡಿದನು.

"ಪ್ರಿಯ ಪರಿಶುದ್ಧರೇ, ........ ಜಗತ್ತಿನಲ್ಲಿ ಎಲ್ಲವೂ ನಶ್ವರ; ದೇವರೊಬ್ಬನೇ ಶಾಶ್ವತನು. ಅವನನ್ನು ಎಂದೂ ಮರೆಯಬೇಡಿರಿ ........ ನೀವೆಲ್ಲ ಸಿಂಹರು. ಜಗತ್ತನ್ನೇ ಆಳಬಲ್ಲಿರಿ. 'ಗ್ರಂಥಸಾಹೇಬ' ವನ್ನು ನಿತ್ಯವೂ ಪಠಿಸಿರಿ. ನಾನು ಅದರಲ್ಲಿ ಇದ್ದೇ ಇರುವೆನು. ನೀವು ಇಬ್ಬರು ಕೂಡಿದಲ್ಲೂ ನಾನಿರುವೆ. ಐವರು ಕೂಡಿದಲ್ಲಿ ಪರಮಾತ್ಮನೇ ಇರುವನು."

ಮುಂದೆ, ಶೀಖರು ಭಾರತದಲ್ಲಿ ಪ್ರಬಲ ಜನಾಂಗವೆಂದು ಹೆಸರಾದರು. ಪಂಜಾಬದಲ್ಲಿ ತಮ್ಮದೇ ಆದ ರಾಜ್ಯವನ್ನು ಕಟ್ಟಿಕೊಂಡರು. ರಣಜಿತಸಿಂಗನೆಂಬವನು ಅವರ ಪ್ರಸಿದ್ಧ ಅರಸನಾಗಿಹೋದನು.

## ಅಭ್ಯಸನಗಳು

(೧) ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ :—

ಅ. ಗುರು ನಾನಕರ ತರುವಾಯ ಆಗಿಹೋದ ಗುರುಗಳಲ್ಲಿ ಅತಿ ದೀರ್ಘಕಾಲ ಗುರುಪೀಠದಲ್ಲಿ ಇದ್ದ ಗುರು ಯಾರು? ಅತಿ ಅಲ್ಪಕಾಲ ಗುರುವಾಗಿದ್ದವನು ಯಾರು?

ಆ. ಯಾವ ಗುರುವಿನ ಕಾಲದಿಂದ ಗುರುಪೀಠವು ವಂಶಪರಂಪರೆಯಾಗಿ ನಡೆಯತೊಡಗಿತು?

ಇ. ಮೊಗಲ ಬಾದಶಾಹರಿಂದ ಮರಣಕ್ಕೆ ಗುರಿಯಾದ ಗುರುಗಳು ಯಾರು ಯಾರು?

(೨) ಶೀಖರ ಪ್ರತಿಯೊಬ್ಬ ಗುರುವೂ ಮೊಗಲರ ಯಾವ ಯಾವ ಬಾದಶಾಹನ(ರ) ಆಳಿಕೆಯಲ್ಲಿ ಗುರುಪೀಠದಲ್ಲಿದ್ದನು? 'ಕೋಷ್ಟಕ' ರೂಪದಲ್ಲಿ ಉತ್ತರವನ್ನು ಬರೆಯಿರಿ.

(೩) ಕೆಳಗೆ ಕೊಟ್ಟ ಹೇಳಿಕೆಗಳು ಯಾರವು?

ಅ. "ನಾನು ಬರಿ ಧರ್ಮಗುರು ಅಲ್ಲ. ಕತ್ತಿಯನ್ನೂ ಝಳಪಿಸಬಲ್ಲೆ."

ಆ. "ಬೇಡಿ ಎಲ್ಲವನ್ನೂ ತೆಗೆದುಕೊ. ದಂಡವೆಂದರೆ ಒಂದು ಕವಡಿಯನ್ನೂ ಕೊಡುವದಿಲ್ಲ."

ಇ. "ಐವರು ಶೀಖರು ಕೂಡಿದಲ್ಲಿ ಪರಮಾತ್ಮನೇ ಇರುವನು."

(೪) 'ಗುರು ಅರ್ಜುನನ ನ್ಯಾಯವಿಚಾರಣೆ' (ಶಿಕ್ಷಕರಿಗೆ ಸೂಚನೆ :- ಇದನ್ನು ಸಂಭಾಷಣೆ ಇಲ್ಲವೆ ನಾಟ್ಯೀಕರಣಕ್ಕಾಗಿ ಉಪಯೋಗಿಸಿಕೊಳ್ಳಬಹುದು).

## ೧೨ನೆಯ ಪ್ರಕರಣ

# ಮೊಗಲ ಆಳಿಕೆಯ ಸಾಮಾನ್ಯ ಸ್ವರೂಪ ವರ್ಣನೆ

ಬಾಲಕರೇ, ನೀವು ಈಗಾಗಲೆ ಈ ಪುಸ್ತಕದಲ್ಲಿ ಮೊಗಲ ಸತ್ತೆಯ ಉದಯ, ಉತ್ಕರ್ಷ ಮತ್ತು ಅವನತಿಗಳ ಬಗೆಗೆ ಸಾಕಷ್ಟು ವಿವರಗಳನ್ನು ಕಲಿತಿರುವಿರಿ (ಪ್ರಕರಣಗಳು, ೭–೧೧). ಈಗ ಈ ಪ್ರಕರಣದಲ್ಲಿ ಮೊಗಲ ಸತ್ತೆಯ ಸಾಮಾನ್ಯ ಸ್ವರೂಪದ ವರ್ಣನೆಯನ್ನು ಕೊಡಲಾಗಿದೆ.

**ಮೊಗಲ ಬಾದಶಾಹರು ರಾಷ್ಟ್ರೀಯ ಸಮ್ರಾಟರು:—** ಮೊಗಲ ಬಾದಶಾಹರು ನಿರಂಕುಶ ಪ್ರಭುಗಳು. ಎಲ್ಲ ಅಧಿಕಾರವನ್ನೂ ತಮ್ಮ ಕೈಯಲ್ಲಿಯೇ ಇಟ್ಟುಕೊಂಡವರು. ಇವರ ಆಳಿಕೆಯಲ್ಲಿ ಕೇಂದ್ರ ಸರಕಾರವು ಬಲಿಷ್ಠವಿತ್ತು. ಸೈನ್ಯವೂ ಬಲಿಷ್ಠ. ಸೈನ್ಯಾಧಿಕಾರಿಗಳೇ ಪ್ರಾಂತಗಳ ಆಡಳಿತಗಾರರು. ಆದರೇನು, ಔರಂಗಜೇಬನ ಹೊರತಾಗಿ ಮಿಕ್ಕ ಬಾದಶಾಹರು ದಬ್ಬಾಳಿಕೆಯನ್ನು ನಡೆಸಲಿಲ್ಲ. ಸಾಮಾನ್ಯವಾಗಿ, ಹಿಂದು ಮುಸ್ಲಿಂ ಪ್ರಜೆಗಳಲ್ಲಿ ಭೇದಭಾವಗಳನ್ನು ತೋರಿಸಲಿಲ್ಲ. ಒತ್ತಾಯದಿಂದ ಹಿಂದುಗಳನ್ನು ಧರ್ಮಾಂತರಗೊಳಿಸಲಿಲ್ಲ. ಆಡಳಿತದಲ್ಲಿ ಎಲ್ಲರಿಗೂ ಸಮವಾದ ನ್ಯಾಯದಾನ, ಸರಿಸಮಾನವಾದ ಹುದ್ದೆಗಳು ದೊರೆತವು. ಕೆಲವು ಬಾದಶಾಹರಂತೂ ಭಾರತೀಯರೊಂದಿಗೆ ವಿವಾಹಸಂಬಂಧ ಬೆಳೆಸಿದರು. ಭಾರತೀಯರನ್ನು ಮಮತೆಯಿಂದ ಗೌರವಿಸಿದರು. ಭಾರತೀಯರು ಮೊಗಲಬಾದಶಾಹರನ್ನು ತಮ್ಮವರೆಂಬ ಅಭಿಮಾನದಿಂದ ನೋಡಿದರು. ಸಾಮ್ರಾಜ್ಯದಲ್ಲೆಲ್ಲ ಒಂದೇ ಮಾದರಿಯ ಆಡಳಿತ, ಒಂದೇ ತರಹದ ನಾಣ್ಯಗಳು, ಒಂದೇ ರೀತಿಯ ನಡೆನುಡಿಗಳು ತಲೆಯೆತ್ತಿದವು. ಹೀಗೆ ಮೊಗಲ ಬಾದಶಾಹರು ರಾಷ್ಟ್ರೀಯ ಸಮ್ರಾಟರಾದರು.

**ದರಬಾರದ ವೈಭವ:—** ಮೊಗಲ ಸಮ್ರಾಟರು ವೈಭವಶಾಲಿಗಳು, ವಿಲಾಸಪ್ರಿಯರು, ಕಲಾಪ್ರೇಮಿಗಳು. ರಾಜಮನೆತನದ ಸ್ತ್ರೀಯರು ಸುಸಂಸ್ಕೃತರು, ಸೌಂದರ್ಯ ಪ್ರೇಮಿಗಳು, ವಿದುಷಿಯರು, ಕವಯಿತ್ರಿಗಳು. ಈ ಮಾಲಿಕೆಯಲ್ಲಿ ಔರಂಗಜೇಬನ ಮಗಳಾದ ಜೆಬುನ್ನಿಸಾ ಕೊನೆಯವಳು.

ಆಸ್ಥಾನದಲ್ಲಿ ಬಾದಶಾಹರ ವೈಭವಪ್ರೀತಿ, ರಸಿಕತೆ ಮುಂತಾದವು ಒಡೆದು ಕಾಣುತ್ತಿದ್ದವು. ಅಲ್ಲಿ ಅವರ ಸಂಭಾಷಣೆಯಲ್ಲಿ ನಯವಿನಯ (ಶಿಷ್ಟಾಚಾರ) ಗಳಿದ್ದವು. ಅವರ ಉಡಿಗೆತೊಡಿಗೆಗಳಲ್ಲಿ ಸಡಗರವಿತ್ತು. ಇವು ಅವರ ಸರದಾರರ

ಮೇಲೂ ತುಸುಮಟ್ಟಿಗೆ ಜನಸಾಮಾನ್ಯರ ಮೇಲೂ ತಮ್ಮ ಪ್ರಭಾವವನ್ನು ಬೀರಿದವು. ಯುದ್ಧಕ್ಕೆ ಹೊರಡುವಾಗ ಬಾದಶಾಹರು ತಮ್ಮ ಎಲ್ಲ ಪರಿವಾರ ಸಮೇತರಾಗಿ ಹೊರಡುತ್ತಿದ್ದರು. ಅರಮನೆಯೇ ಅವರ ಜೊತೆಗೆ ಹೊರಟಂತೆ ತೋರುತ್ತಿತ್ತು!



ಜೆಬುನ್ನಿಸಾ

**ಸಮಾಜ:–** ಆಗಿನ ಸಮಾಜದಲ್ಲಿ ಸರದಾರರು ಮೇಲ್ದರ್ಜೆಯುವರು. ಅವರೆಲ್ಲರೂ ಶ್ರೀಮಂತರು. ತಮ್ಮ ಜೀವನದ ರೀತಿನೀತಿಗಳಲ್ಲಿ—ವೇಷ ಭೂಷಣ, ನಡೆನುಡಿ, ಆಹಾರ ವಿಹಾರಗಳಲ್ಲಿ–ಬಾದಶಾಹನ ರೀತಿ ಯನ್ನೇ ಅನುಕರಿಸುತ್ತಿದ್ದರು. ತಮ್ಮ ಐಶ್ವರ್ಯವನ್ನು ಭೋಗವಿಲಾಸಗಳಲ್ಲಿ ಸೂರೆಮಾಡುತ್ತಿದ್ದರು. ಏಕೆಂದರೆ, ಆಗ ಸರದಾರರ ಮರಣದ ಬಳಿಕ ಅವರ ಐಶ್ವರ್ಯವು ಬಾದಶಾಹನ ಕೈಸೇರುವ ರೂಢಿಯಿತ್ತು! ಸರದಾರರ ವಿಶೇಷ ಮನರಂಜನೆಯ ಸಾಧನಗಳೆಂದರೆ, ಬೇಟೆ, ಪೋಲೋ ಆಟ (ಕುದುರೆಯ ಮೇಲೆ ಕುಳಿತು ಆಡುವ ಚಂಡಿನಾಟ), ಆನೆಗಳ ಕಾದಾಟಗಳ ನಿರೀಕ್ಷಣೆ. ಆದರೆ ಬರಬರುತ್ತ ಸರದಾರರು ಕೇವಲ ವಿಲಾಸಿಗಳಾದರು. ರಣರಂಗಕ್ಕೆ ಹೋಗಲು ಅವರಿಗೆ ಪಲ್ಲಕ್ಕಿಗಳು ಬೇಕಾದವು! ಹಿಂದು ಸರದಾರರ ಕುಟುಂಬ ಜೀವನದಲ್ಲಿ ಮೊಗಲ ಸಂಸ್ಕೃತಿಯು ತನ್ನ ಪ್ರಭಾವವನ್ನು ಬೀರಿತು. ಗಂಡಸರೂ ಹೆಂಗಸರೂ ಮೊಗಲರಂತೆಯೇ ಉಡುಪುಗಳನ್ನು ಧರಿಸತೊಡಗಿದರು. 'ಪಲಾವು' 'ಬಿರಿಯಾನಿ' ಗಳು ಇವರ ಪ್ರೀತಿಯ ಪಕ್ವಾನ್ನಗಳಾದವು. ಇಂದಿಗೂ 'ಜಹಾಂಗೀರ ಕಬಾಬ' 'ಶಹಾ ಜಹಾನೀ ಪಿಲಾವು' ಗಳು ಹಲವು ಹಿಂದುಗಳ ರುಚಿಕರ ಭಕ್ಷ್ಯಗಳು! ಜನ ಸಾಮಾನ್ಯರಿಗೆ ವೈಭವ ವಿಲಾಸಗಳು ಇರಲಿಲ್ಲವಾದರೂ ಅವರಿಗೆ ಸುಖ-ಶಾಂತಿ ಗಳ ಕೊರತೆ ಇರಲಿಲ್ಲ. ಅವರಲ್ಲೂ 'ಪೈಜಾಮಾ' 'ಚಪಕನ'(ಉದ್ದ ಕೋಟು) ಮೆಲ್ಲಮೆಲ್ಲನೆ ಪ್ರಚಾರದಲ್ಲಿ ಬಂದವು 'ಹುಕ್ಕಾ' (ಗುಡುಗುಡಿ) ಸೇದುವದು

ರೂಢಿಯಾಯಿತು. ನಾಡಿನಲ್ಲಿ ತಂಬಾಕದ ಚಟವು ಜಹಾಂಗೀರನ ಕಾಲದಲ್ಲಿ ಆರಂಭವಾಯಿತು. ಹುಂಜ, ಟಗರುಗಳ ಕಾದಾಟವನ್ನು ನೋಡುವದೆಂದರೆ, ಆಗಿನ ಜನಸಾಮಾನ್ಯರಿಗೆ ಬಲುಪ್ರೀತಿ. ವಸಂತೋತ್ಸವ, ದಸರೆ, ಹೋಳೀಹಬ್ಬ ಗಳಲ್ಲಿ ಮುಸಲ್ಮಾನರೂ ಮೊಹರಂ ಹಬ್ಬದಲ್ಲಿ ಹಿಂದುಗಳೂ ಭಾಗವಹಿಸ ತೊಡಗಿದರು. ಫಾರ್ಸೀ ಭಾಷೆಯು ರಾಜಭಾಷೆಯಾದರೂ ಉರ್ದು ಭಾಷೆಯು ಜನಭಾಷೆಯಾಗಿತ್ತು.

**ವ್ಯಾಪಾರ–ಉದ್ಯೋಗಗಳು :—** ಆ ಕಾಲದಲ್ಲಿ ಭಾರತವು ಕೈಗಾರಿಕೆ ಗಳಲ್ಲಿ ಮುಂದುವರೆದ ರಾಷ್ಟ್ರವಾಗಿತ್ತು. ಬಂಗಾಲದ ರೇಶಿಮೆಯ ಬಟ್ಟೆ, ಕಾಶಿಯ ಜರದ ಪೀತಾಂಬರ, ಡಾಕಾದ ಮಲಮಲ್ಲು, ಕಾಶ್ಮೀರದ ಶಾಲು ರತ್ನ ಗಂಬಳಿಗಳು, ಗುಜರಾತದ ಕಿನ್ಖಾಪು (ಜರತಾರಿಯಿಂದ ಉಬ್ಬು-ಚಿತ್ರಗಳನ್ನು ನೆಯ್ದ ವಸ್ತ್ರ) ಇವು ಹೆಸರಾಗಿದ್ದವು. ಅಲ್ಲದೆ, ಇಲ್ಲಿಯ ಹಸ್ತಿದಂತ, ಚಂದನಗಳಲ್ಲಿ ಕೊರೆದ ಸುಂದರ ಮೂರ್ತಿಗಳು, ಸ್ತ್ರೀಯರ ಅಲಂಕಾರ-ಪೆಟ್ಟಿಗೆಗಳು, ಮುತ್ತು ರತ್ನಗಳ ಆಭರಣಗಳು ಎಲ್ಲ ದೇಶದವರಿಗೂ ಪ್ರಿಯವಾಗಿದ್ದವು. ಭಾರತವು ಆ ಕಾಲದಲ್ಲಿ ದೂರದೂರದ ದೇಶಗಳೊಡನೆ ವ್ಯಾಪಾರವನ್ನು ಭರದಿಂದ ನಡೆ ಸಿತ್ತು. ಸುರತ್ತ, ಖಂಬಾಯತ, ಚಿತ್ತಗಾಂಗಗಳು ಭಾರತದ ವಿದೇಶೀವ್ಯಾಪಾರದ ಮುಖ್ಯ ಬಂದರಗಳಾಗಿದ್ದವು. ಇಲ್ಲಿಂದ ಪರದೇಶಗಳಿಗೆ ಹೋಗುತ್ತಿದ್ದ ಮುಖ್ಯ ವಸ್ತುಗಳು-ಮೇಲೆ ಹೇಳಿದ ಕೈಗಾರಿಕೆಯ ವಸ್ತುಗಳು, ಮಸಾಲೆಯ ಸಾಮಾನು ಗಳು, ಗಿಡಮೂಲಿಕೆಗಳು, ನೀಲಿ, ಅಫೀಮು ಮುಂತಾದವು. ಪರದೇಶಗಳಿಂದ ನಮ್ಮ ದೇಶಕ್ಕೆ ಚಿನ್ನ, ಬೆಳ್ಳಿ, ವಜ್ರ, ಹವಳ, ಸುಗುಂಧ ದ್ರವ್ಯಗಳು, ಚೀನಿ ಪಾತ್ರೆಗಳು, ಕುದುರೆ ಮುಂತಾದವು ಬರುತ್ತಿದ್ದವು. ಬಾದಶಾಹರು ವ್ಯಾಪಾರ ಕ್ಕಾಗಿ ಎಲ್ಲ ಅನುಕೂಲತೆಗಳನ್ನು ಒದಗಿಸಿದ್ದರು. ವ್ಯಾಪಾರದಿಂದ ಭಾರತದ ಸಂಪತ್ತು ಬೆಳೆಯಿತು.

**ಶಿಕ್ಷಣ :—** ಮೊಗಲರ ಆಳಿಕೆಯಲ್ಲಿ ಸರಕಾರಿ ಶಾಲೆಗಳಿರಲಿಲ್ಲ. ಆದರೆ ಮುಸಲ್ಮಾನರಿಗಾಗಿ ಮಸೀದೆಗಳಲ್ಲಿ ಪ್ರಾಥಮಿಕ ಶಾಲೆಗಳಿದ್ದವು. ಅವುಗಳಿಗೆ ಸರಕಾರದಿಂದ ಧನಸಹಾಯ ಸಿಗುತ್ತಿತ್ತು. ಪ್ರಾಥಮಿಕ ಶಾಲೆಗಳಲ್ಲಿ ಉರ್ದು ಭಾಷೆ ಹಾಗು ಜಮಾಖರ್ಚುಗಳು ಶಿಕ್ಷಣದ ವಿಷಯಗಳಾಗಿದ್ದವು. ಅಕಬರನು ಕೆಲವು ಉಚ್ಚ ಶಿಕ್ಷಣಾಲಯಗಳನ್ನು ಏರ್ಪಡಿಸಿದನು. ಅವುಗಳಲ್ಲಿ ಕುರಾನ ಮತ್ತು ಅರಬೀ ಫಾರ್ಸೀ ಭಾಷೆಗಳನ್ನು ಕಲಿಸಲಾಗುತ್ತಿತ್ತು. ಈ ಶಾಲೆಗಳಲ್ಲಿ



ಗೋಲಗುಮ್ಮಟ



ಜಾಮ್ಮಾ ಮಸೀದೆ

ಶಿಕ್ಷಣ ಪಡೆಯಲು ಹಿಂದುಗಳಿಗೂ ಅವಕಾಶವಿತ್ತು. ಆದರೆ ಹಿಂದು ಪಾಠ ಶಾಲೆಗಳಿಗೆ ಸರಕಾರದಿಂದ ಧನಸಹಾಯವಿದ್ದಂತೆ ತೋರುವದಿಲ್ಲ. ಆದರೂ ಕಾಶೀ ಪಟ್ಟಣವು ಹಿಂದು ವಿದ್ಯೆ ಸಂಸ್ಕೃತಿಗಳ ಕೇಂದ್ರವಾಗಿತ್ತು. ಅಲ್ಲಿಯ ಘನವಿದ್ವಾಂಸರ ಪ್ರಭಾವದಿಂದ ಹಿಂದು ವಿದ್ಯೆ ಸಂಸ್ಕೃತಿಗಳ ಪುನರುಜ್ಜೀವನ ವಾಯಿತು.

**ಸಾಹಿತ್ಯ, ಲಲಿತಕಲೆಗಳು :—** ಸಾಹಿತ್ಯ : ಮೊಗಲರ ಕಾಲದಲ್ಲಿ ಫಾರ್ಸೀ, ಹಿಂದೀ, ಸಂಸ್ಕೃತ ಭಾಷೆಗಳಿಗೆ ಪ್ರೋತ್ಸಾಹವು ದೊರೆಯಿತು. ಅಕಬರನ ಕಾಲದಲ್ಲಿ ಸಂಸ್ಕೃತದಲ್ಲಿಯ ರಾಮಾಯಣ, ಮಹಾಭಾರತ, ಅಥರ್ವ ವೇದ, ಲೀಲಾವತಿ (ಭಾಸ್ಕರಾಚಾರ್ಯರ ಗಣಿತಗ್ರಂಥ) ಇವುಗಳನ್ನು ಫಾರ್ಸೀ ಭಾಷೆಗೆ ತರ್ಜುಮೆ ಮಾಡಲಾಯಿತು. ತೋಡರಮಲ್ಲನು ಹಿಂದು ಧರ್ಮಶಾಸ್ತ್ರ ವನ್ನು ಫಾರ್ಸೀ ಭಾಷೆಗೆ ಭಾಷಾಂತರಿಸಿದನು. ಖುಸ್ರು ಮತ್ತು ದಾರಾ ಇವರಿಗೆ ಸಂಸ್ಕೃತದಲ್ಲಿ ಪಾಂಡಿತ್ಯವಿತ್ತು. ದಾರಾನು ಉಪನಿಷತ್ತುಗಳನ್ನೂ ಭಗವದ್ಗೀತೆ ಯನ್ನೂ ಫಾರ್ಸೀ ಭಾಷೆಗೆ ತರ್ಜುಮೆ ಮಾಡಿದನು.

ಬೀರಬಲ್ಲ, ಭಗವಾನದಾಸ, ಮಾನಸಿಂಗ ಇವರು ಹಿಂದೀಕವಿಗಳೆಂದು ಹೆಸರಾದರು. ತುಳಸೀದಾಸನು ಹಿಂದೀ ಭಾಷೆಯಲ್ಲಿ ರಾಮಾಯಣವನ್ನು ರಚಿಸಿ ಅಮರನಾಗಿರುವನು.

ಜಗನ್ನಾಥ ಪಂಡಿತನು ಶಾಹಜಹಾನನ ಆಸ್ಥಾನ ಕವಿಯು. ಅವನು ಸಂಸ್ಕೃತದಲ್ಲಿ ಉತ್ತಮ ಕಾವ್ಯಗಳನ್ನು ರಚಿಸಿದ್ದಾನೆ.

**ವಾಸ್ತುಶಿಲ್ಪ :—** ದಿಲ್ಲಿಯ ಪಠಾಣ ಸುಲ್ತಾನರ ವಾಸ್ತುಶಿಲ್ಪದಲ್ಲಿ ಹಿಂದು ಮುಸ್ಲಿಂ ಶೈಲಿಗಳು ಸಮ್ಮಿಶ್ರವಾಗತೊಡಗಿದ್ದವಷ್ಟೆ. ಮೊಗಲ ಬಾದ ಶಾಹರ ವಾಸ್ತುಶಿಲ್ಪದಲ್ಲಿ ಈ ಸಮ್ಮಿಶ್ರಣವು ಪರಿಪೂರ್ಣತೆಯನ್ನು ಹೊಂದಿತು. ಶೇರಶಹ, ಹುಮಾಯೂನ, ಅಕಬರ ಬಾದಶಾಹರ ಗೋರಿಗಳು ಇದರ ಉದಾ ಹರಣೆಗಳಾಗಿವೆ. ದಕ್ಷಿಣದಲ್ಲಿ ಆದಿಲಶಾಹೀ ರಾಜ್ಯವಾಗಿದ್ದ ವಿಜಾಪುರದಲ್ಲಿಯ ಇಬ್ರಾಹಿಮ ರೋಜಾ, ಗೋಳಗುಮುಟ ಇವಾದರೂ ಅದೇ ಮಾದರಿಯ ಪ್ರಸಿದ್ಧ ಕಟ್ಟಡಗಳು. ತಾಜಮಹಲು ಅತಿ ಶ್ರೇಷ್ಠವಾದ ಮಾದರಿ. ದಿಲ್ಲಿ ಯಲ್ಲಿಯ ಜುಮ್ಮಾಮಸೀದೆ, ಆಗ್ರಾದಲ್ಲಿಯ ಮೋತೀ ಮಸೀದೆ, ದಿವಾನ–ಇ– ಖಾಸ ಎಂಬ ಅರಮನೆ ಇವು ಮೊಗಲ ವೈಭವದ ಉತ್ಕೃಷ್ಟ ಉದಾಹರಣೆಗಳು.

ಪತಿಭಕ್ತಳು, ಪರೋಪಕಾರ ಬುದ್ಧಿಯುವಳು. ಮಕ್ಕಳಿಲ್ಲದ ಚಿಂತೆಯಿಂದ ಆಕೆಯು ನಂದೀಶ್ವರ ವ್ರತಾಚರಣೆಯನ್ನು ನಡೆಸಿದಳು. ಆತನ ವರಪ್ರಸಾದದಿಂದ ಆಕೆಗೆ ಒಂದು ಗಂಡುಮಗು ಜನಿಸಿತು. ಆಗ ಜಾತವೇದ ಮುನಿಗಳೆಂಬವರು ಆ ಮಗುವಿಗೆ 'ಲಿಂಗದೀಕ್ಷೆ' ಯನ್ನು ಕೊಟ್ಟರು. ಮಗುವಿಗೆ 'ಬಸವ' ನೆಂದು ಹೆಸರಿಡಲಾಯಿತು. (ಇವನೇ ಮುಂದೆ ಬಸವೇಶ್ವರರೆಂದು ಕೀರ್ತಿ ಪಡೆದನು). ಎಳೆಯತನದಲ್ಲಿಯೇ ಬಸವನು ಶಿವನಲ್ಲಿ ಭಕ್ತಿಯುಳ್ಳವನಾದನು. ಬಾಲ್ಯದಲ್ಲಿಯೇ ಅಗಾಧ ಪಾಂಡಿತ್ಯ ಗಳಿಸಿದನು. ಎಂಟು ವರ್ಷದವನಾದಾಗ ಬಸವಣ್ಣನ ತಂದೆತಾಯಿಗಳು ಅವನ ಮುಂಜಿಯ (ಉಪನಯನದ) ಪದ್ಧತಿಯನ್ನು ಮಾಡಿದರು. ಆದರೆ ಬಸವಣ್ಣನಿಗೆ ಅದೊಂದು ಆ ಕಾಲದ ವೈದಿಕ ಧರ್ಮದವರ 'ಬಾಹ್ಯಾಡಂಬರ' (ಹುರುಳಿಲ್ಲದ ಆಚರಣೆ) ವೆನಿಸಿತು. ಆದುದರಿಂದ ಅವನು ಅದಕ್ಕೆ ಒಪ್ಪಲಿಲ್ಲ. ತಂದೆತಾಯಿಗಳಾದರೊ, ಹೆಚ್ಚು ಆಗ್ರಹ ಮಾಡಹತ್ತಿದರು. ಆದುದರಿಂದ ಅದೇ ರಾತ್ರಿಯಲ್ಲಿ ಬಸವಣ್ಣನು ಮನೆಬಿಟ್ಟು ಹೊರಟನು. 'ಸಂಗಮಕ್ಷೇತ್ರ'[೧] ಕ್ಕೆ ಹೋಗಿ ತಲುಪಿದನು. ಅಲ್ಲಿಯೇ ಜಾತವೇದಮುನಿಗಳ ಆಶ್ರಮವಿತ್ತು. ಅವರೇ ಬಸವಣ್ಣನ ಗುರುಗಳಾದರು. ಅವರ ಉಪದೇಶದಿಂದ ಬಸವಣ್ಣನು ಸಂಗಮೇಶ್ವರನ ಆರಾಧನೆಯಲ್ಲಿ ತೊಡಗಿದನು. ಆತನ ಸಹವಾಸದಲ್ಲಿ ಕಾಲಕಳೆದನು.

**ಬಿಜ್ಜಳನ ಮಂತ್ರಿಯಾದರು :—** ಆಗ ಕಲ್ಯಾಣ ಪಟ್ಟಣದಲ್ಲಿ ಕಲಚೂರಿ ಮನೆತನದ ಬಿಜ್ಜಳನೆಂಬ ಅರಸನು ರಾಜ್ಯವಾಳುತ್ತಿದ್ದನು. ಆತನ ಮಂತ್ರಿಯು ಬಲದೇವನೆಂಬ ಆರಾಧ್ಯ ಬ್ರಾಹ್ಮಣನು. ಅವನು ಬಸವಣ್ಣನ ಸೋದರಮಾವನು. ತನ್ನ ಮಗಳಾದ ಗಂಗಾಂಬಿಕೆಯನ್ನು ಬಸವಣ್ಣನಿಗೆ ಮದುವೆ ಮಾಡಿಕೊಟ್ಟನು. ಬಿಜ್ಜಳನ ರಾಜ್ಯದಲ್ಲಿ ಬಸವಣ್ಣನು ಮೊದಲಿಗೆ ಹಿರಿಯ ಕರಣಿಕ (ಲೆಕ್ಕಪತ್ರಬರೆಯುವವ) ನಾದನು. ಅವನು ತನ್ನ ಚೊಕ್ಕ ರೀತಿಯ ಕೆಲಸದಿಂದ ಅರಸನ ನಂಬಿಕೆಯನ್ನು ಗಳಿಸಿದನು. ಬಲದೇವನ ಮರಣದಬಳಿಕ ಬಿಜ್ಜಳನು ಬಸವಣ್ಣನನ್ನೇ ಮಂತ್ರಿಯನ್ನಾಗಿ ಮಾಡಿ

---

೧. 'ಸಂಗಮ' ಇದು ಕೃಷ್ಣಾ ಮತ್ತು ಮಲಾಪಹಾರಿ ನದಿಗಳು ಒಂದನ್ನೊಂದು ಕೂಡುವ ಸ್ಥಳ. ಇದು ವಿಜಾಪುರಜಿಲ್ಲೆಯಲ್ಲಿದೆ. ಸಂಗಮಕ್ಕೆ ಕನ್ನಡ ಭಾಷೆಯಲ್ಲಿ 'ಕೂಡಲ' ಎನ್ನುವರು. ಸಂಗಮದಲ್ಲಿಯ ಈಶ್ವರನಿಗೆ ಸಂಗಮೇಶ್ವರ, ಕೂಡಲಸಂಗಮನಾಥ ಮುಂತಾಗಿ ಹೆಸರುಗಳು ರೂಢಿಯಲ್ಲಿವೆ.

ಕೊಂಡನು. ಸಿದ್ಧರಸನೆಂಬ ದಂಡನಾಯಕನು ತನ್ನ ಮಗಳಾದ ನೀಲಾಂಬಿಕೆಯನ್ನು ಬಸವಣ್ಣನವರಿಗೆ ಕೊಟ್ಟು ಮದುವೆಮಾಡಿದನು.

**ಮಂತ್ರಿತನ ಮತ್ತು ಮತಪ್ರಸಾರ:**— ಬಸವಣ್ಣನವರು ರಾಜ್ಯಕಾರ್ಯಗಳನ್ನು ದಕ್ಷತೆಯಿಂದ ಸಾಗಿಸುತ್ತ ಮನೆಯಲ್ಲಿ ಶಿವಶರಣರ ಸೇವೆಯನ್ನು ನಡೆಯಿಸಿದರು. ರಾಜ್ಯವು ಘನತೆಗೇರಿತು. ಅವರ ಮನೆಯು ಶಿವಶರಣರ ಬೀಡಾಯಿತು. ಸಮಾಜೋದ್ಧಾರ ಕಾರ್ಯದಲ್ಲಿ ಬಸವಣ್ಣನವರಿಗೆ ಅವರ ಹೆಂಡಂದಿರೂ ಸೋದರಳಿಯನಾದ ಚೆನ್ನಬಸವಣ್ಣನೂ ಸಹಾಯ ಮಾಡಿದರು. ಅವರ ಕೀರ್ತಿಯು ಎಂಟು ದಿಕ್ಕಿಗೂ ಹಬ್ಬಿತು. ಬನವಾಸಿಯಿಂದ **ಅಲ್ಲಮಪ್ರಭು,** ಉಡುತಡಿ (ಮೈಸೂರ ರಾಜ್ಯದಲ್ಲಿ) ಯಿಂದ **ಅಕ್ಕಮಹಾದೇವಿ,** ಸೊಲ್ಲಾಪುರದಿಂದ **ಸಿದ್ಧರಾಮೇಶ್ವರ,** ಸೌರಾಷ್ಟ್ರದಿಂದ **ಆದಯ್ಯ,** ಕಾಶ್ಮೀರದಿಂದ **ಮಾದಯ್ಯ** ಇವರು ಕಲ್ಯಾಣಕ್ಕೆ ಬಂದರು. ದೂರದೂರದ ಹಳ್ಳಿಗಳಿಂದ ಮಡಿವಳ ಮಾಚಯ್ಯ, ಅಂಬಿಗರ ಚೌಡಯ್ಯ, ಮಾದರ ಚೆನ್ನಯ್ಯ, ಡೋಹರ ಕಕ್ಕಯ್ಯ ಎಂಬ ನೂರಾರು ಶಿವಭಕ್ತರೂ ಕಲ್ಯಾಣಕ್ಕೆ ಬಂದು ನೆಲೆಸಿದರು. ಕಲ್ಯಾಣವು ಭಕ್ತಿ ಜ್ಞಾನ ವೈರಾಗ್ಯಗಳ ಬೀಡಾಯಿತು. ಅಲ್ಲಮಪ್ರಭುವಿನ ಹಿರಿತನದಲ್ಲಿ 'ಶಿವಾನುಭವ ಮಂಟಪ' ವೆಂಬ ಧರ್ಮಸಂಸ್ಥೆಯು ತಲೆಯೆತ್ತಿತು. ದಿನದಿನಕ್ಕೆ ಈ ಶಿವಶರಣ ಶರಣೆಯರ ತತ್ತ್ವಗಳು ಎಲ್ಲರಲ್ಲೂ—ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಜಾತಿಗಳ ಗಂಡಸರಲ್ಲೂ ಹೆಂಗಸರಲ್ಲೂ—ಹರಡತೊಡಗಿದವು. ಪ್ರಾಚೀನ ಧರ್ಮಗಳ ಅಭಿಮಾನಿಗಳು ಇದನ್ನು ಸಹಿಸದಾದರು. ಬಸವಣ್ಣನವರು ಕುಲಗೋತ್ರಗಳನ್ನು ಲೆಕ್ಕಿಸದೆ ಸಿಕ್ಕಸಿಕ್ಕವರನ್ನು ಶಿವಭಕ್ತರೆಂದು ಕರೆಯುತ್ತಿರುರೆಂದು ಅವರು ದೊರೆಯಲ್ಲಿ ದೂರಿಕೊಂಡರು. ಬಸವಣ್ಣನವರ ಮೇಲೆ ವರ್ಣಸಂಕರ (ಜಾತಿಮಿಶ್ರಣ), ಜೊತೆಗೆ ರಾಜಬೊಕ್ಕಸ-ಸೂರೆ ಈ ಅಪವಾದಗಳು ಬಂದವು! ಬಸವಣ್ಣನವರು ಅವೆಲ್ಲವನ್ನು ಸಪ್ರಮಾಣವಾಗಿ ಅಲ್ಲಗಳೆದರು.

**ಕೂಡಲ ಸಂಗಮನಲ್ಲಿ ಬೆರೆತು ಒಂದಾದರು:**— ಅದೇ ಸಮಯಕ್ಕೆ ಕಲ್ಯಾಣದಲ್ಲಿದ್ದ ಹರಳಯ್ಯ, ಮಧುವಯ್ಯರೆಂಬ ಶಿವಶರಣರಲ್ಲಿ ಬೀಗತನವಾಯಿತು. ಅವರು ಅನುಕ್ರಮವಾಗಿ ಮಾದಿಗ ಮತ್ತು ಬ್ರಾಹ್ಮಣ ಕುಲದವರು. ಇದರಿಂದ ಪ್ರಾಚೀನ–ಧರ್ಮಾಭಿಮಾನಿಗಳು ಮತ್ತಿಷ್ಟು ಕೆರಳಿದರು. ಅವರ ಮಾತಿಗೆ ಕಿವಿಗೊಟ್ಟು ಬಿಜ್ಜಳನು ಹರಳಯ್ಯ, ಮಧುವಯ್ಯರ ಕಣ್ಣು

ಕೀಳಿಸಿದನು. ಬಸವಣ್ಣನವರ ಧರ್ಮಪ್ರಸಾರದ ರೀತಿಯನ್ನು ಆಕ್ಷೇಪಿಸತೊಡ ಗಿದನು. ಕೂಡಲೆ, ಬಸವಣ್ಣನವರು ಕಲ್ಯಾಣ ಪಟ್ಟಣವನ್ನು ಬಿಟ್ಟು ಹೊರ ಬಿದ್ದರು. ಕೂಡಲ ಸಂಗಮನಾಥನಲ್ಲಿಗೆ ದೀನರಾಗಿ ಧಾವಿಸಿಬಂದರು. ಅವ ನಲ್ಲಿಯೇ ಐಕ್ಯರಾದರು.

**ವೀರಶೈವ ಧರ್ಮದ ಮುಖ್ಯ ತತ್ತ್ವಗಳು:—** ಬಸವೇಶ್ವರರ ವೀರ ಶೈವ ಮತದ ಮುಖ್ಯ ತತ್ತ್ವಗಳು ಕೆಳಗಿನಂತಿವೆ: ಪರಮಾತ್ಮನು ಹುಟ್ಟಿಸು ವಾಗ ಯಾರನ್ನೂ ಮೇಲು-ಕೀಳೆಂದು ಹುಟ್ಟಿಸಿಲ್ಲ. ಸತ್ಯ, ಸದಾಚಾರ, ನೀತಿ, ಶಿವಭಕ್ತಿ ಇವೇ ಮಾನವನ ಮೇಲ್ಮೆಗೆ ಕಾರಣ; ಇವು ಇಲ್ಲದಿರುವದೇ ಕೀಳ್ಮೆ. ಲಿಂಗಧಾರಿಗಳಲ್ಲಿ ಜಾತಿಭೇದವಿಲ್ಲ. 'ಸೂತಕ' ಗಳಿಲ್ಲ (ಜಾತಿಸೂತಕ, ಜನನ ಸೂತಕ, ಮರಣಸೂತಕ ಮುಂತಾದ ಐದು ಸೂತಕಗಳು). ಹೊಟ್ಟೆಗಾಗಿ ಎಲ್ಲರೂ ಯಾವದಾದರೊಂದು ಕಾಯಕ (ಉದ್ಯೋಗ) ವನ್ನು ಕೈಕೊಳ್ಳ ಬೇಕು. ಯಾವ ಕಾಯಕವೂ ಕೀಳಲ್ಲ. ಜಂಗಮರು ದೇವನ ಭಕ್ತರು. ಗುರು ಲಿಂಗ ಜಂಗಮರಲ್ಲಿ ಭೇದವಿಲ್ಲ. ಸದಾಚಾರಿಗಳೇ ಮೇಲು-ಕುಲದವರು, ದುರಾಚಾರಿಗಳೇ ಕೀಳು-ಕುಲದವರು.

ವೀರಶೈವರಲ್ಲಿ ಲಿಂಗದೀಕ್ಷೆ, ಮದುವೆ, ಅಂತ್ಯವಿಧಿಗಳೆಂಬ ಮೂರು ಸಂಸ್ಕಾರಗಳುಂಟು. ಇವುಗಳಲ್ಲಿ ಗುರುಗಳದೇ ಮುಖ್ಯ ಪಾತ್ರ. ಇವು ವಿಶಿಷ್ಟ ಪದ್ಧತಿಯಿಂದ ನಡೆಯುವವು. ವೀರಶೈವರು ಮೃತರ ಶರೀರಗಳನ್ನು ಸುಡು ವದಿಲ್ಲ, ಹುಗಿಯುವರು.

ವೀರಶೈವ ಧರ್ಮಾಚರಣೆಯಲ್ಲಿ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ರುದ್ರಾಕ್ಷಿ, ಮಂತ್ರ ಇವು ಅಗತ್ಯ. ಶಿವಪೂಜೆ, ಶಿವಮಂತ್ರಪಠಣ, ಶಿವಧ್ಯಾನ, ಶಿವಸ್ವರೂಪಜ್ಞಾನ, ಶಿವಕಾರ್ಯಾಸಕ್ತಿ ಇವು ವೀರಶೈವರ ಆಚಾರ ಗಳು (ಪಂಚಯಜ್ಞಗಳು, ಪಂಚಾಚಾರಗಳು).

**ಮಧ್ವಾಚಾರ್ಯರು** (೧೧೯೯—೧೨೭೮).

**ಬಾಲ್ಯ ಮತ್ತು ವಿದ್ಯಾಭ್ಯಾಸ:—** ಮಧ್ವಾಚಾರ್ಯರು ಮಂಗಳೂರ ಜಿಲ್ಹೆಯ ಉಡುಪಿಯ ಹತ್ತಿರ 'ಪಾಜಕ' ವೆಂಬ ಕ್ಷೇತ್ರದಲ್ಲಿ ಜನಿಸಿದರು. ಇವರ ತಂದೆಯ ಹೆಸರು ಮಧ್ಯಗೇಹಭಟ್ಟ. ತಾಯಿಯ ಹೆಸರು ವೇದವತಿ. ಅವರು ಸ್ಮಾರ್ತ (ಭಾಗವತ ಸಂಪ್ರದಾಯದ) ಬ್ರಾಹ್ಮಣರು. ಸತಿಪತಿಗಳಿಬ್ಬರೂ ದೈವಭಕ್ತರು, ಧರ್ಮನಿಷ್ಠರು, ಸದಾಚಾರಶೀಲರು. ಉಡುಪಿಯ ಅನಂತೇಶ್ವರನ

ವರಪ್ರಸಾದದಿಂದ ಅವರಿಗೆ ಒಂದು ಗಂಡುಮಗು ಜನಿಸಿತು. ಅವರು ಮಗುವಿಗೆ 'ವಾಸುದೇವ' ನೆಂದು ನಾಮಕರಣ ಮಾಡಿದರು. (ಈ ವಾಸುದೇವನೇ ಮುಂದೆ ಮಧ್ವಾಚಾರ್ಯರೆಂಬ ಹೆಸರಿನಿಂದ ಕೀರ್ತಿ ಪಡೆದನು).

ಚಿಕ್ಕವಯಸ್ಸಿನಲ್ಲಿಯೇ ವಾಸುದೇವನಿಗೆ ಅಕ್ಷರಾಭ್ಯಾಸ ಮಾಡಿಸಿದರು. ಮೊದಲಿನಿಂದಲೂ ವಾಸುದೇವನು ಬುದ್ಧಿವಂತ, ಬಲಶಾಲಿ, ತೇಜಸ್ವಿ. ಅವನ ಸ್ಮರಣಶಕ್ತಿಯು ಅಗಾಧವಿತ್ತು. ಆಟಪಾಟಗಳಲ್ಲೂ ಅವನಿಗೆ ತುಂಬ ಆಸಕ್ತಿ. ಉಪನಯನವಾದ ಕೂಡಲೆ ವಾಸುದೇವನು ಗುರುವಿನ ಬಳಿಯಲ್ಲಿ ಸಂಸ್ಕೃತ ಕಾವ್ಯ, ವೇದ, ವೇದಾಂಗ, ನ್ಯಾಯ ಶಾಸ್ತ್ರಗಳಲ್ಲಿ ಪಂಡಿತನಾದನು. ಅಭ್ಯಾಸದೊಂದಿಗೆ ಅವನು ಓಡುವದು, ಜಿಗಿಯುವದು, ಕುಸ್ತಿ ಆಡುವದು, ಈಸುವದು ಇವುಗಳಲ್ಲೂ ತೊಡಗುತ್ತಿದ್ದನು.



ಮಧ್ವಾಚಾರ್ಯರು

**ಸಂನ್ಯಾಸ ಸ್ವೀಕಾರ:**—ವಿದ್ಯಾಭ್ಯಾಸವು ಮುಗಿದ ಬಳಿಕ ವಾಸುದೇವನು ತಂದೆತಾಯಿಗಳ ಬಳಿಗೆ ಬಂದನು. ಅವನಿಗೆ 'ನಾನೇ ಬ್ರಹ್ಮನು, ಜಗತ್ತು ಸುಳ್ಳು' ಎಂಬ ಅದ್ವೈತ ಮತವು ಸರಿದೋರಲಿಲ್ಲ. ಸಂನ್ಯಾಸವನ್ನು ಸ್ವೀಕರಿಸಲು ನಿರ್ಧಾರ ಮಾಡಿದನು. ಆಗ ಅವನಿಗೆ ಉಡುಪಿಯಲ್ಲಿಯೇ ಅಚ್ಯುತ ಪ್ರೇಕ್ಷರೆಂಬ ಮಹಾವಿದ್ವಾಸಂರೂ ತಪಸ್ವಿಗಳೂ ಆದ ಯತಿಗಳು ಗುರುಗಳಾಗಿ ದೊರೆತರು. ವಾಸುದೇವನು ಅವರನ್ನು ಆಶ್ರಯಿಸಿ ಸೇವೆಯಲ್ಲಿ ನಿರತರನಾದನು. ಅವರು ಅವನಿಗೆ ವೇದಾಂತವನ್ನು ತಿಳಿಸಿ ಹೇಳಿದರು. ಆದರೆ ವಾಸುದೇವನ ಸಂನ್ಯಾಸದ ಒಲವು ಕೂಡಲೆ ಈಡೇರಲಿಲ್ಲ. ಅವನ ತಂದೆತಾಯಿಗಳು ಅದನ್ನು ವಿರೋಧಿಸಿದರು. ಅವರಿಗೆ ಒಬ್ಬನೇ ಮಗನಿದ್ದುದೇ ಇದಕ್ಕೆ ಕಾರಣ. ಮರುವರ್ಷ ಅವರಿಗೆ ಮತ್ತೊಂದು ಗಂಡುಮಗುವು ಜನಿಸಿತು. ಇದರಿಂದ ವಾಸುದೇವನಿಗೆ ಸಂನ್ಯಾಸವನ್ನು ಸ್ವೀಕರಿಸಲು ಅವರ ಸಮ್ಮತಿಯೂ ದೊರೆಯಿತು. ಅಚ್ಯುತಪ್ರೇಕ್ಷರೆ ಅವನಿಗೆ ಸಂನ್ಯಾಸ ದೀಕ್ಷೆಯನ್ನು ಕೊಟ್ಟರು. ಮತ್ತು 'ಪೂರ್ಣಪ್ರಜ್ಞ'ರೆಂದು

ಅವನಿಗೆ ನೂತನ ನಾಮಕರಣ ಮಾಡಿದರು. ಪೂರ್ಣಪ್ರಜ್ಞರು ಮುಂದೆ 'ಆನಂದ ತೀರ್ಥ' ರೆಂದು ಹೆಸರು ಪಡೆದರು. ಆದರೂ ಅವರನ್ನು ಮಧ್ವಾಚಾರ್ಯರೆಂಬ ಹೆಸರಿನಿಂದ ಕರೆಯುವುದೇ ರೂಢಿಯಾಗಿದೆ. ಯತಿಗಳಾದ ಮೇಲೆ ಮಧ್ವಾಚಾರ್ಯರು 'ದ್ವೈತ' ಮತವನ್ನು ಪ್ರಚಾರ ಮಾಡಿದರು.

**ದ್ವೈತ ಮತದ ಮುಖ್ಯ ತತ್ತ್ವಗಳು**:— ೧ ಶ್ರೀಹರಿ (ವಿಷ್ಣು) ಯೇ ಪರಮಾತ್ಮನು, ಪರಬ್ರಹ್ಮನು, ಸರ್ವೋತ್ತಮನು. ೨. ಜಗತ್ತು ಸತ್ಯವಾದುದು. ೩. ಜೀವಾತ್ಮ ಪರಮಾತ್ಮರಲ್ಲಿ ಶಾಶ್ವತವಾದ ಭೇದವಿದೆ. ೪. ಜೀವಾತ್ಮರೆಲ್ಲ ಪರಮಾತ್ಮನ ಸೇವಕರು. ೫. ಹರಿಭಕ್ತಿಯೇ ಶ್ರೇಷ್ಠ ಭಕ್ತಿ. ೬. ನಿರ್ಮಲ ಹರಿ ಭಕ್ತಿಯೇ ಮೋಕ್ಷಕ್ಕೆ ಸಾಧನ. ಸ್ವರೂಪಾನಂದಾನುಭವವೇ ಮುಕ್ತಿ. (ಶ್ರೀಹರಿಯ ಹಸ್ತಾಯುಧಗಳಾದ ಶಂಖ, ಚಕ್ರ, ಗದಾ, ಪದ್ಮಗಳನ್ನು ಮುದ್ರೆಗಳ ರೂಪದಲ್ಲಿ ಮೈಮೇಲೆ ಧರಿಸಬೇಕು. ವ್ರತ, ನಿಯಮ, ಉಪವಾಸ ಮುಂತಾದವನ್ನು ಪಾಲಿಸಬೇಕು. ಹರಿನಾಮಸ್ಮರಣೆ, ಹರಿಭಜನೆ, ಹರಿಕೀರ್ತನೆ ಇವೆಲ್ಲವೂ ಶ್ರೀಹರಿಯ ಸೇವೆ.)

**ಮತಪ್ರಚಾರ**:— ತಮ್ಮ ಮತಪ್ರಚಾರಕ್ಕಾಗಿ ಮಧ್ವಾಚಾರ್ಯರು ದಕ್ಷಿಣಭಾರತದಲ್ಲೂ ಉತ್ತರಭಾರತದಲ್ಲೂ ಸಂಚಾರ ಮಾಡಿದರು. ಅವರು ಸಂದರ್ಶಿಸಿದ ಮುಖ್ಯ ಕ್ಷೇತ್ರಗಳೆಂದರೆ, ರಾಮೇಶ್ವರ, ಮಧುರೆ, ಶ್ರೀರಂಗ, ಕಾಶಿ, ಬದರಿ. ಅವರು ಸಂಸ್ಕೃತ ಭಾಷೆಯಲ್ಲಿ ದ್ವೈತ ಮತದ ಸಿದ್ಧಾಂತವನ್ನು ಪ್ರತಿಪಾದಿಸುವ ೩೭ ಗ್ರಂಥಗಳನ್ನು ರಚಿಸಿದರು. ಅವರ ದ್ವಾದಶ ಸ್ತೋತ್ರ ವೆಂಬ ಗ್ರಂಥವು ಭಕ್ತಿರಸದಿಂದ ತುಂಬಿದೆ. ಆಚಾರ್ಯರು (ಮಧ್ವಾಚಾರ್ಯರು) ಸ್ವತಃ ಸಂಗೀತ ಬಲ್ಲವರು. ಭಕ್ತಿಯಿಂದ ಮೈಮರೆತು ಹಾಡುತ್ತಿದ್ದರು. ಪಾಠಪ್ರವಚನಗಳಿಂದ ಅನೇಕ ಶಿಷ್ಯರನ್ನು ಪಡೆದರು. ಅನೇಕ ಅದ್ವೈತ ಪಂಡಿತರನ್ನು ವಾದದಲ್ಲಿ ಸೋಲಿಸಿ ಅವರನ್ನು ಶಿಷ್ಯರನ್ನಾಗಿ ಮಾಡಿಕೊಂಡರು. ಅವರಲ್ಲಿಯ ನಾಲ್ವರನ್ನು ತಮ್ಮ ಮತಪ್ರಸಾರಕ್ಕಾಗಿ ನೇಮಿಸಿದರು. ಆ ನಾಲ್ವ ರಲ್ಲಿ ಓರಿಸಾ ಪ್ರಾಂತದ **ನರಹರಿತೀರ್ಥ** ರೆಂಬವರು ಆಚಾರ್ಯರ ಮುಖ್ಯ ಶಿಷ್ಯರು. ಅವರಿಂದಲೇ ಇವರ ಮತವು ಬಂಗಾಲದಲ್ಲಿ ಪ್ರವೇಶಹೊಂದಿ, ಅಲ್ಲಿ ಚೈತನ್ಯಪಂಥವೆಂಬ ವೈಷ್ಣವ ಭಕ್ತಿ ಪಂಥಕ್ಕೆ ಸ್ಫೂರ್ತಿ ಕೊಟ್ಟಿತು. ಮಧ್ವಾಚಾರ್ಯರು ಉಡುಪಿಯಲ್ಲಿ ಶ್ರೀಕೃಷ್ಣ ಮೂರ್ತಿಯ ಪ್ರತಿಷ್ಠಾಪನೆ ಮಾಡಿದರು.

ಆ ದೇವತೆಯ ಪೂಜೆಗಾಗಿ ಎಂಟು ಮಠಗಳನ್ನು ಕಟ್ಟಿದರು. ಉಡುಪಿಯು ಈಗಲೂ ಮಾಧ್ವರ (ಮಧ್ವಾಚಾರ್ಯರ ಅನುಯಾಯಿಗಳ) ಪ್ರಸಿದ್ಧ ಪುಣ್ಯಕ್ಷೇತ್ರ ವಾಗಿದೆ.

**ಅಂತ್ಯ :—** ಮಧ್ವಾಚಾರ್ಯರು ಮತ್ತೊಮ್ಮೆ ಬದರಿಗೆ ಹೋಗಿ ಬಂದು ಉಡುಪಿಯಲ್ಲಿ ತಮ್ಮ ಅವತಾರವನ್ನು ಸಮಾಪ್ತಿಗೊಳಿಸಿದರು.

**ಹಿರಿಮೆ :—** ಮಧ್ವಾಚಾರ್ಯರ ಪ್ರಭಾವದಿಂದ ಕರ್ನಾಟಕದಲ್ಲಿ ವೈಷ್ಣವ ಭಕ್ತಿಪಂಥಕ್ಕೆ ಕಳೆಯೇರಿತು. ಮುಂದೆ ವಿಜಯನಗರದ ಅರಸರ ಆಳಿಕೆಯಲ್ಲಿ 'ದಾಸಕೂಟ' ವೆಂಬ ವಿಷ್ಣುಭಕ್ತರ ಸಂಸ್ಥೆಯು ತಲೆಯೆತ್ತಿತು. ಈದಾಸ ಕೂಟದಲ್ಲಿ ಪುರಂದರದಾಸ, ಕನಕದಾಸರೆಂಬವರು ಶ್ರೇಷ್ಠರು. (ವಿವರ ಗಳನ್ನು ಮುಂದಿನ ಪ್ರಕರಣದಲ್ಲಿ ಕಲಿಯುವಿರಿ).

## ಅಭ್ಯಸನಗಳು

೧ ಬಸವೇಶ್ವರರಿಗೆ ಧರ್ಮ ಪ್ರಸಾರದ ಕಾರ್ಯದಲ್ಲಿ ನೆರವಾದವರ ಹೆಸರು ಬರೆಯಿರಿ.

೨ ಬಸವೇಶ್ವರರು ತಮ್ಮ ಜೀವನದಲ್ಲಿ ಕೆಳಗಿನಂತೆ ಯಾವ ಪ್ರಸಂಗದಲ್ಲಿ ಅಂದಿರ ಬಹುದು ?

(ಅ) ಊರಮುಂದೆ ಹಾಲು-ಹಳ್ಳ ಹರಿಯುತಿರಲು ಓರೆ ಆವಿನ ಬೆನ್ನಹತ್ತಲೇ ಕಯ್ಯ ? ಬಿಜ್ಜಳನ ಭಾಂಡಾರವೆನಗೇತಕಯ್ಯ ?

(ಆ) ಸಾಕುಮಾಡೈ ತಂದೆ,......ತೆರಪುಗೊಡು ತಂದೆ. ಬಂದಿಹೆನು ಬಸವನು ನೊಂದೆ.

೩ ಕೆಳಗೆ ಕೊಟ್ಟಿರುವ ಬಸವೇಶ್ವರ-ವಚನಗಳನ್ನು ಕಲಿತು ನೆನಪಿನಲ್ಲಿಡಿರಿ :— ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ. ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ. ಇದೇ ಅಂತರಂಗಶುದ್ಧಿ; ಇದೇ ಬಹಿರಂಗ ಶುದ್ಧಿ. ಇದೇ ನಮ್ಮ ಕೂಡಲ ಸಂಗಮ ದೇವನನೊಲಿಸುವ ಪರಿ.

---


No C.೬೨೪೧

## ೧೪ನೆಯ ಪ್ರಕರಣ

# ಭಕ್ತಿಪಂಥ ಹಾಗು ಭಕ್ತರ ಪರಂಪರೆ

**"ಭಕ್ತಿ ಪಂಥ"** ಎಂದರೇನು? ಭಕ್ತಿಯೆಂದರೆ ದೇವನಲ್ಲಿ ಮಾನವನ ಪರಮಪ್ರೀತಿ. ಜೀವಾತ್ಮನು ಪರಮಾತ್ಮನಲ್ಲಿ ಅನನ್ಯಭಾವದಿಂದ ಮೊರೆಹೊಕ್ಕು ತನ್ನ ಯೋಗಕ್ಷೇಮದ ಹೊಣೆಯನ್ನೆಲ್ಲ ಅವನಿಗೇ ಒಪ್ಪಿಸುವ ಭಾವನೆ. ಭಕ್ತಿಯಲ್ಲಿ ಒಂಬತ್ತು ಮುಖ್ಯ ಪ್ರಕಾರಗಳುಂಟು—ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಮತ್ತು ಆತ್ಮನಿವೇದನ (ಸಂಪೂರ್ಣವಾಗಿ ದೇವನಿಗೆ ಶರಣುಹೋಗುವದು). ಭಕ್ತಿಯು ಮೋಕ್ಷಸಂಪಾದನೆಯ ಒಂದು ಮಾರ್ಗ(ಪಂಥ)ವು. ಮೋಕ್ಷಕ್ಕೆ ಮಿಕ್ಕೆರಡು ಮಾರ್ಗಗಳೆಂದರೆ, ಕರ್ಮಮಾರ್ಗ ಮತ್ತು ಜ್ಞಾನಮಾರ್ಗ. ಇವು ಭಕ್ತಿಮಾರ್ಗಕ್ಕಿಂತಲೂ ಎಷ್ಟೋ ಕಾಲ ಮುಂಚಿನಿಂದ ಭಾರತದಲ್ಲಿ ಪ್ರಚುರವಿದ್ದವು. ಆದರೆ ಬರಬರುತ್ತ ಈ ಮುಂಚಿನ ಮಾರ್ಗಗಳು ಜನಸಾಮಾನ್ಯರಿಗೆ ಅಷ್ಟೊಂದು ಸುಲಭವೆನಿಸಲಿಲ್ಲ. ಆದುದರಿಂದ ಕಾಲವು ಗತಿಸಿದಂತೆ ಭಕ್ತಿಮಾರ್ಗವೆಂಬ ಹೊಸ ಪಂಥವು ನಮ್ಮ ದೇಶದಲ್ಲಿ ತಲೆಯೆತ್ತಿ ಬಲಿಯತೊಡಗಿತು. ಭಗವದ್ಗೀತೆಯಲ್ಲಂತೂ ಶ್ರೀಕೃಷ್ಣನು ಭಕ್ತಿಮಾರ್ಗವು ಮಿಕ್ಕೆರಡು ಮಾರ್ಗಗಳಷ್ಟೇ ಶ್ರೇಷ್ಠಮಾರ್ಗವೆಂದು ಸ್ಪಷ್ಟವಾಗಿ ಸಾರಿ ಹೇಳಿದ್ದಾನೆ. ಅಂತೆಯೇ ಗೀತೆಯು ಭಕ್ತಿಪಂಥದ ಮೂಲವು. ಪರಮಾತ್ಮನು ಕಾಲಕಾಲಕ್ಕೆ ಬೇರೆ ಬೇರೆ ಅವತಾರಗಳನ್ನು ಧರಿಸುವನೆಂದು ಭಕ್ತಿಪಂಥದ ಅನುಯಾಯಿಗಳ ನಂಬಿಕೆ. ಇಂಥ ಅವತಾರಗಳನ್ನು ಧರಿಸುವ ಶ್ರೇಷ್ಠ ದೇವತೆಯನ್ನು ಭಾರತದಲ್ಲಿ ಕೆಲವರು ಶಿವನೆಂದೂ ಕೆಲವರು ವಿಷ್ಣುವೆಂದೂ ಭಾವಿಸುತ್ತಾರೆ. ಆದುದರಿಂದಲೇ ನಮ್ಮ ದೇಶದಲ್ಲಿ ಬಹುಕಾಲದಿಂದಲೂ ಭಕ್ತಿಪಂಥದಲ್ಲಿ ಶೈವ ಮತ್ತು ವೈಷ್ಣವ ಎಂಬೆರಡು ಪ್ರಕಾರಗಳು ಕಂಡುಬರುತ್ತಿವೆ.

ಶೈವ ಪಂಥದ ಅನುಯಾಯಿಗಳನ್ನು ಶಿವಭಕ್ತರೆಂದೂ ಅಥವಾ ಶಿವಶರಣರೆಂದೂ, ವೈಷ್ಣವ ಪಂಥದ ಅನುಯಾಯಿಗಳನ್ನು ವಿಷ್ಣುಭಕ್ತರೆಂದೂ ಕರೆಯಲಾಗುತ್ತಿದೆ. ವಿಷ್ಣುಭಕ್ತರಲ್ಲಿ ತಮಿಳುನಾಡಿನ ಆಳ್ವಾರರು, ಕರ್ನಾಟಕದ ಹರಿದಾಸರು, ಮಹಾರಾಷ್ಟ್ರದ ಸಾಧುಸಂತರು, ಗುಜರಾತದ ನರಸಿಂಹ ಮೆಹತಾ, ಬಂಗಾಲದ ಚೈತನ್ಯ, ಮೇವಾಡದ ಮೀರಾಬಾಯಿ ಮತ್ತು ಕಾಶಿಯ ತುಲಸೀದಾಸ ಇವರು ಸುಪ್ರಸಿದ್ಧರು.

**ತಮಿಳುನಾಡಿನ ಆಳ್ವಾರರು**:— 'ಆಳ್ವಾರ್' ಇದು ತಮಿಳು ಭಾಷೆಯ ಶಬ್ದ. ಆಳ್ವಾರರೆಂದರೆ ಮುಳುಗಿದವರು ಎಂದರ್ಥ. ದೇವಚಿಂತನೆಯಲ್ಲಿ ತನ್ನನ್ನು ಮರೆತವನೆ ಆಳ್ವಾರನು. ಭಗವದನುಭವದಲ್ಲಿ ಆಳವಾಗಿ ಮುಳುಗಿ ಅದರಿಂದ ಉಂಟಾದ ಆನಂದವನ್ನು ಮಧುರವಾದ ಗೀತಗಳ ರೂಪದಲ್ಲಿ ಇವರು ಹಾಡಿದರು. ಇವರು ಭಾರತದ ಭಕ್ತಿ ಚಳವಳಿಯಲ್ಲಿ ಮೊದಲಿಗರೆನಿಸಿ ಪ್ರಮುಖ ಪಾತ್ರ ವಹಿಸಿದರು. ಇವರಲ್ಲಿ ೧೨ ಜನರು ಆಗಿಹೋಗಿರುವರು. ಇವರಲ್ಲಿ ಎಲ್ಲ ಜಾತಿಯವರುಂಟು. ಇವರು ಜೀವಿಸಿದುದು ೭-೯ನೆಯ ಶತಮಾನಗಳಲ್ಲಿ. ಇವರ ಹಾಡುಗಳಲ್ಲಿ ಭಗವದ್ಗೀತೆಯ ಪ್ರಭಾವವು ಕಂಡುಬರುತ್ತಿದೆ. ಬೌದ್ಧ-ಜೈನರಂತೆ ಇವರಾದರೂ ತಮ್ಮ ಪ್ರಾದೇಶಿಕ ಭಾಷೆಯಾದ ತಮಿಳನ್ನೇ ಭಕ್ತಿಪ್ರಚಾರದ ಸಾಧನವನ್ನಾಗಿಯೂ, ನೀತಿಯನ್ನೇ ಧರ್ಮದ ನೆಲಗಟ್ಟನ್ನಾಗಿಯೂ ಮಾಡಿಕೊಂಡರು. ಅದೇ ಭಾಷೆಯಲ್ಲಿ ತಮ್ಮೆಲ್ಲ ಭಕ್ತಿಗೀತಗಳನ್ನು ರಚಿಸಿದರು. ಇವುಗಳ ಸಂಗ್ರಹಕ್ಕೆ 'ಪ್ರಬಂಧ' ವೆಂದು ಹೆಸರು ರೂಢಿಯಲ್ಲಿ ಬಂದಿತು. ತಮಿಳರು ಪ್ರಬಂಧಗಳಿಗೆ ಸಂಸ್ಕೃತ ವೇದಗಳಿಗೆ ಕೊಡುವಷ್ಟೆ ಮಹತ್ವವನ್ನು ಕೊಡುತ್ತಾರೆ. ಇವರಲ್ಲಿ ಅನೇಕರ ಆರಾಧ್ಯದೇವತೆಯು ಕಾವೇರೀ ತೀರದಲ್ಲಿಯ ಶ್ರೀರಂಗ ಕ್ಷೇತ್ರದ ರಂಗನಾಥಸ್ವಾಮಿಯು.

**ತತ್ತ್ವೋಪದೇಶ**:— ದೇವರು ಸರ್ವವ್ಯಾಪಿಯು, ಕೃಪಾಪೂರಿತನು. ನಮ್ಮ ಕರ್ಮಗಳನ್ನೆಲ್ಲ ಫಲಾಪೇಕ್ಷೆಯಿಲ್ಲದೆ ಭಗವಂತನ ಸೇವೆಯೆಂದೇ ಭಾವಿಸಿ ಮಾಡಬೇಕು. ಪರಮಾತ್ಮನಿಗೆ ರೂಪ ಆಕಾರಗಳು ಇರದಿದ್ದರೂ ಅವನು ಭಕ್ತರಿಗಾಗಿ ಅವನ್ನು ಧರಿಸುವನು.(ಉದಾಹರಣೆ: ರಾಮ ಕೃಷ್ಣ ಮುಂತಾಗಿ). ಪರಮಾತ್ಮನಲ್ಲಿ ಪ್ರೀತಿಯಿಂದ ಕೂಡಿದ ಭಕ್ತಿಯೇ ಮೋಕ್ಷಸಾಧನೆಗೆ ಶ್ರೇಷ್ಠ ಮಾರ್ಗ. ಭಕ್ತರು ಯಾವ ಜಾತಿಯವರಿದ್ದರೇನು, ಭಗವಂತನ ದಯೆಗೆ ಪಾತ್ರರಾಗಬಲ್ಲರು. ಇದುವೆ ಆಳ್ವಾರರ ಭಕ್ತಿ ಮಾರ್ಗದ ತಿರುಳು.

ಈ ೧೨ ಜನ ಆಳ್ವಾರರಲ್ಲಿ ೫ನೆಯವರಾದ ಕುಲಶೇಖರ ಆಳ್ವಾರ್ ಮತ್ತು ಅವರ ತರುವಾಯದ ಪೆರಿಯಾಳ್ವಾರ್ ಹಾಗು ಅವರ ಮಗಳು **ಆಂಡಾಳ್** (ಶ್ರೀರಂಗನಾಯಿಕೆ), **ತೊಂಡರ ಡಿಪ್ಪೊಡಿ ಆಳ್ವಾರ್, ತಿರುಪ್ಪಾಣಾಳ್ವಾರ್, ನಮ್ಮಾಳ್ವಾರ್** ಹಾಗು **ಮಧುರಕವಿ ಆಳ್ವಾರ್** ಇವರು ಸುಪ್ರಸಿದ್ಧರು.

**ಕುಲಶೇಖರ ಆಳ್ವಾರ್ :—** ಇವರು ಮೊದಲಿಗೆ ತಿರುವಾಂಕೂರಿನ ಸಮರ್ಥರಾಜರು. ಆದರೆ ಧರ್ಮದಲ್ಲಿ ವಿಶೇಷ ಆಸ್ಥೆಯುಳ್ಳವರು. ಒಂದು ದಿನ ರಾಮಾಯಣ ಕತೆಯನ್ನು ಕೇಳುವಾಗ, ಶ್ರೀರಾಮನು ರಾಕ್ಷಸರ ಮಧ್ಯದಲ್ಲಿ ಸಿಕ್ಕುಬಿದ್ದಿರುವನೆಂದು ಕಳವಳಗೊಂಡರಂತೆ. ಕೂಡಲೆ ಅವನನ್ನು ಬಿಡಿಸಲು ಸೈನ್ಯಕ್ಕೆ ಆಜ್ಞೆಯಿತ್ತರಂತೆ. ಮತ್ತೊಮ್ಮೆ ತಾವೇ ಸೀತೆಯನ್ನು ಬಿಡಿಸಬೇಕೆಂದು ಲಂಕೆಗೆ ದಾಳಿಯಿಟ್ಟರಂತೆ. ಕೊನೆಗೆ ರಾಜ್ಯತ್ಯಾಗಮಾಡಿ ಶ್ರೀರಂಗಕ್ಕೆ ತೆರಳಿ ಆಳ್ವಾರರಾದರು.

**ಪೆರಿಯಾಳ್ವಾರ್ :—** ಇವರು ಶ್ರೀವಿಲ್ಲಿಪುತ್ತೂರಿನ ಬ್ರಾಹ್ಮಣರು. ನಿತ್ಯವೂ ಅಲ್ಲಿಯ ಶ್ರೀಕೃಷ್ಣನಿಗೆ ತಮ್ಮ ಹೂದೋಟದ ಹೂ-ತುಳಸಿಗಳನ್ನೇ ಅರ್ಪಿಸುತ್ತಿದ್ದರು. ಅವನ್ನು ದೇವಸ್ಥಾನಕ್ಕೆ ಒಯ್ಯುವ ಮುಂಚೆ ಇವರ ಸಾಕು ಮಗಳಾದ ಆಂಡಾಳಳು ಅವನ್ನು ಗೊಂಚಲ ಕಟ್ಟುತ್ತಿದ್ದಳು. ಈಕೆ ತಾನು ಅದನ್ನು ಮೊದಲು ಮುಡಿದು ಕನ್ನಡಿಯಲ್ಲಿ ತನ್ನ ಸೊಬಗನ್ನು ನೋಡಿ ಕೊಳ್ಳುವಳು; ಬಳಿಕ ದೇವರಿಗೆ ಕೊಡುವಳು. ತಾನು ಮೆಚ್ಚಿದ ಹೂಗಳನ್ನು ಶ್ರೀಕೃಷ್ಣನೂ ಮೆಚ್ಚುವನೆಂದು ಆಕೆಯ ಭಾವನೆ! ಇವಳ ಈ ಕೃತಿಯು ಒಂದು ದಿನ ತಂದೆಯ ಕಣ್ಣಿಗೆ ಬಿತ್ತು. ಇದು ಅವರಿಗೆ ಅನಾಚಾರವೆನಿಸಿತು. ಆ ದಿನ ದೇವರಿಗೆ ಅವರು ಹೂಗಳನ್ನು ಒಯ್ಯಲೇ ಇಲ್ಲ. ಅಂದೇ ರಾತ್ರಿ ಶ್ರೀಕೃಷ್ಣನು ಪೆರಿಯಾಳ್ವಾರರ ಕನಸಿನಲ್ಲಿ ಕಾಣಿಸಿ ಕೊಂಡು, ಆಂಡಾಳಳು ಮುಡಿದು ಇಟ್ಟ ಹೂಗಳೇ ತನಗೆ ಒಪ್ಪಿಗೆಯಾಗುವವೆಂದು ಹೇಳಿದನಂತೆ. ಅಂದಿ ನಿಂದ ಇವಳು ತಾನೊಬ್ಬ ಗೋಪಿಯೆಂದೂ ಶ್ರೀಕೃಷ್ಣನೇ ತನ್ನ ಪತಿಯೆಂದೂ ಭಾವಿಸಿ ಅವನ ಭಕ್ತಿಯಲ್ಲಿ ಮೈಮರೆಯ ತೊಡಗಿದಳು. ಕೊನೆಗೆ ಇವಳು ಶ್ರೀರಂಗಕ್ಕೆ ಹೋಗಿ ಅಲ್ಲಿಯ ರಂಗನಾಥಸ್ವಾಮಿಯಲ್ಲಿ ಐಕ್ಯವಾದಳಂತೆ. ಈಕೆ ಯನ್ನು **ತಮಿಳುನಾಡಿನ ಅಕ್ಕಮಹಾದೇವಿಯೆಂದು** ಕರೆಯಬಹುದು. ಪೆರಿಯಾಳ್ವಾರರು ರಚಿಸಿದ ಹಾಡುಗಳನ್ನು **"ತಿರುಪ್ಪಲ್ಲಾಂಡು"** ಎಂಬ ಗ್ರಂಥದಲ್ಲಿ ಕಾಣಬಹುದು.


ತೊಂಡರ ಡಿಪ್ಪೊಡಿ ಆಳ್ವಾರ

**ತೊಂಡರ ಡಿಪ್ಪೊಡಿ ಆಳ್ವಾರ್ :—** ಇವರೂ ಬ್ರಾಹ್ಮಣ ಕುಲದವರು. ಚಿಕ್ಕಂದಿನಿಂದಲೂ ಇವರದು ವೈರಾಗ್ಯ ಮನೋವೃತ್ತಿ. ಇವರು ವೇದವೇದಾಂಗಗಳಲ್ಲಿ ಪಾರಂಗತರು. ಆದರೆ

ಮುಂದೆ ವೇಶ್ಯೆಯೊಬ್ಬಳ ಪ್ರೇಮಪಾಶದಲ್ಲಿ ಸಿಲುಕಿ ಪತಿತರಾದರು. ಬಳಿಕ ಪಶ್ಚಾತ್ತಾಪದಿಂದ ಪವಿತ್ರರಾಗಿ ಮತ್ತೆ ರಂಗನಾಥನ ಕೃಪೆಗೆ ಪಾತ್ರರಾದರು. (ಹಿಂದಿನ ಪುಟದಲ್ಲಿ ಎಡಬದಿಯ ಚಿತ್ರ).

**ತಿರುಪ್ಪಾಣಾಳ್ವಾರ್ :—** ಇವರು ಅಂತ್ಯಜಕುಲದವರು. ಭಗವದ್ ಗಾನವಿದ್ಯೆಯಲ್ಲಿ ಸಾರ್ವಭೌಮರೆಂದು ಹೆಸರಾಗಿದ್ದರು. ವೀಣೆ ನುಡಿಸುವವರಲ್ಲಿ ವಿಖ್ಯಾತರಾಗಿದ್ದರು. ತಾವು ಅಂತ್ಯಜರಾದುದರಿಂದ ಶ್ರೀರಂಗದಲ್ಲಿ ರಂಗನಾಥ ಸ್ವಾಮಿಯ ದೇವಾಲಯದ ಎದುರಿಗೆ ದೂರದಲ್ಲಿ ಗುಡಿಸಲು ಕಟ್ಟಿಕೊಂಡಿದ್ದರು. ಅಲ್ಲಿಯೇ ದೇವನಿಗೆ ಅಭಿಮುಖವಾಗಿ ಕುಳಿತು ಧ್ಯಾನಸ್ಥರಾಗುತ್ತಿದ್ದರು. ಒಂದು ದಿನ ಅರ್ಚಕರಲ್ಲೊಬ್ಬನಾದ **ಲೋಕಸಾರಂಗ** ನೆಂಬ ಬ್ರಾಹ್ಮಣ ಮುನಿಯು ದೇವರ ಪೂಜೆಗೆಂದು ನದಿಯಿಂದ ನೀರು ತರುತ್ತಿದ್ದನು. ಆಗ ಹಾದಿಯಲ್ಲಿ ಧ್ಯಾನಸ್ಥನಾಗಿ ಕುಳಿತಿದ್ದ ತಿರುಪ್ಪಾಣಿಯನ್ನು ಕಂಡು "ಹೊಲೆಯನೇ, ದಾರಿಬಿಟ್ಟು ದೂರ ಸರಿ" ಎಂದು ಗದ್ದರಿಸಿದನು. ತಿರುಪ್ಪಾಣಿಯು ಹಾಗೆಯೇ ಕುಳಿತ ಮೂಲಕ, ಆ ಅರ್ಚಕನು ಸಿಟ್ಟಿನಿಂದ ಒಂದು ಕಲ್ಲನ್ನು ಎಸೆದನು. ಅದು ಅವನ ಹಣೆಗೆ ತಗಲಿ ರಕ್ತ ಸುರಿಯಿತು. ಅಂದಿನ ರಾತ್ರಿ ರಂಗನಾಥ ಸ್ವಾಮಿಯು ಆ ಅರ್ಚಕನ ಕನಸಿನಲ್ಲಿ ಬಂದು, ತನ್ನ ಭಕ್ತನ ಹಣೆಗೆ ಎಸೆದ ಕಲ್ಲು ತನಗೆ ತಾಗಿತೆಂದು ಹೇಳಿದನಂತೆ; ಇದಕ್ಕೆ ಪ್ರಾಯಶ್ಚಿತ್ತವಾಗಿ ಅರ್ಚಕನು ತಿರುಪ್ಪಾಣಿಯನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು ಮರುದಿನ್ನ ಬೆಳಗಿನಲ್ಲಿ ದೇವಾಲಯಕ್ಕೆ ತನ್ನ ಸನ್ನಿಧಿಗೆ ಕರೆತರಬೇಕೆಂದು ಆಜ್ಞೆಯಿತ್ತನಂತೆ. ಈ ಆಜ್ಞೆಯನ್ನು ಲೋಕಸಾರಂಗನು ಮರುದಿನ ಚಾಚೂ ತಪ್ಪದೆ ಅತ್ಯಂತ ಉತ್ಸವದೊಡನೆ ಪಾಲಿಸಿದನು.

ಆಗ ತಿರುಪ್ಪಾಣಿಯು ಸ್ವಾಮಿಯ ದರ್ಶನದಿಂದ ಧನ್ಯನಾದನು. ತನಗುಂಟಾದ ಆನಂದವನ್ನು ಅವನು ಹಾಡುಗಳಿಂದ ವ್ಯಕ್ತಗೊಳಿಸಿದನು. ಈ ರೀತಿ ಒಬ್ಬ ಹರಿಜನ ಭಕ್ತನು ಅಂದು ದೇವಾಲಯದಲ್ಲಿ ಪ್ರವೇಶಪಡೆದನು.

**ನಮ್ಮಾಳ್ವಾರ್** ಮತ್ತು **ಮಧುರಕವಿ ಆಳ್ವಾರ್ :—**ನಮ್ಮಾಳ್ವಾರರು ವೆಳ್ಳಾಳ ಎಂಬ ಶೂದ್ರಕುಲದವರು. ಇವರು ತಾಮ್ರಪರ್ಣಿ ನದೀತೀರದಲ್ಲಿರುವ ಕುರುಗೂರಲ್ಲಿ ಹುಟ್ಟಿದರು. ಇವರೂ ಇವರ ಶಿಷ್ಯರಾದ ಮಧುರಕವಿಗಳೂ ಆಳ್ವಾರರಲ್ಲಿ ಕೊನೆಯವರು.

ಈ ಆಳ್ವಾರರ ವೈಷ್ಣವ ಸಂಪ್ರದಾಯವನ್ನು ೧೧-೧೨ನೆಯ ಶತಮಾನಗಳಲ್ಲಿ (೧೦೧೭-೧೧೩೭) ಆಗಿಹೋದ **ರಾಮಾನುಜಾಚಾರ್ಯ**ರೆಂಬ ಪ್ರಸಿದ್ಧ ಮತಾಚಾರ್ಯರು ಮುಂದುವರಿಸಿದರು. ಆ ಮೇಲೆ ಉತ್ತರಭಾರತದಲ್ಲಿ **ರಾಮಾನಂದರೂ** ಇದೇ ಸಂಪ್ರದಾಯವನ್ನು ಮುಂದೆ ಸಾಗಿಸಿದರು.

**ಕರ್ನಾಟಕದ ಹರಿದಾಸರು :—** ಇವರೆಲ್ಲರೂ ತಮ್ಮ ಭಕ್ತಿಗೀತೆಗಳನ್ನು ಕನ್ನಡದಲ್ಲಿ ಬರೆದಿದ್ದಾರೆ. ಇವರಲ್ಲಿ **ಪುರಂದರದಾಸರು, ಕನಕದಾಸರು, ವಿಜಯದಾಸರು** ಅತಿ ಮುಖ್ಯರು. ಕನಕದಾಸರು ಕೇಶವಭಕ್ತರು; ಉಳಿದವರು ವಿಠ್ಠಲಭಕ್ತರು. ಕೇಶವ ಮತ್ತು ವಿಠ್ಠಲ ಇವು ವಿಷ್ಣುವಿನ ಬೇರೆ ಹೆಸರುಗಳು. ಇವರು ವಿಜಯನಗರದ ಅರಸರ ಕಾಲದವರು. ಇವರು ತಮ್ಮನ್ನು ಹರಿಯ ಸೇವಕರು (ದಾಸರು) ಎಂದು ಕರೆದುಕೊಂಡರು. ಆದುದರಿಂದ ಇವರಿಗೆ ಹರಿದಾಸರೆಂದು ಹೆಸರು ಬಂದಿರುವದು.


ಪುರಂದರದಾಸರು

**ಪುರಂದರದಾಸರು** (೧೪೮೦-೧೫೬೪) :— ನಮ್ಮ ಹರಿದಾಸರಲ್ಲಿ ಪುರಂದರದಾಸರೇ ಸಾರ್ವಭೌಮರು. ಇವರು ಪುಣೆ ಜಿಲ್ಹೆಗೆ ಸೇರಿದ ಪುರಂದರಗಡದವರು. ಮೊದಲು ಕೃಷ್ಣಪ್ಪನಾಯಿಕ ಎಂಬ ಹೆಸರಿನ ಚಿನಿವಾಲ ವೃತ್ತಿಯವರು. ಹಣದಾಸೆಯ ಚಿನಿವಾಲರಿದ್ದ ಇವರು ಹೇಗೆ ಹರಿದಾಸರಾದರೆಂಬ ಕತೆ ಕನ್ನಡ ನಾಡಿನಲ್ಲಿ ಮನೆಮಾತಾಗಿದೆ. ಆಗ ಇವರು ಪಂಢರಪುರಕ್ಕೆ ತೆರಳಿ ವಿಠ್ಠಲಭಕ್ತರಾದರು. ಮುಂದೆ ವಿಜಯನಗರಕ್ಕೆ ಬಂದು ಶ್ರೀವ್ಯಾಸಯೋಗಿಗಳ ಶಿಷ್ಯರಾದರು. ಕರ್ನಾಟಕದಲ್ಲೆಲ್ಲ ಸುತ್ತಾಡಿ ತಮ್ಮ ಹಾಡುಗಳಿಂದ ಹರಿಭಕ್ತಿಯನ್ನು ಪ್ರಸಾರಮಾಡಿದರು. ಇವರು ಶ್ರೇಷ್ಠ ಸಂಗೀತಗಾರರು. ಇವರಿಂದ ಕರ್ನಾಟಕ ಸಂಗೀತವು ಘನತೆ ಹೊಂದಿತು. ಸಾಹಿತ್ಯ ಸಂಗೀತಗಳ ಮಧುರ ಸಂಗಮವು ಇವರ ಹಾಡುಗಳಲ್ಲಿದೆ. "ಹರಿಕೀರ್ತನೆ" ಎಂಬ ಕಲೆಯು ಇವರಿಂದಲೇ ಮುಂದೆ ಬಂದಿತು. ಇವರ ಹಾಡುಗಳಲ್ಲಿ ಭಗವದ್‌ಭಕ್ತನ ಹೃದಯದೊಳಗಿನ ವಿವಿಧ ಭಾವನೆಗಳು ಒಡಮೂಡಿವೆ. ಹಾಡುಗಳ ಕೊನೆಯಲ್ಲಿ "ಪುರಂದರ ವಿಠಲ" ಎಂಬ ಮುದ್ರಿಕೆ ಇರುತ್ತದೆ. ಸಂಸಾರವನ್ನು ಸಾಗಿಸುತ್ತಲೇ ಮೋಕ್ಷ

ಸಂಪಾದನೆಯ ಮಾರ್ಗವನ್ನು ಅನುಸರಿಸಬೇಕೆಂಬುದೇ ಇವರು ಬೀರಿದ ಸಂದೇಶ.

**ಕನಕದಾಸರು:—** ಇವರು ಪುರಂದರದಾಸರ ಸಮಕಾಲೀನರು. ಧಾರವಾಡ ಜಿಲ್ಲೆಯ "ಕಾಗಿನೆಲೆ" ಯ ಆದಿ ಕೇಶವ ಸ್ವಾಮಿಯ ಪರಮಭಕ್ತರು. ತಳ ವಾರ ಜಾತಿಯವರು. ಇವರೂ ವಿಜಯನಗರದ ಶ್ರೀ ವ್ಯಾಸಯೋಗಿಗಳ ಶಿಷ್ಯರು. ಇವರು ಹರಿ ಭಕ್ತಿಸಾರ, ನಳಚರಿತ್ರೆ, ರಾಮಧಾನ್ಯ ಚರಿತ್ರೆ ಎಂಬ ಗ್ರಂಥಗಳನ್ನು ಬರೆದಿದ್ದಾರೆ. ಭಕ್ತಿ ಪಂಥದ ಮುಖ್ಯ ತತ್ತ್ವ ಗಳನ್ನು ಉದಾಹರಿಸುವ ಎಷ್ಟೋ ಕತೆಗಳು ಇವರ ಬಗೆಗೆ ಜನರಲ್ಲಿ ಕೇಳ



ಕನಕದಾಸರು.

ಬರುತ್ತಿವೆ. ಒಮ್ಮೆ ಕನಕದಾಸರ ಗುರುಗಳು ಇವರಿಗೆ ಒಂದು ಬಾಳೆಯಹಣ್ಣು ಕೊಟ್ಟು 'ಯಾರೂ ಇಲ್ಲದೆಡೆ ತಿನ್ನು' ಎಂದು ಹೇಳಿದರಂತೆ. "ಎಲ್ಲ ಕಡೆಗೂ ದೇವರಿದ್ದಾನೆ, ಎಲ್ಲಿಯೂ ತಿನ್ನಲಾಗದು" ಎಂದು ಕನಕದಾಸರು ಉತ್ತರ ವಿತ್ತು ಹಣ್ಣನ್ನು ತಿರುಗಿ ಕೊಟ್ಟರಂತೆ. 'ಕುಲ ಹಿರಿಯದಲ್ಲ, ಯೋಗ್ಯತೆ ಹಿರಿ ಯದು' ಎಂಬ ಭಕ್ತಿಪಂಥದ ತತ್ತ್ವವು 'ಕನಕನ ಕಿಂಡಿ' ಯ ಕತೆಯಲ್ಲಿ ವ್ಯಕ್ತವಾಗುತ್ತದೆ. ಒಮ್ಮೆ ಉಡುಪಿಯಲ್ಲಿ ಶ್ರೀಕೃಷ್ಣದೇವಾಲಯದ ಅರ್ಚಕರು ಇವರನ್ನು ದೇವದರ್ಶನಕ್ಕಾಗಿ ಒಳಗೆ ಬಿಡಲಿಲ್ಲ. ಕನಕದಾಸರು ಉಪಾಯ ಗಾಣದೆ ಪೌಳಿಯ ಹೊರಗಡೆಯಲ್ಲಿ ಗುಡಿಯ ಹಿಂಭಾಗಕ್ಕೆ ಬಂದುನಿಂತರು. ಅಲ್ಲಿಂದಲೇ ಒಂದು ಹಾಡಿನಿಂದ ಕೃಷ್ಣದರ್ಶನದ ಉತ್ಕಟೇಚ್ಛೆಯನ್ನು ವ್ಯಕ್ತ

ಪಡಿಸಿದರು. ಆಗ ಪೌಳಿಯಲ್ಲಿ ಒಂದು ಕಿಂಡಿ[೧] ಉಂಟಾಯಿತು. ಶ್ರೀಕೃಷ್ಣ ಮೂರ್ತಿ ಇವರ ಕಡೆಗೆ ಮುಖ ತಿರುವಿ ದರ್ಶನವಿತ್ತನು. ಇಂದಿಗೂ ಆ ಕಿಂಡಿ, ಅಲ್ಲಿಯೇ ಕನಕದಾಸರಿಗಾಗಿ ಕಟ್ಟಿದ ಒಂದು ಗುಡಿ ಇವು ಕಂಡುಬರುತ್ತಿವೆ.

**ಇತರ ದಾಸರು** :— ಪುರಂದರದಾಸರ ಮತ್ತು ಕನಕದಾಸರ ತರುವಾಯ **ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು** ಮೊದಲಾದವರು ಈ ಭಕ್ತಿಪರಂಪರೆಯನ್ನು ೧೯ ನೆಯ ಶತಮಾನದವರೆಗೆ ಮುಂದುವರಿಸಿದರು. ಇವರೆಲ್ಲರ ಗುಂಪಿಗೆ "ದಾಸಕೂಟ" ವೆಂಬ ಹೆಸರು ಬಂದಿದೆ. ದಾಸಕೂಟದ ಸಾವಿರಾರು ಹಾಡುಗಳು ಕರ್ನಾಟಕದ ಮೂಲೆ ಮೂಲೆಗಳಲ್ಲಿ ಇಂದಿಗೂ ಕೇಳಬರುತ್ತಿವೆ. ಅವು ಭಕ್ತರ ಹಾಗು ಕರ್ನಾಟಕ ಸಂಗೀತಪ್ರಿಯರ ಮನಸ್ಸನ್ನು ತಣಿಸುತ್ತಿವೆ.

**ಮಹಾರಾಷ್ಟ್ರದ ಸಾಧುಸಂತರು** :— ದೇವಗಿರಿಯ ಹಿಂದು ರಾಜ್ಯವು ಕಣ್ಮರೆಯಾದಂದಿನಿಂದ ಸ್ವರಾಜ್ಯ-ಸಂಸ್ಥಾಪಕನಾದ ಶಿವಾಜಿಯ ಉದಯದ ವರೆಗೆ ಮಹಾರಾಷ್ಟ್ರದಲ್ಲಿ ಹಿಂದು ರಾಜಸತ್ತೆ ಇಲ್ಲದಾಗಿತ್ತು. ಈ ದೀರ್ಘ ಕಾಲದಲ್ಲಿ ಮಹಾರಾಷ್ಟ್ರದ ಸಾಧುಸಂತರು ಜನರಲ್ಲಿ ಭಕ್ತಿಪಂಥದ ತತ್ತ್ವಗಳನ್ನು ಬೀರಿದರು. ಪ್ರಸಾರ ಕಾರ್ಯಕ್ಕಾಗಿ ಜನಭಾಷೆಯಾದ ಮರಾಠಿಯನ್ನೇ ಬಳಸಿದರು. ಅದೇ ಭಾಷೆಯಲ್ಲಿ ತಮ್ಮ ಗ್ರಂಥಗಳನ್ನು ಬರೆದರು. ಇದರಿಂದ ಆ ಸಂಧಿಕಾಲದಲ್ಲಿ ಜೀವಿಸಿದ ಮರಾಠಿಗರಲ್ಲಿ ತಮ್ಮ ಧರ್ಮ–ದೇಶ–ಭಾಷೆಗಳ ಬಗೆಗೆ ಉಜ್ವಲ ಅಭಿಮಾನ ಉಂಟಾಯಿತು; ಹಿಂದು ಧರ್ಮ–ಸಂಸ್ಕೃತಿಗಳ ಸಂರಕ್ಷಣೆಯಾಯಿತು. ಆ ಕಾಲದ ಮಹಾರಾಷ್ಟ್ರ ಸಾಧುಸಂತರಲ್ಲಿ **ಜ್ಞಾನದೇವ, ಏಕನಾಥ, ನಾಮದೇವ, ತುಕಾರಾಮ, ರಾಮದಾಸರು** ಅತಿ ಶ್ರೇಷ್ಠರು. ಇವರ ಕೀರ್ತಿಯು ಇಂದಿಗೂ ಬೆಳಗುತ್ತಿದೆ. ರಾಮದಾಸರ ತರುವಾಯದಲ್ಲೂ ಮತ್ತೆಷ್ಟೋ ಭಕ್ತರು ಉದಯಿಸಿ ಅವರ ಪರಂಪರೆಯನ್ನು ಮುಂದುವರಿಸಿದರು. ಮಹಾರಾಷ್ಟ್ರ ಸಾಧುಸಂತರಲ್ಲಿ ಅನೇಕರು ಪಂಢರಪುರದ ವಿಠ್ಠಲಭಕ್ತರು. ಈ ವಿಠ್ಠಲ ಸಂಪ್ರದಾಯವನ್ನು **ವಾರಕರಿ ಪಂಥ** ವೆಂದು ಕರೆಯಲಾಗುತ್ತಿದೆ. ಇದರಲ್ಲಿ ಎಲ್ಲ ಜಾತಿಗಳ ಹಿಂದುಗಳು—ಬ್ರಾಹ್ಮಣರಿಂದ ಮೊದಲುಗೊಂಡು ಅಂತ್ಯಜರ ವರೆಗೂ – ಸ್ತ್ರೀಪುರುಷರೂ, ವಿವಿಧ ಉದ್ಯೋಗ ಧಂದೆಯವರೂ

೧. ಇದಕ್ಕೆ ಕನಕನ ಕಿಂಡಿ ಎಂದು ಹೆಸರುಂಟಾಗಿದೆ.

ಆಗಿಹೋಗಿರುವರು. ದೇವರ ಪ್ರಸನ್ನತೆಗೆ ಕುಲವು ಕಾರಣವಲ್ಲ, ಭಕ್ತಿಯೇ ಕಾರಣವು ಎಂಬ ತಿಳಿವನ್ನು ಇವರು ಜನರಲ್ಲಿ ಬಿತ್ತರಿಸಿದರು.

**ಜ್ಞಾನದೇವ** (೧೨೭೫–೧೨೯೬) :— ಇವರು ಮಹಾರಾಷ್ಟ್ರದ ವಿಠ್ಠಲ ಪಂತನೆಂಬ ಬ್ರಾಹ್ಮಣ ಕುಲಕರ್ಣಿಯ ಮಕ್ಕಳು. ಇವರ ತಾಯಿಯು ಪುಣೆಯ ಹತ್ತಿರಿರುವ "ಆಳಂದಿ" ಎಂಬ ಊರಿನ ರುಕ್ಮಿಣಿಬಾಯಿ (ರಖುಮಾಬಾಯಿ). ವಿಠ್ಠಲ ಪಂತನು ತನ್ನ ಹೆಂಡತಿಯ ಸಮ್ಮತಿಯನ್ನು ಪಡೆಯದೆ ಕಾಶಿಗೆ ಹೋಗಿ ಸಂನ್ಯಾಸ ದೀಕ್ಷೆ ತೆಗೆದುಕೊಂಡನು. ಆದರೆ ಮುಂದೆ ಅದೇ ಗುರುಗಳ ಆಜ್ಞೆಯ ಮೇರೆಗೆ ಅವನು ಮತ್ತೆ ಊರಿಗೆ ಬಂದು ಗೃಹಸ್ಥಾಶ್ರಮಿಯಾದನು. ಬಳಿಕ ಅವನಿಗೆ ನಾಲ್ಕು ಮಕ್ಕಳಾದವು— ನಿವೃತ್ತಿನಾಥ, ಜ್ಞಾನದೇವ, ಸೋಪಾನ ದೇವರೆಂಬ ಗಂಡುಮಕ್ಕಳು ಮತ್ತು ಮುಕ್ತಾಬಾಯಿ ಎಂಬ ಹೆಣ್ಣುಮಗಳು.



ಜ್ಞಾನದೇವ

ತಮ್ಮ ೧೫ ನೆಯ ವಯಸ್ಸಿನಲ್ಲಿಯೇ ಜ್ಞಾನದೇವರು ಭಗವದ್ಗೀತೆಗೆ ಮರಾಠಿ ಭಾಷೆಯಲ್ಲಿ 'ಭಾವಾರ್ಥದೀಪಿಕೆ' ಎಂಬ ವ್ಯಾಖ್ಯಾನವನ್ನು ಬರೆದರು. ಈ ಗ್ರಂಥಕ್ಕೆ ರೂಢಿಯಲ್ಲಿ 'ಜ್ಞಾನೇಶ್ವರೀ' ಎಂದು ಹೆಸರಿದೆ. ಇದು ಮರಾಠೀ ಭಾಷೆಯಲ್ಲಿಯ ಅಪ್ರತಿಮ ಗ್ರಂಥವೆಂದು ಹೆಸರಾಗಿದೆ. ಇದರಲ್ಲಿ ಜ್ಞಾನದೇವರು ಕರ್ಮಮಾರ್ಗವನ್ನು ದೂಷಿಸದೆ, ಜ್ಞಾನಕ್ಕೂ ಭಕ್ತಿಗೂ ಹೆಚ್ಚು ಪ್ರಶಸ್ತಿಯನ್ನು ಕೊಟ್ಟಿರುವರು. ಮುಂದೆ ೫ ವರ್ಷಕಾಲ ಇವರು ತೀರ್ಥಯಾತ್ರೆಗಾಗಿ ದೇಶ ಸಂಚಾರ ಮಾಡಿದರು. ಹೋದ ಹೋದಲ್ಲಿ ಜನರ ಮನಸ್ಸು ಭಕ್ತಿಯ ಕಡೆಗೆ ಒಲಿಯುವಂತೆ ಪ್ರಯತ್ನಿಸಿದರು. ಜಾತಿಯ ದುರಭಿಮಾನವನ್ನು ಮರೆಸುವ ಕಾರ್ಯದಲ್ಲಿ ತೊಡಗಿದರು. ಇವರು ತಮ್ಮ ೨೧ ನೆಯ ವಯಸ್ಸಿನಲ್ಲಿ ಆಳಂದಿಯಲ್ಲಿ ದೇಹವಿಟ್ಟರು. ಇವರೇ 'ವಾರಕರಿ' ಪಂಥವನ್ನು ಪ್ರಾರಂಭಿಸಿದರು.

**ಏಕನಾಥ** (೧೫೩೩–೧೫೯೯):– ಇವರು ಗೋದಾವರೀ ತೀರದಲ್ಲಿರುವ ಪೈಠಣ ನಗರದ ಒಂದು ಬ್ರಾಹ್ಮಣಕುಲದಲ್ಲಿ ಜನಿಸಿದರು. ಚಿಕ್ಕಂದಿನಲ್ಲಿಯೇ ಇವರ ತಂದೆತಾಯಿಗಳು ತೀರಿಹೋದರು. ಅಜ್ಜನೇ ಇವರಿಗೆ ಅಕ್ಷರಾಭ್ಯಾಸ

ವನ್ನೂ ಉಪನಯನವನ್ನೂ ಮಾಡಿಸಿದನು. ಬಾಲ್ಯದಿಂದಲೂ ಏಕನಾಥರಲ್ಲಿ ದೈವಭಕ್ತಿ ಕಂಡು ಬರುತ್ತಿತ್ತು. ಈಗ ಗುರುಸೇವೆ, ಬ್ರಹ್ಮಜ್ಞಾನ ಸಂಪಾದನೆ ಗಳಿಗಾಗಿ ಇವರ ಮನಸ್ಸು ಹಂಬಲಿಸಿತು. ಇದೇ ಸಮಯಕ್ಕೆ ದೇವಗಿರಿಯಲ್ಲಿ ಜನಾರ್ದನ ಸ್ವಾಮಿಗಳೆಂಬ ಪ್ರಸಿದ್ಧ ದತ್ತಭಕ್ತರಿರುವರೆಂಬ ಸುದ್ದಿಯು ಇವರ ಕಿವಿಗೆ ಬಂದಿತು. ಕೂಡಲೆ, ಇವರು ಅಲ್ಲಿಗೆ ಹೋಗಿ ಅವರ ಶಿಷ್ಯರಾದರು. ಒಮ್ಮನಸ್ಸಿನಿಂದ ಗುರುಸೇವೆಯಲ್ಲಿ ತೊಡಗಿದರು. ಹೆಚ್ಚಿನ ವಿದ್ಯೆಯನ್ನು ಕಲಿತರು. ಜನಾರ್ದನ ಸ್ವಾಮಿಗಳೇ ಇವರಿಗೆ ಮಂತ್ರೋಪದೇಶವನ್ನು ಮಾಡಿ ಬ್ರಹ್ಮಜ್ಞಾನದ ಗುಟ್ಟನ್ನು ತಿಳಿಸಿಕೊಟ್ಟರು.

ಮುಂದೆ, ಗುರುಗಳ ಅಪ್ಪಣೆಯಮೇರೆಗೆ ಏಕನಾಥರು ಪೈಠಣಕ್ಕೆ ಮರಳಿ ಬಂದು ವಿವಾಹಿತರಾದರು. ಇವರು ಮರಾಠೀ ಭಾಷೆಯಲ್ಲಿ ಬರೆದ 'ಭಾವಾರ್ಥ ರಾಮಾಯಣ' ಮತ್ತು 'ಭಾಗವತ' (ಭಾಗವತ ಪುರಾಣದ ೧೧ ನೆಯ ಅಧ್ಯಾಯದ ವಿವರಣೆ) ಗಳು ಸುಪ್ರಸಿದ್ಧ ಗ್ರಂಥಗಳಾಗಿವೆ. ಇದಲ್ಲದೆ, ಇವರು ಪುರಾಣ, ಪ್ರವಚನ, ಕೀರ್ತನೆಗಳಿಂದ ಭಕ್ತಿಪಂಥವನ್ನು ಪ್ರಸಾರ ಮಾಡಿದರು. ಕೊನೆಗೆ, ಗೋದಾವರೀ ನದಿಯ ನೀರಿನಲ್ಲಿ ಮುಳುಗಿ ಜಲಸಮಾಧಿಯನ್ನು ಹೊಂದಿದರು.

**ತುಕಾರಾಮ** (೧೬೦೮–೧೬೪೯):— ಇವರು ಹುಟ್ಟಿದ ಊರು ದೇಹೂ (ದೇವಗಾಂವ). ಇದು ಪುಣೆಯಿಂದ ೧೮ ಮೈಲು ದೂರದಲ್ಲಿ ಇಂದ್ರಾಯಣೀ ನದಿಯ ತೀರದ ಊರು. ಇವರು ವ್ಯಾಪಾರದಲ್ಲಿ ತೊಡಗಿದ ಮನೆತನದವರು. ಇವರ ತಂದೆ ತಾಯಿಗಳು ಭಗವದ್ಭಕ್ತರು. ಪಂಢರಪುರದ ವಿಠ್ಠಲನು ಇವರ ಕುಲದೇವತೆ. ಮನೆಯಲ್ಲಿ ಯಾವಾಗಲೂ ಭಜನೆ, ಕೀರ್ತನೆಗಳು ನಡೆ ಯುತ್ತಿದ್ದವು. ತುಕಾರಾಮರು ಬಾಲ್ಯದಿಂದಲೂ ಭಕ್ತಿಯುತರು, ಸರಳ ಸ್ವಭಾವದವರು. ೧೨–೧೩ ನೆಯ ವಯಸ್ಸಿನಲ್ಲಿ ಇವರ ಮದುವೆಯಾಯಿತು. ಕೆಲವು ವರ್ಷಗಳ ವರೆಗೆ ಸಂಸಾರವು ಸುಖಮಯವಾಗಿ ಸಾಗಿತು. ಆದರೆ ಮುಂದೆ ದುಃಖಗಳು ಒಂದರ ಮೇಲೊಂದರಂತೆ ಬರತೊಡಗಿದವು. ತಂದೆ ತಾಯಿಗಳು ಮರಣಹೊಂದಿದರು. ಹೆಂಡತಿಯೂ ಹಿರಿಯ ಮಗನೂ ಗತಿಸಿ ದರು. ವ್ಯಾಪಾರದಲ್ಲಿ ಹಾನಿಯಾಯಿತು. ಇವೇ ಮೊದಲಾದ ಕಾರಣಗಳಿಂದ ಇವರಿಗೆ ಸಂಸಾರದಲ್ಲಿ ವಿರಕ್ತಿ ಉಂಟಾಯಿತು. ಆಗ ಇವರು ಊರ ಸಮೀಪದ ಬೆಟ್ಟಕ್ಕೆ ಹೋಗಿ ಧ್ಯಾನಮಗ್ನರಾಗಿ ಕೂಡಹತ್ತಿದರು. ಮರಳಿ ಮನೆಗೆ ಬಂದ

ಮೇಲೂ ಭಜನೆ ಮುಂತಾದವುಗಳಲ್ಲಿ ತೊಡುಗುತ್ತಿದ್ದರು. ಮುಂದೆ ಇವರಿಗೆ ಗೀತೆಗಳನ್ನು ರಚಿಸುವ ಅಪೇಕ್ಷೆಯಾಯಿತು. ಜ್ಞಾನೇಶ್ವರ, ನಾಮದೇವ, ಏಕನಾಥ ಸಾಧುಗಳ ಗ್ರಂಥಗಳನ್ನು ಓದಿದರು. ತಾವೇ 'ಅಭಂಗ' ಗಳನ್ನು ರಚಿಸಿದರು. (ಅಭಂಗಗಳೆಂದರೆ ಭಕ್ತಿಪಂಥದ ಪದ್ಯಗಳು). ಅವು ಅತ್ಯಂತ ಜನಪ್ರಿಯವಾದವು. ತುಕಾರಾಮರ ಕೀರ್ತಿಯು ಬೆಳೆಯಿತು. ಒಮ್ಮೆ ಇವರನ್ನು ಶಿವಾಜಿಯು ಭೆಟ್ಟಿಯಾದನು. ಇವರು ಅವನಿಗೆ ರಾಜಧರ್ಮವನ್ನು ಉಪದೇಶ ಮಾಡಿದರು. ಇವರು ವರ್ಷದಲ್ಲಿ ಎರಡು ಸಲ ತಪ್ಪದೆ ಪಂಢರಪುರಕ್ಕೆ ವಾರಕರಿ ಯಾಗಿ ಹೋಗುತ್ತಿದ್ದರು. ಕೊನೆಗೆ, ಇಂದ್ರಾಯಣೀ ನದಿಯ ದಂಡೆಯಲ್ಲಿ ಭಜನೆಯಲ್ಲಿ ತೊಡಗಿದಾಗಲೊ ಅಥವಾ ಆ ನದಿಯಲ್ಲಿ ಮುಳುಗಿಯೊ ಅದೃಶ್ಯ ರಾದರಂತೆ. ಆ ನದಿಯ ದಂಡೆಯಮೇಲೆ ಪಾಂಡುರಂಗ (ವಿಠ್ಠಲ) ನ ದೇವಾಲಯವಿದೆ.

**ರಾಮದಾಸ** (೧೬೦೮–೧೬೮೧) :— ಇವರು ಹೈದರಾಬಾದ ರಾಜ್ಯದ 'ಜಾಂಬ' ಎಂಬ ಊರಿನಲ್ಲಿ ಜನಿಸಿದರು. ಇವರ ತಂದೆ, ಸೂರ್ಯಾಜಿ ಪಂತನು ರಾಮಭಕ್ತನು, ಸೂರ್ಯೋಪಾಸಕನು. ರಾಮದಾಸರ ಮೂಲ ಹೆಸರು ನಾರಾ ಯಣ. ರಾಮನವಮಿಯ ದಿನ ರಾಮಜನ್ಮದ ಹೊತ್ತಿಗೇ ಇವರ ಜನನವಾಯಿತು. ನಾರಾಯಣನ ೭ ನೆಯ ವಯಸ್ಸಿನಲ್ಲಿ ತಂದೆ ತೀರಿದನು. ಚಿಕ್ಕಂದಿನಿಂದಲೂ ನಾರಾಯಣನು ಗಟ್ಟಿ ದೇಹದವನು, ಏಕಾಂತವಾಸ ಪ್ರಿಯನು, ದೈವಭಕ್ತಿ ಯುಳ್ಳವನು. ಇವನ ತಾಯಿಯು ೧೨ ನೆಯ ವಯಸ್ಸಿನಲ್ಲಿ ಇವನ ಮದುವೆ ಹೂಡಿದಳು. ಆದರೆ ಮದುವೆಯ ಮಂತ್ರ ನಡೆದಾಗಲೇ ಇವನು ಮನೆಬಿಟ್ಟು ಹೊರಬಿದ್ದನು. ಗೋದಾವರೀ ನದಿಯ ದಂಡೆಯಲ್ಲಿಯ ನಾಸಿಕದ ಬಳಿಯಲ್ಲಿ ೧೨ ವರ್ಷ ತಪಸ್ಸು ಮಾಡಿದನು. ನಿತ್ಯವೂ ನದಿಯಲ್ಲಿ ಸ್ನಾನ, 'ಗಾಯತ್ರೀ' ಮಂತ್ರ, ರಾಮನಾಮ ಇವುಗಳ ಅಖಂಡ ಜಪ. ಇದರಿಂದ ನಾರಾಯಣನನ್ನು ಜನರು ರಾಮದಾಸರೆಂದು ಕರೆಯತೊಡಗಿದರು. ಮುಂದೆ ಇವರು ಅಖಿಲ– ಭಾರತದಲ್ಲಿ ೧೦–೧೨ ವರ್ಷ ತೀರ್ಥಯಾತ್ರೆ ಕೈಕೊಂಡರು. ಹೋದಹೋದಲ್ಲಿ ಶಿಷ್ಯರನ್ನು ಕಲೆಹಾಕಿದರು. ಮಠಗಳನ್ನು ಕಟ್ಟಿದರು. ಈ ಮಠಗಳಲ್ಲಿ 'ಚಾಫಳ' ಗ್ರಾಮದ ಮಠವು ಅತಿ ಪ್ರಸಿದ್ಧವಾಯಿತು. ಊರೂರಿಗೆ ಮಾರುತಿ ಮೂರ್ತಿ ಗಳನ್ನು ಇವರು ಸ್ಥಾಪಿಸಿದರು. ರಾಮೋತ್ಸವಗಳನ್ನು ಜರುಗಿಸಿದರು. ಇದೇ ಸಮಯದಲ್ಲಿ ಸ್ವರಾಜ್ಯ ಸ್ಥಾಪನೆಯಲ್ಲಿ ತೊಡಗಿದ ಶಿವಾಜಿಯು ಇವರನ್ನು

ಭೆಟ್ಟಿಯಾದನು. ಇವರು ಆತನ ಕಾರ್ಯದಲ್ಲಿ ಸ್ಫೂರ್ತಿಕೊಟ್ಟು ಅವನಿಗೆ ರಾಜ ಗುರುಗಳಾದರು. (ವಿದ್ಯಾರಣ್ಯರು ವಿಜಯನಗರದ ೧ನೆಯ ಹರಿಹರನಿಗೆ ರಾಜಗುರುಗಳಾದಂತೆ). ಶಿವಾಜಿಯು ಇವರಿಗಾಗಿ ಸಾತಾರೆಯ ಹತ್ತಿರ 'ಪರಳಿ' ಎಂಬಲ್ಲಿ ಒಂದು ಮಠವನ್ನು ಕಟ್ಟಿಸಿ ಕೊಟ್ಟು ಅದಕ್ಕೆ 'ಸಜ್ಜನಗಡ' ವೆಂದು ಹೆಸರಿಟ್ಟನು. ಆ ಮುಂದೆ, ಇದೇ ರಾಮದಾಸರ ವಾಸಸ್ಥಾನವಾಯಿತು.

ರಾಮದಾಸರು ರಚಿಸಿದ ಗ್ರಂಥಗಳಲ್ಲಿ 'ದಾಸಬೋಧ' ಮತ್ತು 'ಮನಾಚೇ ಶ್ಲೋಕ' ಎಂಬವು ಮರಾಠೀ ಸಾಹಿತ್ಯದಲ್ಲಿ ಶ್ರೇಷ್ಠ ಗ್ರಂಥಗಳಾಗಿವೆ. ಇವರು ಸ್ವಧರ್ಮರಕ್ಷಣೆ, ಸ್ವರಾಜ್ಯಸ್ಥಾಪನೆಗಳ ಮಹಾಕಾರ್ಯದಲ್ಲಿ ಅತ್ಯಂತ ಸಮರ್ಥರಾದವರೆಂದು ಇವರಿಗೆ **ಸಮರ್ಥ ರಾಮದಾಸ**ರೆಂಬ ಹೆಸರು ಬಂದಿದೆ.

**ಗುಜರಾತದ ನರಸಿಂಹ ಮೆಹತಾ** (೧೪೧೫-೧೪೮೧) :— ಇವರು ಜುನಾಗಡದ ನಾಗರ ಬ್ರಾಹ್ಮಣ ಮನೆತನದವರು. ಚಿಕ್ಕಂದಿನಲ್ಲೇ ತಾಯಿ ತಂದೆಗಳನ್ನು ಕಳೆದುಕೊಂಡರು. ಮೂಲತಃ ಇವರ ಮನೆತನವು 'ಶಿವ-ಭಕ್ತ'ರದು; ಆದರೆ ಇವರು ಮಾತ್ರ ಕೃಷ್ಣಭಕ್ತರಾದರು. ಗುಜರಾತದಲ್ಲೆಲ್ಲ ತಮ್ಮ ಹಾಡುಗಳಿಂದ ಕೃಷ್ಣಭಕ್ತಿಯನ್ನು ಪ್ರಚಾರ ಮಾಡಿದರು. ಗುಜರಾತೀ ಭಾಷೆಯಲ್ಲಿ ಇವರು ಬರೆದ 'ರಾಸಮಂಡಲ' ಎಂಬ ಗ್ರಂಥವು ರಸಭರಿತವಾಗಿದೆ. ಶ್ರೀಕೃಷ್ಣನು ವೃಂದಾವನದ ಗೋಪಿಕಾಸ್ತ್ರೀಯರೊಡನೆ ಆಡಿದ 'ರಾಸಕ್ರೀಡೆ' ಎಂಬ ನೃತ್ಯವನ್ನು ವರ್ಣಿಸಿ ಇವರು ಅನೇಕ ಭಕ್ತಿಗೀತಗಳನ್ನು ಬರೆದಿದ್ದಾರೆ. ಇವರು ಒಳ್ಳೇ ನರ್ತಕರೂ ಆಗಿದ್ದರು.

**ಬಂಗಾಲದ ಚೈತನ್ಯ** (೧೪೮೫-೧೫೩೩) :— ಇವರು ಬಂಗಾಲದ ಸುಪ್ರಸಿದ್ಧ ಕೃಷ್ಣಭಕ್ತರು. ಇವರ ಮೊದಲಿನ ಹೆಸರು ವಿಶ್ವಂಭರ. ಬಂಗಾಲದ ನದಿಯಾ ಜಿಲ್ಹೆಯಲ್ಲಿಯ ನವದ್ವೀಪವೆಂಬಲ್ಲಿ ಇವರು ಜನಿಸಿದರು. ಇವರ ತಂದೆ ಜಗನ್ನಾಥ ಮಿಶ್ರನೆಂಬ ಅದ್ವೈತ ಬ್ರಾಹ್ಮಣನು. ವಿಶ್ವಂಭರನು ಮೊದಲು ತರ್ಕ-ವ್ಯಾಕರಣ-ವೇದಾಂತ ಶಾಸ್ತ್ರಗಳಲ್ಲಿ ಉದ್ದಾಮ ಪಂಡಿತನೆನಿಸಿದನು. ಬಳಿಕ ಮದುವೆಯಾಗಿ ಸಂಸಾರದಲ್ಲಿ ತುಂಬ ಲೋಲುಪನಾದನು. ಆದರೆ ತನ್ನ ೨೪ನೆಯ ವಯಸ್ಸಿನಲ್ಲಿ **ಈಶ್ವರಪುರಿ** ಎಂಬ ಸಾಧುಗಳ ದರ್ಶನದಿಂದ ವೈರಾಗ್ಯಶಾಲಿಯಾದನು. ಅದೇ ವರುಷ **ಕೇಶವಭಾರತಿ**ಗಳೆಂಬವರಿಂದ ಸಂನ್ಯಾಸವನ್ನು ಸ್ವೀಕರಿಸಿ 'ಕೃಷ್ಣ ಚೈತನ್ಯ' ಎಂಬ ಹೆಸರು ಪಡೆದನು. ಮುಂದೆ ೬ ವರುಷ ಅಖಿಲಭಾರತದಲ್ಲಿ ತೀರ್ಥಯಾತ್ರೆ ಕೈಕೊಂಡು ಕೊನೆಗೆ

ಓರಿಸಾದೇಶದ ಪ್ರಸಿದ್ಧ ವೈಷ್ಣವ ಕ್ಷೇತ್ರವಾದ ಪುರಿಯಲ್ಲಿ ವಾಸವಾದನು. ಅಲ್ಲಿದ್ದಾಗ ಬೆಳಗಿನಲ್ಲಿ ಸ್ನಾನ, ಇಡಿ ದಿನ ಕೃಷ್ಣಭಜನೆ, ಬಳಿಕ ಪ್ರಸಾದ ಸ್ವೀಕಾರ; ಸಂಜೆಯಲ್ಲಿ ಭಾಗವತಾದಿ ಧರ್ಮಗ್ರಂಥಗಳನ್ನು ಅನುಸರಿಸಿ ಬಂಗಾಲಿಯಲ್ಲಿ ಸರಸ ಸಂಭಾಷಣೆ; ರಾತ್ರಿಯಲ್ಲಿ ತಾಳಮೇಳಗಳೊಡನೆ ಮತ್ತೆ ಕೃಷ್ಣ ಭಜನೆ—ಇವೇ ಇವನ ದಿನಚರ್ಯೆಗಳು. ಮನುಷ್ಯನ ನಿಜವಾದ ಆನಂದಕ್ಕೆ ಭಕ್ತಿಯೇ ಮುಖ್ಯವೆಂದೂ ಅದಕ್ಕೆ ನಾಮಸ್ಮರಣೆಯೇ ಸಾಧನವೆಂದೂ ಇವನ ಮತ. ಪ್ರೇಮಭಕ್ತಿಗಳಿಂದ, ಸಂಗೀತ ನರ್ತನಗಳಿಂದ ಆನಂದಪರವಶನಾದಾಗಲೇ ಮನುಷ್ಯನಿಗೆ ದೇವರ ಸಾಕ್ಷಾತ್ಕಾರವಾಗುವದೆಂಬುದೇ ಈತನ ಸಂದೇಶ. ಈತನು ಜಾತಿ ಪಂಥಗಳನ್ನೆಣಿಸದೆ ಅಂತ್ಯಜರನ್ನೂ ಮುಸಲ್ಮಾನರನ್ನೂ ತನ್ನ ಶಿಷ್ಯರನ್ನಾಗಿ ಮಾಡಿಕೊಂಡನು. ಹೆಣ್ಣುಮಕ್ಕಳೂ ಇವನ ಪಂಥದ ಅನುಯಾಯಿಗಳಾದರು. ಬಂಗಾಲ, ಓರಿಸಾಗಳಲ್ಲಿ ಈ ಪಂಥದ ಅನೇಕ ಮಠಗಳು ಇಂದಿಗೂ ನಡೆದಿವೆ. ಈತನ ಬಂಗಾಲೀ ಭಕ್ತಿಗೀತಗಳನ್ನು ಬಂಗಾಲದಲ್ಲಿ ಪ್ರತಿ ಹಳ್ಳಿಯಲ್ಲೂ ಇಂದಿಗೂ ಹಾಡುತ್ತಾರೆ. ಇವನು ಸುಂದರಕಾಯನಾದುದರಿಂದ ಇವನಿಗೆ 'ಗೌರ' 'ಗೌರಾಂಗ' 'ಗೌರಾಂಗಪ್ರಭು' ಎಂದು ಹೆಸರುಗಳು ಉಂಟಾದವು. ಈತನು ಕೃಷ್ಣಭಕ್ತಿಯ ಉನ್ಮಾದದಲ್ಲಿ ಒಮ್ಮೆ ಸಮುದ್ರದಂಡೆಯ ಮೇಲೆ ನಿಂತು ಅದು ಯಮುನಾ ನದಿಯೆಂದು ಭಾವಿಸಿ ಗೋಪಿಕಾ ಸ್ತ್ರೀಯರೊಡನೆ ಕೂಡಿಕೊಳ್ಳಲು ಅದರಲ್ಲಿ ಹಾರಿಕೊಂಡನು. ಅದೇ ಇವನ ಕೊನೆಯಾಯಿತು.



ಮೀರಾಬಾಯಿ.

**ಮೇವಾಡದ ಮೀರಾಬಾಯಿ** (೧೫ ನೆಯ ಶತಮಾನ) :— ಈ ಮೇವಾಡದ ಸಾಧ್ವಿಯು ೧೫ ನೆಯ ಶತಮಾನದಲ್ಲಿ ರಾಜಪುತ

ಸ್ಥಾನದಲ್ಲಿ ಆಗಿಹೋದ ಹೆಸರಾದ ಕೃಷ್ಣಭಕ್ತಳು. ಈಕೆಯು ಬಲು ಚೆಲುವೆ. ಕಾವ್ಯ ಮತ್ತು ಗಾನ ಇವೆರಡು ಕಲೆಗಳನ್ನು ಪರಮಾತ್ಮನ ಪ್ರಾಪ್ತಿಗಾಗಿ ಬಳಸಿಕೊಂಡ ಶ್ರೇಷ್ಠಸಾಧ್ವಿ ಇವಳು. ಈಕೆಯ ತವರುಮನೆ ಮೇವಾಟ; ಗಂಡನ ಮನೆ ಮೇವಾಡ. ಈಕೆಯ ತಂದೆ ರತ್ನಸಿಂಹನೂ ಕೃಷ್ಣಭಕ್ತನಿದ್ದನು. ಅಂತೆಯೇ ಬಾಲ್ಯದಿಂದಲೂ ಅವಳಲ್ಲಿ ಭಕ್ತಿಭಾವನೆ ಬೆಳೆದು ಬಲಿಯುತ್ತ ನಡೆಯಿತು. ಚಿತ್ತೂರಿನ ರಾಣಾಕುಂಭನನ್ನು ಕೈಹಿಡಿದ ಮೇಲೂ ಶ್ರೀಕೃಷ್ಣನೇ ತನ್ನ ಪತಿಯೆಂದು ಭಾವಿಸಿದಳು! ಆದ್ದರಿಂದ ಸಂಸಾರದಲ್ಲಿ ವಿರಸವುಂಟಾಯಿತು. ಗಂಡನು ಕೈಬಿಟ್ಟನು. ಮುಂದೆ ಈಕೆ ವೃಂದಾವನಕ್ಕೆ ಹೋಗಿ **ರೂಪಗೋಸಾವಿ** ಸ್ವಾಮಿಗಳ ಶಿಷ್ಯಳಾದಳು. ಹಿಂದಿಯಲ್ಲಿ ಗೀತಗಳನ್ನು ರಚಿಸುತ್ತ ಗಾನಲೋಲಳಾಗಿ ಭಗವದ್ಭಕ್ತಳೆಂದು ಹೆಸರಾದಳು. ಈಕೆಯ ಗೀತಗಳ ಸವಿಯು ಜನತೆಯನ್ನು ಸನ್ಮಾರ್ಗಕ್ಕೆ ಹಚ್ಚಿತು. 'ರಾಗ ಗೋವಿಂದ' ವೆಂಬ ಈಕೆಯ ಭಕ್ತಿರಸದ ಕಾವ್ಯವು ಹಿಂದೀ ಭಾಷೆಯಲ್ಲಿ ಪ್ರಸಿದ್ಧವಿದೆ. ಯಾವಾಗಲೂ ಭಕ್ತಿಯ ಭರದಲ್ಲಿ ಈಕೆಗೆ ಅರಿವೇ ತಪ್ಪುತ್ತಿತ್ತು; ಕೊನೆಗೊಮ್ಮೆ ದ್ವಾರಕೆಯಲ್ಲಿ ಶ್ರೀಕೃಷ್ಣನ ಕೀರ್ತನೆ ಮಾಡುತ್ತ ಕುಣಿಯುತ್ತ ಎಚ್ಚರದಪ್ಪಿದವಳು ಏಳಲೇ ಇಲ್ಲ.

**ಕಾಶಿಯ ತುಳಸೀದಾಸ** (೧೫೩೨–೧೬೨೩) :— ಇವರು ಉತ್ತರ ಭಾರತವನ್ನೆಲ್ಲ ತಮ್ಮ ರಾಮಭಕ್ತಿಯಿಂದ ಉದ್ಧರಿಸಿದ ಮಹಾನುಭಾವರು. ಯಮುನಾನದಿಯ ದಕ್ಷಿಣದಲ್ಲಿರುವ ಬಾಂದಾ ಜಿಲ್ಹೆಗೆ ಸೇರಿದ ರಾಜಪುರವು ಇವರ ಜನ್ಮಸ್ಥಳ. ಇವರು ಒಂದು ಬ್ರಾಹ್ಮಣಕುಲದಲ್ಲಿ ಮೂಲಾ ನಕ್ಷತ್ರದಲ್ಲಿ ಹುಟ್ಟಿದರೆಂದೂ ಆದುದರಿಂದ ತಂದೆತಾಯಿಗಳು ಆ ಮಗುವನ್ನು ತೊರೆದರೆಂದೂ ಹೇಳುತ್ತಾರೆ. ನರಸಿಂಹದಾಸನೆಂಬ ಸಾಧುವೊಬ್ಬನು ಆ ಮಗುವನ್ನು ತುಳಸಿಯ ನೀರಿನಿಂದ ಸಿಂಪಡಿಸಿ ಪಾಲಿಸಿದನಾದ್ದರಿಂದ ಮಗುವಿಗೆ ತುಳಸೀದಾಸ



ತುಳಸೀದಾಸ

ನೆಂದು ಹೆಸರು ಬಂದಿತು. ಸಾಕುತಂದೆಯೊಡನೆ ಈತನು ತೀರ್ಥ ಕ್ಷೇತ್ರಗಳಲ್ಲಿ ಸಂಚಾರ ಮಾಡಿದನು. ತರುಣನಾದ ಬಳಿಕ ರತ್ನಾವಳೀ ಎಂಬಾಕೆಯನ್ನು ಮದುವೆಯಾದನು. ಸರಸ ಸಂಸಾರವು ಕೆಲ ಕಾಲ ಸಾಗಿತು. ಒಮ್ಮೆ ಸತಿಯು ತವರುಮನೆಗೆ ಹೋಗಿದ್ದಳು. ಆಕೆಯ ಅಗಲಿಕೆಯನ್ನು ತಾಳ ಲಾರದೆ ಇವನು ಬಿರುಬಿಸಿಲಲ್ಲೇ ಹೊರಟು ಮಾವನ ಮನೆಗೆ ತಲುಪಿದನು. ಆಗ ಸತಿಯು ನಗೆಯಿಂದ "ಇಷ್ಟೊಂದು ಪ್ರೇಮವು ಶ್ರೀರಾಮನಲ್ಲಿ ಇದ್ದರೆ ...." ಎಂದೆನ್ನುವಷ್ಟರಲ್ಲಿಯೇ ಇವನ ಹೃದಯದಲ್ಲಿ ದಿವ್ಯಪ್ರಕಾಶವು ಮೂಡಿ ಇವನು ಹೊರಕ್ಕೆ ಹೊರಟೇ ಬಿಟ್ಟನು. ಆಗ ಆಕೆಗೆ ನಗೆ ಹೋಗಿ ಹೊಗೆ ಯಾಯಿತು. ಮುಂದೆ ಈತನು ಉತ್ತರ ಭಾರತದ ತೀರ್ಥ ಕ್ಷೇತ್ರಗಳನ್ನು ಸುತ್ತುತ್ತ ಸಾಧುಸಂತರ ಸಹವಾಸದಲ್ಲಿ ಇರತೊಡಗಿದನು. ಬಲವಾದ ಇಂದ್ರಿಯ ನಿಗ್ರಹದಿಂದ ಗೋಸ್ವಾಮಿ ತುಳಸೀದಾಸರೆಂದು ಪ್ರಸಿದ್ಧಿ ಪಡೆದನು. ತುಳಸೀ ದಾಸರು ಅಕಬರನ ಸಮಕಾಲೀನರು. ಅವನ ದರಬಾರಿನಲ್ಲಿಯ ತೋಡರಮಲ್ಲ, ಮಾನಸಿಂಗರು ಇವರ ಪರಮ ಮಿತ್ರರು. ಇವರು ಹಿಂದೀ ಭಾಷೆಯಲ್ಲಿ ರಚಿಸಿದ ಹಲವಾರು ಗ್ರಂಥಗಳಲ್ಲಿ "ರಾಮಚರಿತಮಾನಸ" ವೆಂಬುದು ಅತ್ಯಂತ ರಸ ಭರಿತವಾದ ಮಹಾಕಾವ್ಯವು; ಇದಕ್ಕೆ ವಾಡಿಕೆಯಲ್ಲಿ 'ತುಳಸೀರಾಮಾಯಣ' ವೆಂದು ಹೆಸರಿದೆ. ಅಯೋಧ್ಯೆ ಮತ್ತು ಕಾಶಿ ಇವು ಇವರ ಮುಖ್ಯ ಕಾರ್ಯ ಕ್ಷೇತ್ರಗಳು. ಇವರು ಕೊನೆಯ ದಿನಗಳನ್ನು ಕಾಶಿಯಲ್ಲಿ ಕಳೆದು ಅಲ್ಲಿಯೇ ಕಾಲವಾದರು. ಇವರು ಅಲ್ಲಿ ವಾಸವಾಗಿದ್ದ ಸ್ಥಳವನ್ನು 'ತುಳಸೀಘಾಟ' ವೆಂದು ಇಂದಿಗೂ ಕರೆಯುತ್ತಾರೆ.

## ಅಭ್ಯಸನಗಳು.

(೧) ಆಳ್ವಾರರಲ್ಲಿ ಬೇರೆ ಬೇರೆ ಜಾತಿಯವರು ಆಗಿಹೋದರು. ಈ ಹೇಳಿಕೆಗೆ ಉದಾಹರಣೆಗಳನ್ನು ಕೊಡಿರಿ.

(೨) ಕೆಳಗೆ ಹೆಸರುಗಳ ಎರಡು ಪಟ್ಟಿಗಳನ್ನು ಕೊಟ್ಟಿರುತ್ತದೆ. (ಒಂದನೆಯ ಪಟ್ಟಿಯಲ್ಲಿ ಕೆಲವು ಗ್ರಂಥಗಳ ಹೆಸರುಗಳಿವೆ. ಎರಡನೆಯದರಲ್ಲಿ ಆ ಗ್ರಂಥಗಳಿಗೆ ಸಂಬಂಧಿಸಿದ ಗ್ರಂಥಕಾರರ ಹೆಸರುಗಳಿವೆ). ಒಂದನೆಯ ಪಟ್ಟಿಯಲ್ಲಿಯ ಪ್ರತಿಯೊಂದು ಹೆಸರಿನ ಮುಂದೆ ಎರಡನೆಯದರಲ್ಲಿಯ ಯೋಗ್ಯ ಹೆಸರನ್ನು ಬರೆಯಿರಿ :—

| ಒಂದನೆಯ ಪಟ್ಟಿ | ಗ್ರಂಥಕಾರ | ಎರಡನೆಯ ಪಟ್ಟಿ |
|---|---|---|
| (ಅ) ತಿರುಪಲ್ಲಾಂಡು | ... | (ಅ) ತುಳಸೀದಾಸ |
| (ಆ) ಹರಿಭಕ್ತಿಸಾರ | ... | (ಆ) ರಾಮದಾಸ |

(ಇ) ಜ್ಞಾನೇಶ್ವರೀ ... (ಇ) ಕನಕದಾಸ
(ಈ) ದಾಸಬೋಧ ... (ಈ) ಜ್ಞಾನದೇವ
(ಉ) ರಾಸಮಂಡಳ ... (ಉ) ಪೆರಿಯಾಳ್ವಾರ
(ಊ) ರಾಮಚರಿತ ಮಾನಸ ... (ಊ) ನರಸಿಂಹ ಮೆಹತಾ

೩ ಕೆಳಗೆ ಕೊಟ್ಟವುಗಳಲ್ಲಿ ಪ್ರತಿಯೊಂದರ ಬಗೆಗೆ ಚಿಕ್ಕ ಟಿಪ್ಪಣಿ ಬರೆಯಿರಿ :—
(ಅ) ಭಕ್ತಿಪಂಥ (ಆ) ಪ್ರಬಂಧ (ಇ) ಕನಕನ ಕಿಂಡಿ (ಈ) ಗೌರಾಂಗ ಪ್ರಭು.

## ೧೪ನೆಯ ಪ್ರಕರಣ

# ಘನವಂತನಾದ ಶಿವಾಜಿ

## ಮಹಾರಾಷ್ಟ್ರ ಸಾಮ್ರಾಜ್ಯ-ಸಂಸ್ಥಾಪಕ

**ತಂದೆತಾಯಿಗಳು** :— ಶಿವಾಜಿಯ ತಂದೆಯು ಭೋಸಲೇ ಮನೆತನದ ಶಹಾಜಿ, ತಾಯಿಯು ಜಾಧವ ಮನೆತನದ ಜಿಜಾಬಾಯಿ. ಶಿವಾಜಿಯು ತಂದೆಯ ಕಡೆಯಿಂದ ಮೇವಾಡದ 'ಶಿಸೋದೆ' ರಾಜಮನೆತನಕ್ಕೂ ತಾಯಿಯ ಕಡೆಯಿಂದ ದೇವಗಿರಿಯ 'ಯಾದವ' ಅರಸುಮನೆತನಕ್ಕೂ ಸಂಬಂಧಿಸಿದವನೆಂದು ಹೇಳಲಾಗುತ್ತದೆ. ಶಹಾಜಿಯು ಮೊದಲಿಗೆ ಅಹಮದನಗರದ ನಿಜಾಮುಶಾಹಿಯ ಊಳಿಗದಲ್ಲಿದ್ದ ಒಬ್ಬ ಪ್ರಮುಖ ಸರದಾರನು. ಅಲ್ಲಿ ಅವನಿಗೆ ಪುಣೆ ಸುಪೆ ಭಾಗಗಳು ಜಾಗೀರುಗಳಾಗಿ ದೊರೆತವು. ಕ್ರಿ. ಶ. ೧೬೩೬ ರಲ್ಲಿ ಆ ರಾಜ್ಯವು ಮೊಗಲ ಸಾಮ್ರಾಜ್ಯಕ್ಕೆ ಸೇರಿತು. ಆಗ ಶಹಾಜಿಯು ವಿಜಾಪುರದ ಆದಿಲಶಾಹಿಯ ದರಬಾರದಲ್ಲಿ ಸರದಾರನಾದನು. ಆದಿಲಶಾಹನು ಅವನನ್ನು ಕರ್ನಾಟಕದ ಅಧಿಕಾರಿಯನ್ನಾಗಿ ನೇಮಿಸಿದನು. ಶಹಾಜಿಯು ಅಲ್ಲಿಗೆ ಹೋಗಿ ತನ್ನ ಶೂರತನದಿಂದ ಎಷ್ಟೋ ಪ್ರದೇಶಗಳನ್ನು ಗೆದ್ದನು. ತನ್ನ ಮಕ್ಕಳುಮರಿಗಳಿಗಾಗಿ ಕಾವೇರೀನದಿಯ ಮೇಲೆ ಚಿಕ್ಕದೊಂದು ರಾಜ್ಯವನ್ನು ಗಳಿಸಿದನು. ಜಿಜಾಬಾಯಿಯು ಉಚ್ಚಕುಲದಲ್ಲಿ ಹುಟ್ಟಿದವಳು. (ಅವಳ ತಂದೆ, ಲಖುಜಿ ಜಾಧವನು ಶಹಾಜಿಯಂತೆಯೇ ನಿಜಾಮುಶಾಹಿಯ ಮತ್ತೊಬ್ಬ ದೊಡ್ಡ ಸರದಾರನಿದ್ದನು). ಅವಳಲ್ಲಿ ಅಸಾಮಾನ್ಯ ಬುದ್ಧಿಮತ್ತೆ, ಧರ್ಮಭಾವನೆಗಳು ಮನೆಮಾಡಿಕೊಂಡಿದ್ದವು.




ಮರಾಠಾಸತ್ತೆಯ ಬೆಳವಣಿಗೆ

**ಜನನ, ಬಾಲ್ಯ, ಶಿಕ್ಷಣ** :— ಕ್ರಿ. ಶ. ೧೬೩೦ ರಲ್ಲಿ ಶಿವಾಜಿಯು 'ಶಿವನೇರಿ' ಎಂಬ ಕೋಟೆಯಲ್ಲಿ ಜನಿಸಿದನು. ಮಗುವು ೬–೭ ವರುಷ

ವಯಸ್ಸಿನದಾಗುವ ವರೆಗೆ ತಾಯಿಮಕ್ಕಳಿಬ್ಬರೂ ಅಲ್ಲಿಯೇ ಉಳಿಯಬೇಕಾಯಿತು. ಶಹಾಜಿಯು ಆದಿಲಶಾಹನ ಊಳಿಗವನ್ನು ಸೇರಿದಾಗ, **ದಾದಾಜಿ ಕೋಂಡದೇವ** ನೆಂಬ ಸಮರ್ಥ ಬ್ರಾಹ್ಮಣನನ್ನು ಪುಣೆ ಜಾಗೀರಿನ ಆಡಳಿತಕ್ಕಾಗಿ ನೇಮಿಸಿದನು. ಆಗ ದಾದಾಜಿಯು ಜಿಜಾಬಾಯಿಯನ್ನೂ ಶಿವಾಜಿಯನ್ನೂ ತನ್ನಲ್ಲಿಗೆ ಬರಮಾಡಿಕೊಂಡನು. ಜಿಜಾಬಾಯಿಯು ಪರಮ ಸಾಧ್ವಿ. ಪುರಾಣ ಪುಣ್ಯಕಥೆಗಳ ಸಹಾಯದಿಂದ ಬಾಲಶಿವಾಜಿಯಲ್ಲಿ ಧರ್ಮಭಾವನೆ, ಧೈರ್ಯಸಾಹಸಗಳು ಅಂಕುರಿಸುವಂತೆ ಮಾಡಿದಳು. ದಾದಾಜಿ ಕೋಂಡದೇವನು ಅವನನ್ನು ಆ ಕಾಲದ ಕ್ಷಾತ್ರವಿದ್ಯೆಯಲ್ಲಿ ಪ್ರವೀಣನನ್ನಾಗಿ ಮಾಡಿದನು. ಅವನಿಗೆ ಆಡಳಿತದ ಜ್ಞಾನ ಮಾಡಿಕೊಟ್ಟು, ತಕ್ಕಮಟ್ಟಿಗೆ ರಾಜನೀತಿಯನ್ನು ಕಲಿಸಿದನು. ಶಿವಾಜಿಗೆ ಸುತ್ತಲಿನ 'ಮಾವಳೆ' ಪ್ರದೇಶ (ಪಶ್ಚಿಮ ಘಟ್ಟಗಳ ಬದಿಯ ಪ್ರದೇಶ)ದ ಮತ್ತು ಅಲ್ಲಿಯ ಜನರ ಪ್ರತ್ಯಕ್ಷ ಜ್ಞಾನವು ದೊರೆಯಿತು. ಅವನಂತೆಯೇ ಶೂರರಾದ **ಯೇಸಾಜಿ ಕಂಕ, ತಾನಾಜಿ ಮಾಲುಸರೆ, ಬಾಜಿ ಪಾಸಲಕರ, ನೇತಾಜಿ ಪಾಲಕರ** ಮೊದಲಾದವರು ಅವನಿಗೆ ಬಾಲಮಿತ್ರರಾದರು. ಮುಂದೆ ಅವರು ಶಿವಾಜಿಯ ಸ್ವಾಮಿನಿಷ್ಠ ಅನುಯಾಯಿಗಳಾದರು. ಕೆಲಮಟ್ಟಿಗೆ ಮುಸಲ್ಮಾನ ಅರಸರ ರೀತಿ ನೀತಿಗಳೂ ಶಿವಾಜಿಗೆ ತಿಳಿದುಬಂದವು. ಹೀಗಾಗಿ ಬಾಲ್ಯದಲ್ಲಿಯೇ ಶಿವಾಜಿಗೆ ಸ್ವಧರ್ಮ ಸಂರಕ್ಷಣೆ ಸ್ವರಾಜ್ಯ ಸಂಸ್ಥಾಪನೆಗಳು ಜೀವನದ ಗುರಿಗಳಾದವು.

**ರಾಜಕೀಯ ಜೀವನ:**— ಶಿವಾಜಿಯು ಕ್ರಿ. ಶ. ೧೬೪೬ ರಲ್ಲಿ ತೋರಣಾ ಕೋಟೆಯನ್ನು ಕೈವಶಮಾಡಿಕೊಂಡನು. ಅಂದಿನಿಂದಲೇ ಅವನು ರಾಜಕೀಯ ಕ್ಷೇತ್ರದಲ್ಲಿ ಕಾಲಿಟ್ಟನೆಂದು ಹೇಳಬಹುದು. ಶಿವಾಜಿಗೆ **ತೋರಣಾ ಕೋಟೆಯಲ್ಲಿ** ಹೂಳಿಟ್ಟ ಹೇರಳ ಹಣ ದೊರೆಯಿತಂತೆ. ಅದರಿಂದ ಅವನು ಆ ಕೋಟೆಯ ಸಮೀಪದಲ್ಲಿ ರಾಜಗಡವೆಂಬ ಕೋಟೆಯನ್ನು ಕಟ್ಟಿಸಿದನು. ಮಾವಳೆ ಜನರ ಸೈನ್ಯವನ್ನು ಸಂಗ್ರಹಿಸಿದನು. **ಚಾಕಣ, ಸಿಂಹಗಡ** ಕೋಟೆಗಳು ಶಿವಾಜಿಯ ಕೈಸೇರಿದವು. ಆಗ ಶಿವಾಜಿಯು ಇದೆಲ್ಲವನ್ನು ತಂದೆಯ ಪ್ರೇರಣೆಯಿಂದ ನಡೆಸಿರುವನೆಂದು ಆದಿಲಶಾಹನು ಸಂಶಯಗೊಂಡನು. ಅವನು ಶಹಾಜಿಯನ್ನು ಮೋಸದಿಂದ ವಿಜಾಪುರಕ್ಕೆ ಕರೆಯಿಸಿ ಸೆರೆಯಲ್ಲಿಟ್ಟನು (೧೬೪೮). ಕೂಡಲೆ, ಶಿವಾಜಿಯು ಇದರ ಬಗೆಗೆ ಶಾಹಜಹಾನ ಬಾದಶಾಹನೊಡನೆ ಪತ್ರವ್ಯವಹಾರ ನಡೆಸಿದನು. ಶಹಾಜಿಯನ್ನು ಬಿಡುಗಡೆ

ಮಾಡಬೇಕೆಂದು ಬಾದಶಹನು ಆದಿಲಶಾಹನಿಗೆ ಅಪ್ಪಣೆಮಾಡಿದನು. ಮರು ವರುಷವೇ ಶಹಾಜಿಯ ಬಿಡುಗಡೆಯಾಯಿತು. ಬಳಿಕ ಕೆಲವು ವರುಷಗಳ ಮೇಲೆ ಶಿವಾಜಿಯು **ಪುರಂದರ, ರಾಯಗಡ, ಲೋಹಗಡ** ಮುಂತಾದ ಕೋಟೆಗಳನ್ನು ವಶಪಡಿಸಿಕೊಂಡನು. ವಿಜಾಪುರದ ಸರದಾರನಾದ **ಚಂದ್ರರಾವ ಮೋರೆ** ಎಂಬವನು ಶಿವಾಜಿಯನ್ನು ಎದುರಿಸಿದನು. ಆದುದರಿಂದ ಶಿವಾಜಿಯು ಅವನ ಮೇಲೆ ಏರಿಹೋಗಿ ಅವನನ್ನು ಕೊಂದನು. ಅವನ 'ಜಾವಳಿ' ಜಾಗೀರು ಶಿವಾಜಿಯ ಸ್ವಾಧೀನವಾಯಿತು. ಆ ಪಟ್ಟಣದ ನೆರೆಯಲ್ಲಿ ಪ್ರತಾಪಗಡವೆಂಬ ಭವ್ಯವಾದ ಕೋಟೆಯನ್ನು ಕಟ್ಟಿಸಿ ಶಿವಾಜಿಯು ಅಲ್ಲಿ ತನ್ನ ಕುಲದೇವತೆಯಾದ ಅಂಬಾಭವಾನಿಯ ಮೂರ್ತಿಯನ್ನು ಸ್ಥಾಪಿಸಿದನು. ಕೊಂಕಣದ ಮೇಲೆ ದಾಳಿಮಾಡಿ ಕಲ್ಯಾಣ ಮತ್ತು ಭಿವಂಡಿ ಪಟ್ಟಣಗಳನ್ನು ಸೂರೆ ಮಾಡಿದನು, ಅವು ಅವನ ಹಸ್ತಗತವಾದವು. ಕ್ರಿ. ಶ. ೧೬೪೯ ರಿಂದ ಮುಂದೆ, ಶಿವಾಜಿಗೆ ಸ್ವರಾಜ್ಯವನ್ನು ಸ್ಥಾಪಿಸುವ ಕಾರ್ಯದಲ್ಲಿ ರಾಮದಾಸ ಸಾಧುಗಳಿಂದ ಪ್ರೋತ್ಸಾಹ ದೊರೆಯತೊಡಗಿತು.

**ಆದಿಲಶಾಹಿಯೊಡನೆ ಯುದ್ಧ** :— ಆದಿಲಶಾಹನು **ಅಫಝುಲ ಖಾನ** ನೆಂಬ ಶೂರ ಸರದಾರನನ್ನು ದೊಡ್ಡ ಸೈನ್ಯದೊಂದಿಗೆ ಶಿವಾಜಿಯ ಮೇಲೆ ಕಳುಹಿದನು (೧೬೫೯). ಆಗ ಶಿವಾಜಿಯು ಪ್ರತಾಪಗಡದಲ್ಲಿದ್ದನು. ಅಫಝುಲಖಾನನು 'ವಾಯಿ' ಗೆ ಬಂದು ತಲುಪಿದನು. ಶಿವಾಜಿಯು ಯುಕ್ತಿಯಿಂದ ಅವನನ್ನು ಭೆಟ್ಟಿಗಾಗಿ ಪ್ರತಾಪಗಡಕ್ಕೆ ಬರಮಾಡಿಕೊಂಡನು. ಕೋಟೆಯ ಅಡಿಯಲ್ಲಿ ಅವರಿರ್ವರ ಭೆಟ್ಟಿಗಾಗಿ ರಾಜಶೀವಿಯ ಮಂಟಪವೊಂದನ್ನು ರಚಿಸಲಾಗಿತ್ತು. ಭೆಟ್ಟಿಯ ಸಮಯದಲ್ಲಿ ಶಿವಾಜಿಯು ತನ್ನ ವ್ಯಾಘ್ರನಖ (ಹುಲಿಯುಗುರು) ವೆಂಬ ಆಯುಧದಿಂದ ಖಾನನ ಹೊಟ್ಟೆಯನ್ನು ಹರಿದನು. ಕೂಡಲೆ, ಮರಾಠಾ ಸೈನಿಕರು ಗಾಬರಿಗೊಂಡ ಮುಸಲ್ಮಾನ ಸೈನಿಕರಮೇಲೆ ಏರಿಹೋಗಿ ಅವರನ್ನು ಕೊಲೆಮಾಡಿದರು. ಅವರ ಯುದ್ಧ ಸಾಮಗ್ರಿಗಳೆಲ್ಲ ಮರಾಠರ ಕೈಸೇರಿದವು. ಆ ಬಳಿಕ, ಶಿವಾಜಿಯು ಕೊಲ್ಹಾಪುರ ಸೀಮೆಯಲ್ಲಿಯ **ಪನ್ಹಾಳಗಡ** ಕೋಟೆಯನ್ನು ವಶಮಾಡಿಕೊಂಡನು. ಆಗ ಆದಿಲಶಾಹನು ಫಾಝುಲಖಾನ (ಅಫಝುಲ ಖಾನನ ಮಗ) ಮತ್ತು ಸಿದ್ದೀ ಜೊಹಾರರೆಂಬ ಸರದಾರರನ್ನು ಅಲ್ಲಿಗೆ ಕಳುಹಿದನು. ಅವರು ಪನ್ಹಾಳಗಡಕ್ಕೆ ಮುತ್ತಿಗೆ ಹಾಕಿದರು (೧೬೬೦).

ಆದರೆ ಶಿವಾಜಿಯು ಒಂದು ರಾತ್ರಿ ತನ್ನ ನಚ್ಚಿನ ಸೈಕನಿರೊಂದಿಗೆ ಅಲ್ಲಿಂದ ನುಸುಳಿ ಪಾರಾಗಿ **ವಿಶಾಲಗಡಕ್ಕೆ** (ಪನ್ಹಾಳ ಗಡದಿಂದ ಪಶ್ಚಿಮಕ್ಕೆ ೨೭ ಮೈಲು ದೂರದಲ್ಲಿ) ಹೊರಟನು. ಅವರನ್ನು ಬೆನ್ನಟ್ಟಿದ ವೈರಿಗಳನ್ನು **ಬಾಜೀಪ್ರಭು** ಎಂಬ ಶಿವಾಜಿಯ ಸ್ವಾಮಿನಿಷ್ಠ ಬಂಟನು **ಪಾವನಗಡ**ವೆಂಬ ಇಕ್ಕಟ್ಟಿನ ಸ್ಥಳದಲ್ಲಿ ಪ್ರಯಾಸದಿಂದ ತಡೆಹಿಡಿದನು. ಅತ್ತ, ಶಿವಾಜಿಯು ಸುರಕ್ಷಿತವಾಗಿ ವಿಶಾಲಗಡವನ್ನು ಸೇರಿದನು. ಇತ್ತ ಸ್ವಾಮಿಕಾರ್ಯಕ್ಕಾಗಿ ಕಾದುತ್ತಲಿದ್ದ ಬಾಜಿಯು ಸಮಾಧಾನದಿಂದ ಪ್ರಾಣಬಿಟ್ಟನು. ಪನ್ಹಾಳಕೋಟೆಯು ಮರಾಠರ ಕೈಬಿಟ್ಟಿತು. ಮುಂದೆ ಒಂದೆರಡು ವರುಷಗಳ ಬಳಿಕ ಆದಿಲಶಾಹನು ಶಹಾಜಿಯ ಮಧ್ಯಸ್ತಿಕೆಯಿಂದ ಶಿವಾಜಿಯೊಂದಿಗೆ ಒಪ್ಪಂದ ಮಾಡಿಕೊಂಡನು (೧೬೬೨). ಶಿವಾಜಿಯ ಪ್ರಾಬಲ್ಯದ ಸುದ್ದಿಯು ಔರಂಗಜೇಬ ಬಾದಶಾಹನ ಕಿವಿಯ ವರೆಗೂ ಹೋಯಿತು.


ಶಿವಾಜಿ.


ಅಫಝುಲಖಾನ

**ಮೊಗಲರೊಡನೆ ಯುದ್ಧ** :— ಔರಂಗಜೇಬನು ಶಿವಾಜಿಯ ಮೇಲೆ ಏರಿಹೋಗಲು ಇಬ್ಬರು ಸರದಾರರನ್ನು ಕಳುಹಿದನು. ಒಬ್ಬನು ಔರಂಗಜೇಬನ ಸೋದರಮಾವನಾದ **ಶಾಯಿಸ್ತಾಖಾನ**, ಮತ್ತೊಬ್ಬನು ಜೋಧಪುರದ ರಾಜನಾದ **ಜಸವಂತಸಿಂಗ**. ಅವರು ಪುಣೆಗೆ ಬಂದು ಅಲ್ಲಿಯೇ ಬೀಡುಬಿಟ್ಟರು. ಒಮ್ಮೆ ಶಿವಾಜಿಯು ತನ್ನ ೪೦೦ ಜನ ಉತ್ಕೃಷ್ಟ ಸಂಗಡಿಗರೊಂದಿಗೆ ಸಿಂಹಗಡದಿಂದ ಹೊರಟು ರಾತ್ರಿಯಾದಮೇಲೆ ಪುಣೆಗೆ ಬಂದನು. ಯುಕ್ತಿಯಿಂದ

ಎಲ್ಲರೂ ಖಾನನ ಶಿಬಿರವನ್ನು ದಾಟಿ ಪಟ್ಟಣದೊಳಗೆ ಪ್ರವೇಶಿಸಿದರು. ಮಧ್ಯ ರಾತ್ರಿಗೆ, ಖಾನನು ವಾಸವಾಗಿದ್ದ ಮನೆಯಲ್ಲಿಯೇ ಒಳನುಗ್ಗಿ ಹೊಡೆದಾಟ ನಡೆಸಿದರು (೧೬೬೩). ಖಾನನು ಕಂಗೆಟ್ಟು ಕಿಡಿಕಿಯಿಂದ ಕೆಳಗಿಳಿದು ಪಾರಾದನು. ಆದರೆ ಅವನ ಕೈಬೆರಳುಗಳು ಶಿವಾಜಿಯ ಖಡ್ಗದ ಪೆಟ್ಟಿನಿಂದ ಕತ್ತರಿಸಲ್ಪಟ್ಟವು. ಗೊಂದಲದಲ್ಲಿ ಖಾನನ ಒಬ್ಬ ಮಗನು ಸತ್ತನು; ಮತ್ತಿಬ್ಬರು ಗಾಯಗೊಂಡರು. ಕೂಡಲೆ, ಶಿವಾಜಿಯು ತನ್ನ ಸಂಗಡಿಗರೊಂದಿಗೆ ಸಿಂಹಗಡಕ್ಕೆ ಹೋದನು. ಅವರನ್ನು ಬೆನ್ನಟ್ಟಲು ಹೊರಟ ಮೊಗಲ ಸೈನಿಕರು ವಿರುದ್ಧ ದಿಕ್ಕಿನಲ್ಲಿ ಸಾಗಿದರಂತೆ. ಶಾಯಿಸ್ತಾಖಾನನು ಮೊಗಲ ಸೈನ್ಯದೊಂದಿಗೆ ಔರಂಗಾಬಾದಿಗೆ ಹಿಂದಿರುಗಿ ಹೋದನು. ಈ ವಿಜಯದಿಂದ ಶಿವಾಜಿಯ ಪ್ರತಿಷ್ಠೆ ಬೆಳೆಯಿತು.

**ತಂದೆಯ ಮರಣ :—** ಕ್ರಿ. ಶ. ೧೬೬೪ ರಲ್ಲಿ ಶಹಾಜಿಯು ಮೃತನಾದನು. ಕರ್ನಾಟಕದಲ್ಲಿಯ ಅವನ ಆಸ್ತಿಗೆಲ್ಲ ಅವನ ಕಿರಿಯ ಮಗನಾದ ವ್ಯಂಕೋಜಿಯು ಒಡೆಯನಾದನು. ಶಿವಾಜಿಯು ' ರಾಜ ' ನೆಂಬ ಬಿರುದು ಧರಿಸಿ ತ್ನನ ಹೆಸರಿನ ನಾಣ್ಯಗಳನ್ನು ಮುದ್ರಿಸಿದನು.

**' ಸುರತ ' ದ ಸುಲಿಗೆ :—** ತಂದೆ ತೀರಿದ ವರುಷವೇ ಶಿವಾಜಿಯು ಮೊಗಲರ ಸುರತ ನಗರವನ್ನು ಸುಲಿದನು. ಅದು ಪಶ್ಚಿಮ ಕರಾವಳಿಯ ಮೇಲಿನ ಅತ್ಯಂತ ಧನಿಕ ಬಂದರವಾಗಿತ್ತು. ಅಪಾರ ಲೂಟಿಯೊಂದಿಗೆ ಶಿವಾಜಿಯು ಕೊಂಕಣಕ್ಕೆ ಮರಳಿ ಬಂದನು.

**ಔರಂಗಜೇಬನ ಪ್ರತಿಕ್ರಿಯೆ :—** ಈ ಸಲ ಔರಂಗಜೇಬನು ಶಿವಾಜಿಯ ಮೇಲೆ **ಜಯಸಿಂಗ** ಮತ್ತು **ದಿಲೀರಖಾನ**ರೆಂಬ ಸರದಾರರನ್ನು ಕಳುಹಿದನು (೧೬೬೫). ಅವರು ಮೊಗಲ ದರಬಾರದಲ್ಲಿಯ ಅತ್ಯಂತ ಶೂರ ಸೇನಾಪತಿಗಳು. ಮೇಲಾಗಿ, ಜಯಸಿಂಗನು ಸವಿಮಾತಿನ ಚತುರ ರಾಜಕಾರಣಿ. ಅವರು ಅನುಕ್ರಮವಾಗಿ ಸಿಂಹಗಡ, ಪುರಂದರಗಡ ಕೋಟೆಗಳಿಗೆ ಮುತ್ತಿಗೆ ಹಾಕಿದರು. ಪುರಂದರದ ಕಿಲ್ಲೆದಾರನಾದ **ಮುರಾರ ಬಾಜಿಯು** ದಿಲೀರಖಾನನೊಡನೆ ಕಲಿತನದಿಂದ ಕಾದುತ್ತ ಮಡಿದನು. ಆ ಕೋಟೆ ಮರಾಠರ ಕೈಬಿಡುವಂತೆ ತೋರಿತು. ಶಿವಾಜಿಯು ಧೂರ್ತನು, ದೂರ ದೃಷ್ಟಿಯುಳ್ಳವನು. ಅಂತೆಯೇ, ಅವನು ಶಾಂತಿ ಸಂಧಾನಕ್ಕೆ ಅಣಿಯಾಗಿ ಯುಕ್ತಿಯಿಂದ ಜಯಸಿಂಗನೊಡನೆ ಒಪ್ಪಂದ ಮಾಡಿಕೊಂಡನು. (**ಪುರಂದರದ ಒಪ್ಪಂದ**; ೧೬೬೫). ಇದರ

ಮೇರೆಗೆ, ಶಿವಾಜಿಯು ಪುರಂದರ, ಸಿಂಹಗಡ ಮೊದಲಾದ ೨೩ ಕೋಟೆಗಳನ್ನು ಮೊಗಲರಿಗೆ ಒಪ್ಪಿಸಿ, ರಾಜಗಡ ಮುಂತಾದ ೧೨ ಕೋಟೆಗಳನ್ನು ಮಾತ್ರ ತನಗೆ ಉಳಿಸಿಕೊಂಡನು. ಮೊಗಲ ಬಾದಶಾಹನ ಮಾಂಡಲಿಕನಾಗಿ, ಅವನಿಗೆ ದಕ್ಷಿಣದ ಯುದ್ಧಗಳಲ್ಲಿ ಯುದ್ಧ-ಸೇವೆ ಸಲ್ಲಿಸುವವಾಗಿ ಮಾತುಕೊಟ್ಟನು. ಶಿವಾಜಿಯ ಮಗನಾದ ಸಂಭಾಜಿಯು ಮೊಗಲ ದರಬಾರದ ಮನಸಬದಾರನಾದನು.

**ಆಗ್ರಾದಲ್ಲಿ ಬಂದಿವಾಸ ಹಾಗು ಅಲ್ಲಿಂದ ಪಾರಾಗಿ ಬಂದ ಬಗೆ** (೧೬೬೬):—ಜಯಸಿಂಗನು ಮಾತಿನಿಂದಲೂ ಔರಂಗಜೇಬನು ಪತ್ರದಿಂದಲೂ ಶಿವಾಜಿಯು ಮೊಗಲ ದರಬಾರಕ್ಕೆ ಭೆಟ್ಟಿಗಾಗಿ ಹೋಗುವಂತೆ ಅವನ ಮನ



ಶಿವಾಜಿಯು ಆಗ್ರಾದಿಂದ ಪಾರಾದುದು.

ವೊಲಿಸಿದರು. ರಾಮದಾಸರು ಅನುಕೂಲ ಸಲಹೆ ಕೊಟ್ಟರು. ಆದುದರಿಂದ ಶಿವಾಜಿಯು ಅದಕ್ಕೆ ಒಪ್ಪಿದನು. ತಾನಿಲ್ಲದಿರುವ ಅವಧಿಯಲ್ಲಿ ಆಡಳಿತವು ಸುಸೂತ್ರವಾಗಿ ಸಾಗುವಂತೆ ಉತ್ತಮ ಏರ್ಪಾಡು ಮಾಡಿದನು. ಬಳಿಕ ಬಾದಶಾಹನ ಭೆಟ್ಟಿಗಾಗಿ ಬಾಲ ಸಂಭಾಜಿಯೊಂದಿಗೆ ಆಗ್ರಾಕ್ಕೆ ಹೋದನು. ಆದರೆ ದರಬಾರದಲ್ಲಿ ಬಾದಶಾಹನು ತನಗೆ ತಕ್ಕ ಗೌರವವನ್ನು ಕೊಡಲಿಲ್ಲವೆಂದು ಶಿವಾಜಿಯು ಅವನ ಮೇಲಿನ ಸಿಟ್ಟನ್ನು ಹೊರಗೆಡವಿದನು. ಇದರ ಮೂಲಕ, ಶಿವಾಜಿಗೆ ವಾಸಕ್ಕಾಗಿ ಕೊಟ್ಟ ಗೃಹವು ಅವನ ಕಾರಾಗೃಹ

ವಾಯಿತು. ಮೂರು ತಿಂಗಳ ಬಂದಿವಾಸದ ಬಳಿಕ, ಒಮ್ಮೆ ಶಿವಾಜಿಯೂ ಸಂಭಾಜಿಯೂ ಯುಕ್ತಿಯಿಂದ ಎರಡು ಮಿಠಾಯಿ ಬುಟ್ಟಿಗಳಲ್ಲಿ ಕುಳಿತು ಅಲ್ಲಿಂದ ಪಾರಾದರು. ಆಗ್ರಾದಿಂದ ಆರು ಮೈಲು ದೂರದ ಹಳ್ಳಿಯೊಂದರಲ್ಲಿ ಅವರಿಗಾಗಿ ಕುದುರೆಗಳನ್ನು ಸಿದ್ಧತೆಯಲ್ಲಿ ಇಡಲಾಗಿತ್ತು. ಅವರು ಕುದುರೆಯೇರಿ ಮಥುರೆಗೆ ಹೋದರು. ಅಲ್ಲಿ ಶಿವಾಜಿಯು ಸಂನ್ಯಾಸಿಯ ವೇಷಭೂಷಣಗಳನ್ನು ಧರಿಸಿದನು. ಅದೇ ಸೋಗುಹಾಕಿದ ಕೆಲವು ಅನುಯಾಯಿಗಳೊಂದಿಗೆ ಪ್ರಯಾಗ, ಕಾಶಿ, ಗಂಪಿ, ಗೋವಳಕೊಂಡಗಳ ಮಾರ್ಗವಾಗಿ ಸುತ್ತಾಡುತ್ತ ರಾಯಗಡಕ್ಕೆ ಬಂದು ತಲುಪಿದನು (೧೬೬೯).

**ರಾಯಗಡಕ್ಕೆ ಮರಳಿ ಬಂದಬಳಿಕ:—** ಮುಂದೆ ಮೂರು ವರುಷಗಳವರೆಗೆ ಮೊಗಲ ಮತ್ತು ಮರಾಠರಲ್ಲಿ ಯುದ್ಧವಾಗಲಿಲ್ಲ. ಜಸವಂತಸಿಂಗನ ಪ್ರಯತ್ನದಿಂದ ಶಿವಾಜಿ ಮತ್ತು ಔರಂಗಜೇಬರಲ್ಲಿ ಒಪ್ಪಂದವಾಯಿತು(೧೬೬೮). ಬಾದಶಾಹನು ಶಿವಾಜಿಗೆ 'ರಾಜ' ನೆಂಬ ಬಿರುದು ಕೊಟ್ಟನು. ಸಂಭಾಜಿಗೆ ಮನಸಬ ಪದವಿಯೂ ವರ್ಹಾಡದಲ್ಲಿ ಜಾಗೀರೂ ದೊರೆತವು. ಆದರೆ ಕ್ರಿ ಶ. ೧೬೭೦ ರಲ್ಲಿ ಮತ್ತೆ ಅವರಲ್ಲಿ ಯುದ್ಧವು ಆರಂಭವಾಯಿತು. ಶಿವಾಜಿಯು ಪುರಂದರ ಒಪ್ಪಂದದ ಮೇರೆಗೆ ಮೊಗಲರಿಗೆ ಕೊಟ್ಟ ಬಹುತರ ಎಲ್ಲ ಕೋಟೆಗಳನ್ನು ಮರಳಿ ಕೈವಶಮಾಡಿಕೊಂಡನು. ಕೊಂಡಾಣಾ ಕೋಟೆಯನ್ನು ಕೈವಶ ಮಾಡಿಕೊಳ್ಳುವಾಗ ತಾನಾಜಿ ಮಾಲುಸರೆ ಮಡಿದನು. ಸಿಂಹನಂತಿದ್ದ ತಾನಾಜಿಯು ಗೆದ್ದ ಕೋಟೆ ಎಂಬ ಅರ್ಥದಲ್ಲಿ ಶಿವಾಜಿಯು ಆ ಕೋಟೆಗೆ "**ಸಿಂಹಗಡ**" ವೆಂದು ಹೆಸರಿಟ್ಟನು. ಬಳಿಕ ಸುರತ ನಗರವನ್ನು ಮತ್ತೊಮ್ಮೆ ಸುಲಿದನು. ಕ್ರಿ. ಶ. ೧೬೭೪ ರ ವರೆಗೂ ಸಮರವು ಸಾಗಿತು. ದಕ್ಷಿಣದ ಬೇರೆ ಬೇರೆ ಕ್ಷೇತ್ರಗಳಲ್ಲಿ ಕಾಳಗಗಳಾದವು. ಸಾಮಾನ್ಯವಾಗಿ, ಇವುಗಳಲ್ಲಿ ಮರಾಠರೆ ವಿಜಯಿಗಳಾಗುತ್ತ ನಡೆದರು. ಆದಿಲಶಾಹನು ಗೆದ್ದ ಪನ್ಹಾಳಗಡವೂ, ಸಾತಾರೆಯ ಭಾಗವೂ ಕೊನೆಗೆ ಮತ್ತೊಮ್ಮೆ ಶಿವಾಜಿಯ ಸ್ವಾಧೀನಕ್ಕೆ ಬಂದವು.

**ರಾಜ್ಯಾಭಿಷೇಕ** (೧೬೭೪) :— ಕ್ರಿ. ಶ. ೧೬೭೪ ರಲ್ಲಿ ಶಿವಾಜಿಯ ಸಿಂಹಾಸನಾರೋಹಣವು ಅವಶ್ಯವೆನಿಸಿತು. ಆದುದರಿಂದ ಆ ಸಮಾರಂಭವನ್ನು ರಾಯಗಡದಲ್ಲಿ ಜರುಗಿಸಲಾಯಿತು (೧೬೭೪, ಜೂನ ೬ ನೆಯ ದಿನಾಂಕ). ಕಾಶಿಯ **ಗಾಗಾಭಟ್ಟ**ನೆಂಬ ಶ್ರೇಷ್ಠ ಧರ್ಮಶಾಸ್ತ್ರಜ್ಞನು ಶಾಸ್ತ್ರಸಮ್ಮತವಾಗುವಂತೆ ಪಟ್ಟಾಭಿಷೇಕದ ಎಲ್ಲ ಧರ್ಮವಿಧಿಗಳನ್ನು ನೆರವೇರಿಸಿದನು. ಶಿವಾಜಿಯು

ಮುಪ್ಪಿನ ತಾಯಿಯಾದ ಜಿಜಾಬಾಯಿ ಮತ್ತು ಪೂಜ್ಯ ಗುರುಗಳಾದ ರಾಮ ದಾಸರು ಶಿವಾಜಿಗೆ ಕೊಟ್ಟ ಶುಭಾಶೀರ್ವಾದಗಳಿಂದ ಸಮಾರಂಭವು ಆರಂಭ ವಾಯಿತು. ರಾಜ್ಯಾಭಿಷೇಕದ ದಿನದಿಂದ ಶಿವಾಜಿಯು ಛತ್ರಪತಿ ಶಿವಾಜಿ (ಶಿವ ಛತ್ರಪತಿ)ಯಾದನು. ಸಮಾರಂಭಕ್ಕೆ ಎಷ್ಟೋ ಜನ ಶ್ರೀಮಂತರು, ಸರದಾರರು, ರಾಜರು, ರಾಯಭಾರಿಗಳೇ ಮೊದಲಾದವರು ನೆರೆದಿದ್ದರು. ರಾಜಠೀವಿಗೆ ಒಪ್ಪುವ ಉಡುಪಿನಲ್ಲಿ ಪ್ರಕಾಶಿಸುತ್ತಿದ್ದ ಶಿವಾಜಿಗೆ ಸಿಂಹಾಸನ ಮಂದಿರದಲ್ಲಿ ತಲೆಯಮೇಲೆ ಕಿರೀಟವನ್ನು ಇಡಲಾಯಿತು. ಕೂಡಲೆ ಬ್ರಾಹ್ಮಣರು ಮಂತ್ರಗಳನ್ನು ಘೋಷಿಸಿದರು, ಸಂಗೀತಗಾರರು ಗಾಯನ ಮಾಡಿದರು, ವಾದ್ಯಗಳು ಮೊಳಗಿದವು. ಶಿವಾಜಿಯ ರಾಜ್ಯದ ಪ್ರತಿಯೊಂದು ಕೋಟೆಯ ಮೇಲಿಂದ ಗೌರವ ಸೂಚಕ ತೋಫುಗಳು ಹಾರಿದವು. ಜನಸಮೂಹದಲ್ಲಿ ಎಲ್ಲ ಕಡೆಗೂ ಉತ್ಸಾಹವೇ ಉತ್ಸಾಹ! 'ಛತ್ರಪತಿ ಶಿವಾಜಿ ಮಹಾರಾಜರಿಗೆ ಜಯವಾಗಲಿ' ಎಂಬ ಘೋಷಣೆಯು ಎಲ್ಲೆಲ್ಲೂ ಕೇಳಬಂದಿತು. (ಈ ಸಮಾರಂಭಕ್ಕೆ ಸುಮಾರು ೧ ಲಕ್ಷ ಜನರು ಕೂಡಿದ್ದರಂತೆ. ೫೦ ಲಕ್ಷ ರೂಪಾಯಿಗಳು ಖರ್ಚಾದವಂತೆ). ಈ ಪ್ರಸಂಗದಲ್ಲಿ ಶಿವಾಜಿಯು ಇತರ 'ಮಹಾದಾನ' ಗಳೊಂದಿಗೆ ತನ್ನ ತೂಕದ ಬಂಗಾರವನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ಇದನ್ನೆಲ್ಲ ಕಣ್ಣಾರೆ ಕಂಡು ಧನ್ಯಳಾದ ಜಿಜಾಬಾಯಿಯು ಮುಂದೆ ೧೨ ದಿನಗಳ ಮೇಲೆ ಕಾಲವಾದಳು.

**ಜೀವನದ ಕೊನೆಯ ಆರು ವರುಷಗಳು (೧೬೭೪-೧೬೮೦) :—** ರಾಜ್ಯಾಭಿಷೇಕದ ವೆಚ್ಚದಿಂದ ಶಿವಾಜಿಯ ಬೊಕ್ಕಸವು ಬರಿದಾಯಿತು. ಮತ್ತೆ ಅದರ ಭರತಿಗಾಗಿ ಅವನು ದಾಳಿಗಳನ್ನು ಕೈಕೊಂಡನು. ಮೊಗಲರ ಅಹಮದನಗರ, ಖಾನದೇಶಗಳಲ್ಲಿ ದಾಳಿಮಾಡಿ ಅಪಾರ ಲೂಟಿಯನ್ನು ಗಳಿಸಿದನು. ಆದಿಲಶಾಹಿಯ ವಶದಲ್ಲಿದ್ದ ಅಂಕೋಲಾ, ಕಾರವಾರ ಬಂದರಗಳನ್ನು ತನ್ನ ಕೈವಶ ಮಾಡಿಕೊಂಡನು. ಬಳಿಕ, ದಕ್ಷಿಣ-ದಂಡಯಾತ್ರೆಯನ್ನು ಕೈಕೊಂಡನು (೧೬೭೭). ಇದನ್ನು 'ಕರ್ನಾಟಕದ ದಾಳಿ' ಯೆಂದೂ ಕರೆಯುವರು. (ಕರ್ನಾಟಕವೆಂದರೆ ಮದ್ರಾಸದ ದಂಡೆಗುಂಟ ಪೂರ್ವತೀರದ ಪ್ರದೇಶ), ಶಿವಾಜಿಯು ಮೊದಲಿಗೆ ಗೋವಳಕೊಂಡಕ್ಕೆ ಹೋಗಿ ಅದರ ಸುಲ್ತಾನನೊಡನೆ ಮಿತ್ರತ್ವದ ಒಪ್ಪಂದವನ್ನು ಮಾಡಿಕೊಂಡನು. ಅವನಿಂದ ಶಿವಾಜಿಗೆ ಧನ ಸಹಾಯ, ಸೈನ್ಯಸಹಾಯಗಳು ದೊರೆತವು. ಅಲ್ಲಿಂದ ಕರ್ನೂಲು, ಶ್ರೀಶೈಲ,

ಕಡಪಾ, ತಿರುಪತಿ, ಕಂಚಿ, ಜಿಂಜಿ, ವೆಲ್ಲೂರುಗಳ ಮಾರ್ಗವಾಗಿ ತಂಜಾವರಕ್ಕೆ ಹೋದನು. ದಕ್ಷಿಣದಲ್ಲಿ ಬಲಿಷ್ಠ ಕೋಟೆಗಳೆಂದು ಹೆಸರಾದ ಜಿಂಜಿ, ವೆಲ್ಲೂರು ಗಳು ಶಿವಾಜಿಯ ವಶಕ್ಕೆ ಬಂದವು. ತಂಜಾವರದಲ್ಲಿ ಆಳುತ್ತಿದ್ದ ವ್ಯಂಕೋಜಿ (ಶಿವಾಜಿಯ ಮಲತಮ್ಮ) ಯಿಂದ ಶಿವಾಜಿಯು ತಂದೆಯ ಜಾಗೀರುಗಳ ಅರ್ಧಭಾಗವನ್ನು ಗಳಿಸಿದನು. ಕೋಲಾರ, ಹೊಸಕೋಟೆ, ಬೆಂಗಳೂರು, ಬಳ್ಳಾಪುರ, ಶೀರಾ ಪ್ರದೇಶಗಳು ಅವನ ವಶಕ್ಕೆ ಬಂದವು. ಮರಳಿ ಬರು ವಾಗ ಶಿವಾಜಿಯು ತುಂಗಭದ್ರೆಯನ್ನು ದಾಟಿ, ಬಳ್ಳಾರಿ, ಕೊಪ್ಪಳ, ಗದಗಗಳ ಮಾರ್ಗವಾಗಿ ಸಾಗುತ್ತ ಲಕ್ಷ್ಮೇಶ್ವರ, ಬಂಕಾಪುರ, ಧಾರವಾಡಗಳನ್ನೂ ಸಂಪ ಗಾಂವಿಯ ಮಾರ್ಗವಾಗಿ ಸಾಗುತ್ತ ಬೆಳವಡಿಯನ್ನೂ ತನ್ನ ರಾಜ್ಯಕ್ಕೆ ಸೇರಿಸಿ ಕೊಂಡನು. ಮುಂದೆ ಒಂದೆರಡು ವರುಷಗಳನ್ನು ಶಿವಾಜಿಯು ಮೊಗಲರ ವಿರುದ್ಧವಾಗಿ ವಿಜಾಪುರದ ಸುಲ್ತಾನನಿಗೆ ಸಹಾಯ ಮಾಡುವದೇ ಮುಂತಾದ ಚಟುವಟಿಕೆಗಳಲ್ಲಿ ಕಳೆದನು.

**ಅಂತ್ಯ:—** ಶಿವಾಜಿಯ ಹಿರಿಯ ಮಗನಾದ ಸಂಭಾಜಿಯು ದುರಾ ಚಾರಿಯಾಗಿ ಮನಸ್ಸಿಗೆ ಬಂದಂತೆ ನಡೆಯತೊಡಗಿದನು. ಕ್ರಿ. ಶ. ೧೬೭೮ ರಲ್ಲಿ ಅವನು ಮೊಗಲ ಸರದಾರನಾದ ದಿಲೀರಖಾನನನ್ನು ಕೂಡಿಕೊಂಡನು. ಇದ ರಿಂದ ಶಿವಾಜಿಗೆ ವ್ಯಥೆಯಾಯಿತು. ಮರುವರ್ಷ, ಸಂಭಾಜಿಯು ದಿಲೀರ ಖಾನನ ಬಗೆಗೆ ಬೇಸರಗೊಂಡು ತಾನೇ ಪನ್ಹಾಳಗಡಕ್ಕೆ ಮರಳಿ ಬಂದನು. ಆಗ ಅವನನ್ನು ಅಲ್ಲಿಯೇ ಬಂಧನದಲ್ಲಿ ಇಡಲಾಯಿತು. ಅವನನ್ನು ಸನ್ಮಾರ್ಗಕ್ಕೆ ಹಚ್ಚಲು ಶಿವಾಜಿಯು ಮಾಡಿದ ಉಪದೇಶವೆಲ್ಲ ನಿಷ್ಫಲವಾಯಿತು. ಶಿವಾ ಜಿಯು ನಿರಾಶೆಗೊಂಡನು. ಆಗಿನಿಂದಲೆ ಶಿವಾಜಿಯ ಆರೋಗ್ಯವು ಕೆಡಹತ್ತಿ ಬೇನೆಯಿಂದ ಅವನು ರಾಯಗಡದಲ್ಲಿ ಮರಣ ಹೊಂದಿದನು (೧೬೮೦).

**ರಾಜ್ಯಭಾರ:—** ಶಿವಾಜಿಯು ಹೆಸರಾದ ಆಡಳಿತಗಾರನು. ರಾಜ್ಯ ಕಾರ್ಯದಲ್ಲಿ ಬೇರೆ ಬೇರೆ ವಿಭಾಗ(ಶಾಖೆ) ಗಳನ್ನು ಮಾಡಿ ಅವುಗಳನ್ನು ಎಂಟು ಜನ ಮಂತ್ರಿಗಳಲ್ಲಿ ಹಂಚಿದನು. ಇವರೇ ಅವನ 'ಅಷ್ಟ ಪ್ರಧಾನರು. ೧. ಪಂತ ಪ್ರಧಾನ (ಮುಖ್ಯಮಂತ್ರಿ, ಪೇಶವೆ). ೨. ಪಂತ ಅಮಾತ್ಯ (ಹಣ ಕಾಸಿನ ಮಂತ್ರಿ. (ಆಯ-ವ್ಯಯಗಳ ಲೆಕ್ಕ ಪತ್ರ ಇಡುವವನು). ೩. ಪಂತ ಸಚಿವ (ಕಾಗದಪತ್ರಗಳನ್ನು ಸಂಗ್ರಹಿಸಿ ಕಾದಿಡುವವನು). ೪. ಮಂತ್ರಿ (ಅರಸನ ಖಾಸಗಿ ಕಾರಭಾರವನ್ನು ನೋಡಿಕೊಳ್ಳುವವನು). ೫. ಸೇನಾಪತಿ

(ಸೈನ್ಯದ ಮುಖ್ಯಾಧಿಕಾರಿ). ೬. ಸುಮಂತ (ಪರರಾಜ್ಯಗಳೊಂದಿಗೆ ವ್ಯವಹಾರ ಮಾಡುವವನು). ೭. ನ್ಯಾಯಾಧೀಶ (ನ್ಯಾಯದಾನ ಮಾಡುವವನು). ೮. ಪಂಡಿತರಾವ (ಧರ್ಮವ್ಯವಸ್ಥೆ ನೋಡಿಕೊಳ್ಳುವವನು). [ಆರಂಭದ ಎಂಟು ಮಂತ್ರಿಗಳು ಅನುಕ್ರಮವಾಗಿ ಕೆಳಗಿನಂತಿದ್ದರು : ೧. ಮೋರೋಪಂತ ಪಿಂಗಳೆ. ೨. ನಿಳಾಜಿ ಸೋನದೇವ. ೩. ಅಣ್ಣಾಜಿ ದತ್ತೋ. ೪. ದತ್ತಾಜಿ ಪಂತ ಬೋಕೀಲ. ೫. ಹಂಬೀರರಾವ ಮೋಹಿತೆ. ೬. ಸೋಮನಾಥಪಂತ. ೭. ನಿರಾಜಿ ರಾವಜಿ. ೮. ರಘುನಾಥ ಪಂತ.]

ಇವರು ಶಿವಾಜಿಯ ರಾಜ್ಯದ ಮುಖ್ಯ ಅಧಿಕಾರಿಗಳು. ಅರಸನಿಂದ ಸಲಹೆ ಪಡೆದು ಆಡಳಿತವನ್ನು ಸಾಗಿಸಿದರು. ಶಿವಾಜಿಯು ಅಧಿಕಾರಿಗಳಿಗೆ ಜಾಗೀರುಗಳನ್ನು ಹಾಕಿ ಕೊಡುವ ಪದ್ಧತಿಯನ್ನು ನಿಲ್ಲಿಸಿದನು. ಅವರಿಗೆ ಸರಕಾರದಿಂದ ಸಂಬಳವನ್ನು ಗೊತ್ತುಪಡಿಸಿದನು. ಹುದ್ದೆಗಳನ್ನು ಕೊಡುವಾಗ ವಂಶಪರಂಪರೆಯನ್ನು ಲಕ್ಷ್ಯಕ್ಕೆ ತಾರದೆ ಅರ್ಹತೆಯ ಮೇರೆಗೆ ಕೊಡಬೇಕೆಂದು ಅಪ್ಪಣೆ ಮಾಡಿದನು. ಕಂದಾಯವು ಭೂಮಿಯ ಹುಟ್ಟುವಳಿಯಲ್ಲಿ ಸಾಮಾನ್ಯವಾಗಿ ಮೂರರಲ್ಲೊಂದು ಪಾಲು ಇತ್ತು. ಒಕ್ಕಲತನಕ್ಕೆ ಉತ್ತೇಜನವಿತ್ತು. ಶಿವಾಜಿಯು ಗೆದ್ದ ಪ್ರದೇಶಗಳಿಂದ **ಚೌಥಾಯಿ** ( ಉತ್ಪನ್ನದ $\frac{೧}{೪}$ ಭಾಗ), ಮತ್ತು **ಸರದೇಶಮುಖಿ** (ಉತ್ಪನ್ನದ $\frac{೧}{೧೦}$ ಭಾಗ) ಎಂಬ ಕರಗಳನ್ನು ವಸೂಲು ಮಾಡಲಾಗುತ್ತಿತ್ತು.

ನ್ಯಾಯದಾನಕ್ಕಾಗಿ ಹಳ್ಳಿಗಳಲ್ಲಿ ಗ್ರಾಮಪಂಚಾಯತಿಗಳಿದ್ದವು. ರಾಜ್ಯ ಸಂರಕ್ಷಣೆ ಮತ್ತು ರಾಜ್ಯವಿಸ್ತಾರಗಳಿಗಾಗಿ ಶಿವಾಜಿಯಲ್ಲಿ ಸೈನ್ಯ ಹಾಗು ಹಡಗುಪಡೆಗಳಿದ್ದವು. ಶಿವಾಜಿಯ ಮರಣ ಸಮಯದಲ್ಲಿ ಸುಮಾರು ೧ ಲಕ್ಷ ಕಾಲಾಳುಗಳು, ೪೦ ಸಾವಿರ ರಾವುತರು, ೧೨ ನೂರು ಆನೆಗಳು, ೨-೩ ಸಾವಿರ ಒಂಟೆಗಳು ಮತ್ತು ೨೦೦ ಚಿಕ್ಕ ದೊಡ್ಡ ಯುದ್ಧ ಹಡಗುಗಳಿದ್ದವು. ಸೈನ್ಯದಲ್ಲಿ ತೀರ ಚಿಕ್ಕ ಅಧಿಕಾರಿಗಳೆಂದರೆ ಹವಾಲದಾರ ಮತ್ತು ಜುಮ್ಲಾದಾರರೆಂಬವರು. ಸೈನಿಕರು ಅನುಸರಿಸಬೇಕಾದ ರೀತಿ-ನೀತಿಗಳನ್ನು ಗೊತ್ತುಪಡಿಸಲಾಗಿತ್ತು. ಅವನ್ನು ಮೀರಿ ನಡೆದವರಿಗೆ ಉಗ್ರಶಿಕ್ಷೆ ಕೊಡಲಾಗುತ್ತಿತ್ತು. ತನ್ನ ಸೈನಿಕರು ದಾಳಿಗಳಲ್ಲಿ ಗೋ-ಬ್ರಾಹ್ಮಣರ ಗೊಡವೆಗೆ ಹೋಗಕೂಡದೆಂದೂ ಮುಸಲ್ಮಾನರ ಮಸೀದೆ, ಕುರಾನ ಗ್ರಂಥಗಳಿಗೆ ಕೈಹಚ್ಚಕೂಡದೆಂದೂ ಶಿವಾಜಿಯ ಕಟ್ಟಪ್ಪಣೆಯಿತ್ತು. ಸ್ತ್ರೀಯರಿಗೆ ಗೌರವ ತೋರಿಸಲೇ ಬೇಕಿತ್ತು.

ರಾಜ್ಯರಕ್ಷಣೆಗೆ ಭದ್ರವಾದ ಕೋಟೆಗಳು ಪ್ರಬಲ ಸಾಧನಗಳೆಂದು ಶಿವಾಜಿಗೆ ಗೊತ್ತಿತ್ತು. ಅವನ ವಶದಲ್ಲಿ ಸುಮಾರು ೩೦೦ ಕೋಟೆಗಳಿದ್ದವು.

**ಶಿವಾಜಿಯ ಯೋಗ್ಯತೆ :—** ಶಿವಾಜಿಯು ಓದುಬರೆಹ ಬಾರದವ ನಾದರೂ ಅತಿ ಚುರುಕು ಬುದ್ಧಿಯುಳ್ಳವನು. ಸ್ವಧರ್ಮನಿಷ್ಠನಾದರೂ ಪರಧರ್ಮ ಸಹಿಷ್ಣು. ಅವನಿಗೆ ಮುಸಲ್ಮಾನ ಸಾಧುಗಳಲ್ಲಿ ಗೌರವವಿತ್ತು. ಅವನು ದೇವರಲ್ಲೂ ಗುರುಹಿರಿಯರಲ್ಲೂ ಸಾಧುಸಂತರಲ್ಲೂ ಭಕ್ತಿ ವಿಶ್ವಾಸವುಳ್ಳವನು. ಅವನಲ್ಲಿ ಆ ಕಾಲದ ದುರ್ನಡತೆ, ದುಶ್ಚಟಗಳಿರಲಿಲ್ಲ. ಸ್ವಧರ್ಮಾಭಿಮಾನ, ಸ್ವರಾಷ್ಟ್ರಾಭಿಮಾನಗಳು ತುಂಬಿದ್ದವು. ಮೇಲಾಗಿ, ಅವನು ಬಹು ಧೈರ್ಯ ಶಾಲಿ, ಚತುರ ಸೇನಾಪತಿ ಮತ್ತು ರಾಜಕಾರಣಿ. ಅಂತೆಯೇ ಅವನು ಮುಸ ಲ್ಮಾನ ರಾಜ್ಯದಲ್ಲಿಯ ಚಿಕ್ಕ ಜಾಗೀರದಾರನ ಮಗನ ಮಟ್ಟದಿಂದ ಬಲಿಷ್ಠ ರಾಜನ ಪದವಿಗೇರಿದನು. 'ಗೋಬ್ರಾಹ್ಮಣ ಪ್ರತಿಪಾಲಕ', 'ಸ್ವರಾಜ್ಯ ಸಂಸ್ಥಾಪಕ' ನೆಂದು ಕೀರ್ತಿ ಗಳಿಸಿದನು.

**ಸಂಭಾಜಿ, ರಾಜಾರಾಮ, ತಾರಾಬಾಯಿ** (೧೬೮೦–೧೭೦೭):— ಶಿವಾಜಿಯು ಮರಣ ಹೊಂದಿದ ಕೂಡಲೇ, ಸಂಭಾಜಿಯನ್ನು ಬದಿಗೊತ್ತಿ **ರಾಜಾರಾಮ**ನಿಗೆ ಪಟ್ಟಗಟ್ಟಬೇಕೆಂದು ರಾಯಗಡದಲ್ಲಿ ಒಂದು ಒಳಸಂಚು ನಡೆದಿತ್ತು. (ರಾಜಾರಾಮನು ಶಿವಾಜಿಯ ಕಿರಿಯ ಮಗ, ಸಂಭಾಜಿಯ ಮಲತಮ್ಮ). ಆದರೆ ಸಂಭಾಜಿಯು ಪನ್ಹಾಳಗಡದಿಂದ ಬಿಡುಗಡೆ ಹೊಂದಿ ರಾಯಗಡಕ್ಕೆ ಬಂದು ತಾನೇ ಪಟ್ಟವೇರಿದನು (೧೬೮೦). ಒಳಸಂಚುಗಾರರಿಗೆ ಉಗ್ರ ಶಿಕ್ಷೆ ಕೊಟ್ಟು ರಾಜಾರಾಮನನ್ನು ಸೆರೆಯಲ್ಲಿರಿಸಿದನು. ಸಂಭಾಜಿಯು ಶೂರ, ಸಾಹಸಿಗ, ಧೈರ್ಯಶಾಲಿ; ಆದರೆ ವಿಷಯಾಸಕ್ತನು. ಕಲುಷನೆಂಬ ದುಷ್ಟ ಮಂತ್ರಿಯ ಪ್ರಭಾವಕ್ಕೆ ಅವನು ಒಳಗಾದನು. ಅವನ ಸಹವಾಸದಲ್ಲಿ ರಾಜ್ಯಕಾರ್ಯಗಳನ್ನು ಬದಿಗೊತ್ತಿ ಭೋಗವಿಲಾಸಗಳಲ್ಲಿ ಮೈಮರೆಯತೊಡ ಗಿದನು. ಅಷ್ಟ ಪ್ರಧಾನರ ಸಲಹೆಗೆ ಕಿವಿಗೊಡದಾದನು. ಅಂತೆಯೇ ಕೊನೆಗೆ ಅವನು ಔರಂಗಜೇಬನ ಸೆರೆಯಲ್ಲಿ ಸಿಕ್ಕು ಪ್ರಾಣಕ್ಕೆ ಎರವಾದನು (೧೬೮೯). ಬಳಿಕ ರಾಯಗಡವು ಮೊಗಲರ ವಶವಾಯಿತು. ಅಲ್ಲಿದ್ದ **ಯೇಸೂಬಾಯಿ** (ಸಂಭಾಜಿಯ ಹೆಂಡತಿ) ಮತ್ತು ಅವಳ ೭ ವರ್ಷದ ಮಗನಾದ **ಶಿವಾಜಿ** (ಶಾಹೂ) ಇವರು ಔರಂಗಜೇಬನ ಕೈಸೆರೆಯಾದರು. ರಾಜಾರಾಮನು ಎಲ್ಲರ ಒಪ್ಪಿಗೆಯಿಂದ ಶಾಹುವಿನ ಪ್ರತಿನಿಧಿಯಾಗಿ ಪನ್ಹಾಳದಲ್ಲಿ ರಾಜ್ಯಕಾರ್ಯ ನಡೆಸಿದನು. ಆದರೆ ಮೊಗಲರು ಪನ್ಹಾಳಗಡವನ್ನೂ ಮುತ್ತಿದರು. ಆಗ ರಾಜಾರಾಮನು ಅಲ್ಲಿಂದ ಪಾರಾಗಿ ಕೆಲವು ಸ್ವಾಮಿನಿಷ್ಠ ಸರದಾರರೊಂದಿಗೆ

ವೇಷ ಬದಲಾವಣೆಯಿಂದ ದಕ್ಷಿಣದಲ್ಲಿಯ ಜಿಂಜಿಗೆ ಹೋದನು (೧೬೯೦). ಜಿಂಜಿಯು ಮರಾಠರ ಹೊಸ ರಾಜಧಾನಿಯಾಯಿತು. ಆದರೆ ೮ ವರುಷಗಳ ಮುತ್ತಿಗೆಯ ನಂತರ ಅದೂ ಮೊಗಲರ ಕೈವಶವಾಯಿತು. ರಾಜಾರಾಮನು ಮಾತ್ರ ಅವರ ಕೈಗೆ ಸಿಗದೆ ಪಾರಾಗಿ ಸಾತಾರೆಗೆ ಬಂದನು (೧೬೯೮). ಹೊಸ ಸೈನ್ಯ ಸಂಗ್ರಹಿಸಿ ಮೊಗಲರ ಪ್ರದೇಶಗಳಲ್ಲಿ ಚೌಥಾಯಿ, ಸರದೇಶಮುಖಿ ಗಳನ್ನು ವಸೂಲು ಮಾಡತೊಡಗಿದನು. ಕ್ರಿ. ಶ. ೧೭೦೦ ರಲ್ಲಿ ರಾಜಾರಾಮನು ಕಾಲವಾದನು. ಆಗ ಅವನ ಹೆಂಡತಿಯಾದ **ತಾರಾಬಾಯಿಯು** ತನ್ನ ಚಿಕ್ಕಮಗ **ಶಿವಾಜಿಯನ್ನು** ಪಟ್ಟದ ಮೇಲೆ ಕುಳ್ಳಿರಿಸಿ ಮೊಗಲರನ್ನು ಎದು ರಿಸುವ ಕಾರ್ಯವನ್ನು ಮುಂದುವರಿಸಿದಳು. ಮೊಗಲರು ಮೇಲಿಂದ ಮೇಲೆ ಗೆದ್ದ ಮರಾಠರ ಪ್ರಬಲ ಕೋಟೆಗಳೆಲ್ಲ ಮರಳಿ ಅವರ ವಶಕ್ಕೇ ಹೋಗ ಹತ್ತಿದವು. ಔರಂಗಜೇಬನು ಬೇಸರಗೊಂಡನು. ಮರಾಠರ ಈ ದೀರ್ಘಾ ವಧಿಯ ಸ್ವಾತಂತ್ರ್ಯ-ಯುದ್ಧದಲ್ಲಿ **ರಾಮಚಂದ್ರ ಪಂತ ಅಮಾತ್ಯ, ಪರಶುರಾಮ ತ್ರಿಂಬಕ, ಧನಾಜಿ ಜಾಧವ, ಸಂತಾಜಿ ಘೋರಪಡೆ, ಖಂಡೇರಾವ ದಾಭಾಡೆ, ನೇಮಾಜಿ ಶಿಂದೆ, ಪರಸೋಜಿ ಭೋಸಲೆ** ಮುಂತಾದ ಮರಾಠಾ ವೀರರು ಅತುಲ ಪರಾಕ್ರಮದಿಂದ ಕಾದಿ ಹೆಸರಾದರು. ಔರಂಗಜೇಬನ ಮರಣಾನಂತರ ಶಾಹುವು ಬಿಡುಗಡೆ ಹೊಂದಿ ಸಾತಾರೆಗೆ ಬಂದನು (೧೭೦೭). ಅರಸೊತ್ತಿಗೆಯ ಸಲುವಾಗಿ ತಾರಾಬಾಯಿಯೊಂದಿಗೆ ಯುದ್ಧ ನಡೆಯಿತು. ಅದರಲ್ಲಿ ಶಾಹುವು ವಿಜಯಿಯಾಗಿ ಪಟ್ಟವೇರಿದನು. ಮುಂದೆ, ಅವನು **ಬಾಳಾಜಿ ವಿಶ್ವನಾಥನೆಂಬ** ಕೊಂಕಣಿ ಬ್ರಾಹ್ಮಣನನ್ನು ತನ್ನ ಪೇಶವೆಯನ್ನಾಗಿ ಮಾಡಿಕೊಂಡನು (೧೭೧೩). ತಾರಾಬಾಯಿಯು ಕೊಲ್ಹಾಪುರದಲ್ಲಿ ಹೊಸದೊಂದು ಮರಾಠಾ ರಾಜ್ಯವನ್ನು ಸ್ಥಾಪಿಸಿದಳು (೧೭೦೪).

## ಅಭ್ಯಾಸನಗಳು.

೧. ಬಾಲ್ಯದಲ್ಲಿಯೇ ತುಸುಮಟ್ಟಿಗೆ ಶಿವಾಜಿಗೆ ಸ್ವರಾಜ್ಯ ಸ್ಥಾಪನೆಗೆ ತಕ್ಕ ಶಿಕ್ಷಣ ದೊರೆಯಿತು. ಈ ಹೇಳಿಕೆಗೆ ಆಧಾರಗಳನ್ನು ಕೊಡಿರಿ.

೨. ಶಿವಾಜಿಯು ಆಗ್ರಾದಿಂದ ಪಾರಾಗಿ ಬಂದ ಕತೆಯನ್ನು ನಿಮ್ಮ ಮಾತಿನಲ್ಲಿ ಹೇಳಿರಿ.

೩. ಶಿವಾಜಿಯು ನೀವೇ ಎಂದು ಭಾವಿಸಿ ಸಿಂಹಾಸನಾರೋಹಣ ಸಮಾರಂಭದಲ್ಲಿ ನಡೆದ ಮಹತ್ವದ ಸಂಗತಿಗಳನ್ನು ವರ್ಣಿಸಿರಿ.

೪. ಕ್ರಿ. ಶ. ೧೬೮೯-೧೭೦೭ ರ ವರೆಗೆ ಮಹಾರಾಷ್ಟ್ರವನ್ನು ಮೊಗಲರಿಂದ ಸಂರಕ್ಷಿಸಿದ ವೀರರ ಹೆಸರುಗಳನ್ನು ಬರೆಯಿರಿ.

## ೧೬ ನೆಯ ಪ್ರಕರಣ

# ಮರಾಠಾ ರಾಜ್ಯದ ವಿಸ್ತರಣೆ

### (ಮೊದಲಿನ ಮೂವರು ಪೇಶವೆಯರ ಆಳಿಕೆಯಲ್ಲಿ)

### ೧ ನೆಯ ಪೇಶವೆ: ಬಾಳಾಜಿ ವಿಶ್ವನಾಥ (೧೭೧೩–೧೭೨೦).

**ಉದಯ:—** ಬಾಳಾಜಿ ವಿಶ್ವನಾಥನು ಮೂಲತಃ ಕೊಂಕಣದಲ್ಲಿ ಶ್ರೀವರ್ಧನ ಗ್ರಾಮದ ದೇಶಮುಖನು; ಭಟ್ಟ ಮನೆತನದ ಬ್ರಾಹ್ಮಣನು. ಅವನು ಸಂಭಾಜಿಯ ಆಳಿಕೆಯ ಆರಂಭದ ಸುಮಾರಿಗೆ ಕೊಂಕಣವನ್ನು ಬಿಟ್ಟು ಬಂದನು. ಧನಾಜಿ ಜಾಧವನ ಕೈಕೆಳಗೆ ಕಾರಕೂನನಾದನು. ಶಾಹುವು ಪಟ್ಟವನ್ನು ಪಡೆಯಲೋಸುಗ ಸಾತಾರೆಗೆ ಬಂದಾಗ ಬಾಳಾಜಿಯು ಧನಾಜಿಯಲ್ಲಿ ಸರಸುಬೇದಾರನಾಗಿದ್ದನು. ಶಾಹುವಿಗೆ ಧನಾಜಿಯ ಸಹಾಯ ಸಿಗುವಂತೆ ಇವನು ಅವನ ಮನಸ್ಸನ್ನು ಒಲಿಸಿದನು. ಧನಾಜಿಯು ಶಾಹುವಿನ ಸೇನಾಪತಿಯಾಗಿ ಯುದ್ಧದಲ್ಲಿ ತಾರಾಬಾಯಿಯನ್ನು ಸೋಲಿಸಿದನು. ಇದರಿಂದ ಶಾಹುವು ಛತ್ರಪತಿಯಾದನು. ಆದರೆ ತಾರಾಬಾಯಿಯ ಕುತಂತ್ರದಿಂದ ಮರಾಠಾ ಸರದಾರರು ಒಬ್ಬೊಬ್ಬರಾಗಿ ಶಾಹುವಿನ ಪಕ್ಷ(ಪಂಗಡ) ವನ್ನು ಬಿಟ್ಟುಹೋಗಹತ್ತಿದರು. ಕ್ರಿ. ಶ. ೧೭೧೦ ರಲ್ಲಿ ಧನಾಜಿಯು ಮರಣ ಹೊಂದಿದನು. ಅವನ ಮಗನಾದ ಚಂದ್ರಸೇನನು ಕೊಲ್ಹಾಪುರಕ್ಕೆ ಹೋಗಿ ತಾರಾಬಾಯಿಯ ಪಕ್ಷವನ್ನು ಕೂಡಿದನು. ಹೀಗಾಗಿ ಶಾಹುವಿನ ಪಕ್ಷವು ಕುಗ್ಗಿತು. ಈ ಸಂಧಿಕಾಲದಲ್ಲಿ ಅವನನ್ನು ಎತ್ತಿಹಿಡಿಯಲು ಬಾಳಾಜಿಯೇ ಮುಂದೆ ಬಂದನು. ಶಾಹುವು ಅವನನ್ನು ಸೇನಾಪತಿಯನ್ನಾಗಿ ಮಾಡಿಕೊಂಡನು. ಆಗ ಬಾಳಾಜಿಯು ಯುಕ್ತಿ ಪ್ರಯುಕ್ತಿಗಳಿಂದ ತಾರಾಬಾಯಿಯ ಸರದಾರರನ್ನು ತನ್ನ ಕಡೆಗೆ ಒಡೆದುಕೊಂಡನು. ಛತ್ರಪತಿಯ ಶತ್ರುಗಳನ್ನು ಅವನ ಮಿತ್ರರನ್ನಾಗಿ ಮಾರ್ಪಾಟು ಮಾಡಿದನು. ಶಾಹುವು ಇವನ ಬುದ್ಧಿ ಚಾತುರ್ಯ, ಮುತ್ಸದ್ದಿತನಗಳನ್ನು ಮೆಚ್ಚಿ ಇವನನ್ನೇ ಪೇಶವೆಯನ್ನಾಗಿ ಮಾಡಿಕೊಂಡನು. ಶಾಹುವು ಚಿಕ್ಕವಯಸ್ಸಿನಿಂದ ಮೊದಲುಗೊಂಡು ೧೮ ವರುಷ ಔರಂಗಜೇಬನ ಸೆರೆಯಲ್ಲಿದ್ದು, ಹೆಚ್ಚಾಗಿ ಭೋಗವಿಲಾಸಗಳಲ್ಲಿ ಕಾಲಕಳೆದವನು. ಆದುದರಿಂದ ಈಗ ಅವನಿಗೆ ರಾಜಕಾರಣದಲ್ಲಿ ತಲೆಕೆಡಿಸಿಕೊಳ್ಳುವದು ರುಚಿಸಲಿಲ್ಲ. ಅಂತೆಯೇ ಅವನ ಕಾಲದಲ್ಲಿ ಪೇಶವೆಗೆ ಪ್ರಭುತ್ವ ದೊರೆಯಿತು.

**ಪೇಶವೆಯಾದ ಮೇಲೆ ಬಾಳಾಜಿರಾಯನು ಮಾಡಿದ ಮಹತ್ಕಾರ್ಯಗಳು :**— ಸುಪೆ ಜಿಲ್ಹೆಯ ಜಾಗೀರುದಾರನಾದ ದಾಮಾಜಿ ಥೋರಾತನು ಶಾಹುವಿನ ಪ್ರಬಲ ವೈರಿಯಾಗಿದ್ದನು. ಬಾಳಾಜಿಯು ಅವನ ಮೇಲೆ ಏರಿಹೋಗಿ ಅವನನ್ನು ಸೆರೆಹಿಡಿದು ಪುರಂದರದಲ್ಲಿ ತಂದಿಟ್ಟನು. ಪಶ್ಚಿಮ ಕರಾವಳಿಯಲ್ಲಿ ಮರಾಠಾ ಹಡಗುಪಡೆಯ ಮುಖ್ಯಸ್ಥನಾದ ಕಾನ್ಹೋಜಿ ಆಂಗ್ರೆ ಮತ್ತು ಶಾಹು ಇವರಲ್ಲಿ ಪರಸ್ಪರ ತಪ್ಪುತಿಳುವಳಿಕೆ ಬೆಳೆದಿತ್ತು. ಬಾಳಾಜಿಯು ಅದನ್ನು ಪರಿಹರಿಸಿದನು. ಇದೇ ಸಮಯಕ್ಕೆ ದಿಲ್ಲಿಯಲ್ಲಿ ಮೊಗಲ ಬಾದಶಾಹನಾದ ಫರ್ರುಖಸಿಯರ ಮತ್ತು ಸೈಯ್ಯದ ಬಂಧುಗಳಲ್ಲಿ ವ್ಯಾಜ್ಯ ಉಂಟಾಗಿತ್ತು. ಬಾಳಾಜಿಯು ಸೈಯ್ಯದ ಬಂಧುಗಳ ಪಕ್ಷ ವಹಿಸಿದನು. ಅವರಿಗೆ ಸಹಾಯ ಮಾಡಲು ದೊಡ್ಡ ಸೈನ್ಯದೊಂದಿಗೆ ತಾನೇ ದಿಲ್ಲಿಗೆ ಹೋದನು (೧೭೧೯). ಇವನ ಸಹಾಯದಿಂದ ಅವರು ಮುಹಮ್ಮದಶಾಹ(ಔರಂಗಜೇಬನ ಮರಿಮಗ) ನಿಗೆ ಪಟ್ಟಗಟ್ಟಿದರು. ಬಾಳಾಜಿಯೊಂದಿಗೆ ತಾವು ಮಾಡಿಕೊಂಡಿದ್ದ ಕರಾರುಗಳಿಗೆ (ಹೊಸ) ಬಾದಶಾಹನ ಒಪ್ಪಿಗೆ ದೊರೆಯುವಂತೆ ಮಾಡಿದರು. ಇದರಿಂದ ಶಾಹುವನ್ನು ಮರಾಠರ ರಾಜನೆಂದು ಒಪ್ಪಿಕೊಳ್ಳಲಾಯಿತು. ಯೇಸೂಬಾಯಿಗೆ ಬಿಡುಗಡೆ ದೊರೆಯಿತು. ಮರಾಠರು ಗೆದ್ದ ಪ್ರದೇಶಗಳು ಶಾಹುವಿಗೆ ಮರಳಿ ದೊರೆತವು. ಮೊಗಲರ ದಕ್ಷಿಣದ ಆರು ಸುಬೆಗಳಲ್ಲಿ ಚೌಥಾಯಿ, ಸರದೇಶಮುಖಿಗಳನ್ನು ವಸೂಲ ಮಾಡುವ ಅಧಿಕಾರವನ್ನೂ ಶಾಹುವಿಗೆ ಕೊಡಲಾಯಿತು. ಶಾಹುವು ಪ್ರತಿವರುಷ ಹತ್ತು ಲಕ್ಷ ರೂಪಾಯಿ ಕಪ್ಪವನ್ನು ಕೊಡಲೂ ೧೫ ಸಾವಿರ ರಾವುತರನ್ನು ಬಾದಶಾಹನ ಉಪಯೋಗಕ್ಕಾಗಿ ಸಿದ್ಧವಾಗಿಡಲೂ ಒಪ್ಪಿಕೊಂಡನು.

ಬಾಳಾಜಿಯು ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಚೌಥಾಯಿ ಸರದೇಶಮುಖಿಗಳನ್ನು ಎತ್ತುವ ಅಧಿಕಾರವನ್ನು ಶೂರ ಮರಾಠಾ ಸರದಾರರಲ್ಲಿ ಹಂಚಿಕೊಟ್ಟನು. ಆ ಪ್ರದೇಶಗಳು ಅವರ ಜಾಗೀರುಗಳಾದವು. ಅವರ ಮೇಲೆ ಕೆಳಗಿನಂತೆ ಕರಾರುಗಳನ್ನು ಹೇರಲಾಯಿತು: ೧. ತಮ್ಮ ಜಾಗೀರುಗಳ ಆಡಳಿತವನ್ನು ತಾವೇ ಸಾಗಿಸಬೇಕು. ೨. ಗೊತ್ತುಪಡಿಸಿದ ಕಪ್ಪವನ್ನು ಪ್ರತಿವರುಷ ರಾಜಧಾನಿಗೆ ಸಲ್ಲಿಸಬೇಕು. ೩. ಲೆಕ್ಕಪತ್ರಗಳನ್ನು, ಸಂಬಂಧಿಸಿದ ಅಧಿಕಾರಿಗಳಿಗೆ ಒಪ್ಪಿಸಬೇಕು. ೪. ಛತ್ರಪತಿಯ ರಾಜ್ಯವನ್ನು ಉಳಿಸಲಿಕ್ಕೂ ಬೆಳೆಸಲಿಕ್ಕೂ ಸಹಾಯ ಸಲ್ಲಿಸಬೇಕು. ಈ ಪದ್ಧತಿಗೆ **ಸರಂಜಾಮಿ ಪದ್ಧತಿ** ಎಂದೂ ಹೆಸರಿದೆ. ಬಾಳಾಜಿಯು ದಿಲ್ಲಿಯಿಂದ ಮರಳಿ ಬಂದ ಕೂಡಲೆ ಸಾಸವಾಡವೆಂಬಲ್ಲಿ ಮರಣ ಹೊಂದಿದನು. (೧೭೨೦).

**೨ ನೆಯ ಪೇಶವೆ: ಒಂದನೆಯ ಬಾಜೀರಾಯ(೧೭೨೦-೧೭೪೦).** ಬಾಜೀರಾಯನು ಬಾಳಾಜಿ ಪೇಶವೆಯ ಹಿರಿಯ ಮಗನು. ಚಿಮಾಜಿಯು ಬಾಳಾಜಿಯ ಕಿರಿಯ ಮಗನು. ತಂದೆ ತೀರಿದಾಗ ಬಾಜೀರಾಯನು ೨೦ ವರುಷ ವಯಸ್ಸಿನವನಿದ್ದನು. ಚಿಕ್ಕಂದಿನಿಂದಾಗಲಿ ತಂದೆಯ ಸಹವಾಸದಲ್ಲಿ ಇವನಿಗೆ ರಾಜ್ಯಕಾರ್ಯ ರಣರಂಗಗಳ ಪರಿಚಯವಾಗಿತ್ತು. ಇವನು ಧಿಟ್ಟ ಸವಾರ, ಚತುರ ಬರ್ಚಿಗಾರ, ನುರಿತ ಕತ್ತಿಯುಂಟು. ಇವನದು ಎತ್ತರವಾದ ಮೈಕಟ್ಟು, ತಿಳಿ ಬಿಳಿಯಾದ ಮೈಬಣ್ಣ, ಚೆಲುವಾದ ಚಹರೆ. ತಂದೆಯು ತೀರಿದ ಬಳಿಕ ಹದಿನೈದೇ ದಿನಗಳಲ್ಲಿ ಇವನಿಗೆ ಪೇಶವೆ ಹುದ್ದೆಯು ದೊರೆಯಿತು (೧೭೨೦).




ಪೇಶವೆ ಬಾಜೀರಾಯನಿಗೆ ಸಹಾಯಕರಾದ ಮರಾಠಾ ಸರದಾರರು.

**ಪೇಶವೆಯಾದಮೇಲೆ:—** ಬಾಜೀರಾಯನು ಇಡೀ ಭಾರತದಲ್ಲಿ ಹಿಂದು ಸಾಮ್ರಾಜ್ಯ ಸ್ಥಾಪಿಸಬೇಕೆಂದು ಬಯಸಿದನು. ರಾಜಸಭೆಯಲ್ಲಿ ತನ್ನ ಈ ಧೋರಣೆಯನ್ನು ಸಾರಿದನು. ಸ್ವರಾಜ್ಯದ ಆರ್ಥಿಕ (ಹಣಕಾಸಿನ)

ಪರಿಸ್ಥಿತಿಯ ಸುಧಾರಣೆಗೆ, ಮೊಗಲಸಾಮ್ರಾಜ್ಯದ ಹೃದಯದಂತಿದ್ದ ಉತ್ತರ ಭಾರತದ ಧನಾಢ್ಯ ಭಾಗಗಳನ್ನು ಸುಲಿಯುವದೇ ಯೋಗ್ಯ ಮಾರ್ಗವೆಂದು ಇವನು ಪ್ರತಿಪಾದಿಸಿದನು. ಈ ಚರ್ಚೆಯ ಕೊನೆಗೆ, ಶಾಹುವು ಇವನ ಧೋರಣೆಯನ್ನೇ ಎತ್ತಿಹಿಡಿದನು. ಆದರೆ ಇದನ್ನು ಕೃತಿಯಲ್ಲಿ ತರಲು ಮಾತ್ರ ಕೆಲವು ವರುಷಗಳು ಬೇಕಾದವು.

**ರಾಜಕೀಯ ಪರಿಸ್ಥಿತಿ:—** ದಿಲ್ಲಿಯ ಮುಹಮ್ಮದಶಾಹ, ಹೈದರಾಬಾದದ ನಿಜಾಮ-ಉಲ್ಮುಲ್ಕ, ಮಾಳವದ ರಾಜಾ ಗಿರಿಧರ, ಬುಂದೇಲಖಂಡದ




ಬಾಜೀರಾಯನ ಕಾಲದ ದೊರೆಗಳು.

ರಾಜಾ ಛತ್ರಸಾಲ ಇವರು ಬಾಜೀರಾಯನ ಸಮಕಾಲೀನ ದೊರೆಗಳು. ಸ್ವರಾಜ್ಯವನ್ನು ಸಾಮ್ರಾಜ್ಯವನ್ನಾಗಿ ಮಾಡುವ ಮಹತ್ಕಾರ್ಯದಲ್ಲಿ ಬಾಜೀರಾಯನು ಮುಹಮ್ಮದಶಾಹ, ನಿಜಾಮುಉಲ್ಮುಲ್ಕ, ರಾಜಾ ಗಿರಿಧರರನ್ನು

ಕೊಂಕಣದಲ್ಲಿ ಸಿದ್ದೀ ಹಾಗೂ ಪೋರ್ತುಗೀಜ ಜನರನ್ನೂ ಎದುರಿಸಿ ಯುದ್ಧ ಮಾಡಬೇಕಾಯಿತು. ಇವನ ಕಾರ್ಯದಲ್ಲಿ ನೆರವಾದ ಸರದಾರರಲ್ಲಿ **ರಾಣೋಜಿ ಶಿಂದೆ, ಮಲ್ಹಾರರಾವ ಹೋಳಕರ, ಉದಾಜಿ ಪವಾರ, ದಾಮಾಜಿ ಗಾಯಕವಾಡ, ಗೋವಿಂದಪಂತ ಖೇರ** ಇವರು ಮುಖ್ಯರು.

**ಮಾಳವಾದ ಮುತ್ತಿಗೆ ಮತ್ತು ಒಡೆತನ :**— ಬಾಜೀರಾಯನು ಸಾಕಷ್ಟು ಬಲಗೊಂಡಬಳಿಕ ಮಾಳವಪ್ರಾಂತದ ಮೇಲೆ ದಾಳಿಮಾಡಿದನು (೧೭೨೪). ಅಲ್ಲಿಯ ಮೊಗಲ ಸುಬೇದಾರನಾದ ರಾಜಾ ಗಿರಿಧರನು ಸೋತನು. ರಾಣೋಜಿ ಶಿಂದೆಯು ಇದರಲ್ಲಿ ತೋರಿಸಿದ ಪರಾಕ್ರಮಕ್ಕಾಗಿ ಅವನಿಗೆ ಗ್ವಾಲ್ಹೇರವು ಜಾಗೀರಾಗಿ ದೊರೆಯಿತು. ಮತ್ತೊಮ್ಮೆ (೧೭೩೨ ರಲ್ಲಿ) ಮಾಡಿದ ದಾಳಿಯಲ್ಲಿ ಮಲ್ಹಾರರಾವ ಹೋಳಕರನಿಗೆ ಶಾಹುವು ಇಂದೂರನ್ನು ಜಾಗೀರಾಗಿ ಕೊಟ್ಟನು. ಈ ದಾಳಿಯಲ್ಲಿ ರಾಜಾ ಗಿರಿಧರನು ಮರಣಹೊಂದಿದನು. ಮುಂದೆ, ಬಾಜೀರಾಯನು ದಿಲ್ಲಿಯಮೇಲೆ ದಂಡೆತ್ತಿ ಹೋದಾಗ ಬಾದಶಾಹನು ಅವನಿಗೆ ಮಾಳವದ ಸುಬೇದಾರಿಕೆಯನ್ನು ಕೊಟ್ಟನು. ಬಳಿಕ ನಿಜಾಮ-ಉಲ್ಮುಲ್ಕನ ಪ್ರಭಾವಕ್ಕೊಳಗಾಗಿ ಬಾದಶಾಹನು ಅದನ್ನು ನಿಜಾಮನ ಹಿರಿಯ ಮಗನಿಗೆ ಕೊಟ್ಟನು. ಆದುದರಿಂದ ಭೋಪಾಳದ ಬಳಿಯಲ್ಲಿ ಬಾಜೀರಾಯನಿಗೂ ನಿಜಾಮಉಲ್ಮುಲ್ಕನಿಗೂ ಯುದ್ಧವಾಯಿತು. ನಿಜಾಮನು ಸೋತು ಒಪ್ಪಂದ ಮಾಡಿಕೊಂಡನು (೧೭೩೮). ಅದರ ಮೇರೆಗೆ ಬಾದಶಾಹನು ಮರಾಠರಿಗೆ ಮಾಳವ, ಮತ್ತು ನರ್ಮದಾ ಚಂಬಳ ನದಿಗಳ ನಡುವಿನ ಸೀಮೆಗಳನ್ನು ಕೊಟ್ಟನು. ಇವು ಮರಾಠರ ಸಂಪೂರ್ಣ ಪ್ರಭುತ್ವಕ್ಕೊಳಗಾದವು. ಈ ಅವಧಿಯಲ್ಲಿ ಉದಾಜಿ ಪವಾರನಿಗೂ ಮಾಳವದಲ್ಲಿ ಒಂದು ಚಿಕ್ಕ ಜಾಗೀರನ್ನು ಕೊಡಲಾಯಿತು. ಧಾರ ಇದು ಪವಾರ ಮನೆತನದ ಮುಖ್ಯ ಸ್ಥಳವಾಯಿತು.

**ನಿಜಾಮನೊಂದಿಗೆ ಯುದ್ಧ :**— ನಿಜಾಮ-ಉಲ್ಮುಲ್ಕನು ಕ್ರಿ. ಶ. ೧೭೨೪ ರಲ್ಲಿ ತನ್ನ ಸ್ವತಂತ್ರರಾಜ್ಯವನ್ನು ಹೈದರಾಬಾದಿನಲ್ಲಿ ಕಟ್ಟಿಕೊಂಡನಷ್ಟೆ? ಆ ಬಳಿಕ ಮರಾಠರಿಗೆ ಚೌಥಾಯಿ, ಸರದೇಶಮುಖಿಗಳನ್ನು ಕೊಡದಾದನು. ಬಾಜೀರಾಯನು ಅವನ ಮೇಲೆ ಏರಿಹೋಗಿ ಪಾಲಖೇಡ ಎಂಬಲ್ಲಿ ಅವನನ್ನು ಸೋಲಿಸಿದನು (೧೭೨೮). ನಿಜಾಮನು ಬಾಜೀರಾಯನೊಡನೆ ಒಪ್ಪಂದ

ಮಾಡಿಕೊಂಡು ಅದರ ಮೇರೆಗೆ ಆ ಕರಗಳನ್ನು ಸಲ್ಲಿಸಿದನು. (ಭೋಪಾಳದ ಬಳಿ ನಡೆದ ಯುದ್ಧದ ಸಂಗತಿಗಳನ್ನು ಮೇಲೆ ವಿವರಿಸಲಾಗಿದೆ.)

**ಬುಂದೇಲಖಂಡದ ರಾಜಾ ಛತ್ರಸಾಲನಿಗೆ ಸಹಾಯ:—** ಬುಂದೇಲಖಂಡದಲ್ಲಿ ಛತ್ರಸಾಲನ ಚಿಕ್ಕ ರಾಜ್ಯವಿತ್ತು. ಮಹಮ್ಮದ ಬಂಗಷ ನೆಂಬ ಮೊಗಲ ಸರದಾರನು ಅವನ ಮೇಲೆ ದಾಳಿಯಿಟ್ಟನು (೧೭೨೮). ಛತ್ರ ಸಾಲನು ಬಾಜೀರಾಯನಿಗೆ ಮೊರೆಹೋದನು. ಬಾಜೀರಾಯನು ತ್ವರೆಯಿಂದ ಅಲ್ಲಿಗೆ ಹೋಗಿ ಬಂಗಷನನ್ನು ಸಂಪೂರ್ಣವಾಗಿ ಸೋಲಿಸಿದನು. ಛತ್ರಸಾಲನು ಮರಾಠರಿಗೆ ೩೦ ಲಕ್ಷದ ಸೀಮೆಯನ್ನು ಉಂಬಳಿಯಾಗಿ ಕೊಟ್ಟನು.

ಕ್ರಿ. ಶ. ೧೭೩೫ ರಲ್ಲಿ ಇಡೀ ಗುಜರಾತವು ಮರಾಠರ ಕೈವಶವಾಯಿತು. ಬಾಜೀರಾಯನು ಕೊಂಕಣದಲ್ಲಿ ಸಿದ್ದೀ ಜನರೊಡನೆ ಯುದ್ಧಮಾಡಿ ರಾಯ ಗಡವನ್ನು ಕೈವಶ ಮಾಡಿಕೊಂಡನು. ಚಿಮಾಜಿಯು ಪೋರ್ತುಗೀಜರಿಂದ ಸಾಷ್ಟಿ ಮತ್ತು ವಸಯಿ ನಡುಗಡ್ಡೆಗಳನ್ನು ವಶಮಾಡಿಕೊಂಡನು. ಶಾಹುವು ತಾನೇ ದಂಡೆತ್ತಿ ಹೋಗಿ ಮೊಗಲರ ವಶದಲ್ಲಿದ್ದ ಮಿರಜ ಕೋಟೆಯನ್ನು ತೆಗೆದುಕೊಂಡನು.

**ಮರಣ ಮತ್ತು ಯೋಗ್ಯತೆ:—** ಬಾಜೀರಾಯನು ನಾದಿರಶಹನನ್ನು ಎದುರಿಸಲು ಉತ್ತರ ಭಾರತಕ್ಕೆ ಹೊರಟನು. ಆದರೆ ಮಾರ್ಗದಲ್ಲಿಯೇ (ನರ್ಮದಾನದಿಯ ದಂಡೆಯಮೇಲೆ ರಾವೇರ ಎಂಬಲ್ಲಿ) ಜ್ವರದಿಂದ ಮರಣ ಹೊಂದಿದನು (೧೭೪೦). ಬಾಜೀರಾಯನು ಸಮರ್ಥ ಯೋಧ ಮತ್ತು ಚತುರ ರಾಜಕಾರಣಿ. ಇವನನ್ನು ಪೇಶವೆಯರಲ್ಲಿ ಶ್ರೇಷ್ಠನೆಂದೂ ಕರೆಯಲಾಗುತ್ತದೆ. ಪುಣೆಯಲ್ಲಿರುವ 'ಶನಿವಾರವಾಡೆ' ಯನ್ನು ಇವನೇ ಕಟ್ಟಿಸಿದನು.

**ಮೂರನೆಯ ಪೇಶವೆ: ಬಾಳಾಜಿ ಬಾಜೀರಾಯ** (ನಾನಾಸಾಹೇಬ) (೧೭೪೦—೧೭೬೧).

ಬಾಳಾಜಿಯು ಪೇಶವೆ ಬಾಜೀರಾಯನ ನಾಲ್ವರು ಮಕ್ಕಳಲ್ಲಿ ಹಿರಿಯ ಮಗ. ರಘುನಾಥನು (ರಾಘೋಬಾ) ಬಾಳಾಜಿಯ ತಮ್ಮ. ಸಾತಾರೆಯೇ ಇವರ ವಾಸಸ್ಥಳವಾಗಿತ್ತು. ಆದುದರಿಂದ ಇವರು ಶಾಹುವಿಗೆ ತೀರ ಪರಿಚಿತ ರಿದ್ದರು. ಬಾಳಾಜಿಯನ್ನಂತೂ ಶಾಹುವು ತನ್ನ ಹೊಟ್ಟೆಯ ಮಗನಂತೆ ಪ್ರೀತಿ ಸುತ್ತಿದ್ದನು. ಇವರು ಬಾಲ್ಯದಲ್ಲಿ ತಮ್ಮ ಕಕ್ಕನಾದ ಚಿಮಾಜಿಯ ಮೇಲ್ವಿಚಾರಣೆ ಯಲ್ಲಿ ವಿದ್ಯೆ ಕಲಿತರು. ಬಾಳಾಜಿಯು ಕಕ್ಕನ ಜೊತೆಯಲ್ಲಿ ಯುದ್ಧದಲ್ಲಿ ಭಾಗ

ವಹಿಸಿ ಸಮರ-ಕಲೆಯನ್ನು ಅರಿತಿದ್ದನು. ರಾಜಕಾರ್ಯದ ಪರಿಚಯವೂ ಅವನಿಗಿತ್ತು. ಮೇಲಾಗಿ, ಅವನು ಸ್ವಭಾವದಲ್ಲಿ ಸರಳನು, ನಡೆನುಡಿಗಳಲ್ಲಿ ವಿನಯಶೀಲನು, ವ್ಯವಹಾರದಲ್ಲಿ ಚತುರನು. ತಂದೆಯ ಮರಣಸಮಯದಲ್ಲಿ ಅವನ ವಯಸ್ಸು ೧೮ ವರುಷ ಮಾತ್ರವಿತ್ತು. ಆದರೂ ಅವನ ಯೋಗ್ಯತೆ ಗೊತ್ತಿದ್ದ ಶಾಹುವು ರಘೂಜಿ ಭೋಸಲೆ ಮೊದಲಾದ ಮರಾಠಾ ಸರದಾರರ ಸಲಹೆಗೆ ಕಿವಿಗೊಡದೆ ಅವನನ್ನೇ ಪೇಶವೆಯನ್ನಾಗಿ ಮಾಡಿಕೊಂಡನು (೧೭೪೦). ಇದರಿಂದ ರಘೂಜಿಯು ಬಾಳಾಜಿ ( ನಾನಾಸಾಹೇಬ ) ಯನ್ನು ವಿರೋಧಿಸತೊಡಗಿದನು.

**ದಕ್ಷಿಣದ ದಂಡಯಾತ್ರೆ** (೧೭೪೦) :— ಶಾಹುವು ವಿರೋಧಿಯಾದ ರಘೂಜಿಯನ್ನು ತಂಜಾವರದ ರಾಜ (ವ್ಯಂಕೋಜಿಯ ಸಂತತಿಯ ಪ್ರತಾಪಸಿಂಗ) ನ ಸಹಾಯಕ್ಕಾಗಿ ದಕ್ಷಿಣಕ್ಕೆ ಅಟ್ಟಿದನು. ಅಲ್ಲಿ ರಘೂಜಿಯು ಕರ್ನಾಟಕದ ನವಾಬನಾದ **ದೋಸ್ತ** ಅಲಿಯನ್ನು ಕಾಳಗದಲ್ಲಿ ಕೊಂದನು. ಅವನ ಅಳಿಯನಾದ **ಚಂದಾಸಾಹೇಬ**ನನ್ನು ತ್ರಿಚನಾಪಳ್ಳಿಯಲ್ಲಿ ಸೆರೆಹಿಡಿದು ಸಾತಾರೆಗೆ ಕಳುಹಿದನು (೧೭೪೧). ಮುರಾರಿರಾವ ಘೋರಪಡೆ ಎಂಬ ಮರಾಠಾ ಸರದಾರನನ್ನು ಅಲ್ಲಿಯ ಸುಬೇದಾರನನ್ನಾಗಿ ಮಾಡಿ ಅವನು ಸಾತಾರೆಗೆ ಮರಳಿ ಬಂದನು. (ಆದರೆ ಮುಂದೆ, ನಿಜಾಮನು ಅದನ್ನು ಮರಳಿ ಗೆದ್ದು **ಅನವರುದ್ದೀನ**ನನ್ನು ನವಾಬನನ್ನಾಗಿ ಮಾಡಿದನು).

**ಬಂಗಾಲದ ದಾಳಿ** :— ರಘೂಜಿ ಭೋಸಲೆಯು ಕರ್ನಾಟಕದ ದಾಳಿಯಿಂದ ಯಶಸ್ವಿಯಾಗಿ ಬಂದಕೂಡಲೆ ಬಂಗಾಲದಮೇಲೆ ಏರಿಹೋದನು. ಬಂಗಾಲ, ಬಿಹಾರ, ಓರಿಸಾಗಳ ಸುಬೇದಾರನಾಗಿದ್ದ ಅಲೀವರ್ದೀಖಾನನನ್ನು ಹಣ್ಣಿಗೆ ತಂದನು. ಬಾದಶಾಹನು ನಾನಾಸಾಹೇಬನಿಗೆ ಮಾಳವದ ಸುಬೇದಾರಿಕೆಯ ಆಸೆ ಹಚ್ಚಿ, ಬಂಗಾಲವನ್ನು ರಘೂಜಿಯಿಂದ ಸಂರಕ್ಷಿಸಲು ಹೇಳಿದನು. ಅಲ್ಲದೆ, ರಘೂಜಿಯು ಈ ದಾಳಿಯನ್ನು ಶಾಹುವಿನ ಅಪ್ಪಣೆಯಿಲ್ಲದೆ ಕೈಕೊಂಡಿದ್ದನು. ಆದುದರಿಂದ ನಾನಾಸಾಹೇಬನು ಕೂಡಲೆ ರಘೂಜಿಯ ಮೇಲೆ ಏರಿಹೋಗಿ ಅವನನ್ನು ನಾಗಪುರಕ್ಕೆ ಹೊಡೆದೋಡಿಸಿದನು. ಮರಾಠರಿಗೆ ಮಾಳವದ ಸನದು ದೊರೆಯಿತು. ಮರುವರುಷ ಶಾಹುವು ನಾನಾಸಾಹೇಬ ಮತ್ತು ರಘೂಜಿ ಇವರ ಮನಸ್ತಾಪವನ್ನು ಬಗೆಹರಿಸಿದನು. ನಾನಾಸಾಹೇಬನು ಮಾಳವ, ಆಗ್ರಾ, ಅಲಹಾಬಾದ ಸುಬೆಗಳಲ್ಲಿ ಚೌಥಾಯಿ ಸರ

ದೇಶಮುಖಿಗಳನ್ನು ವಸೂಲುಮಾಡಬೇಕೆಂದೂ, ಬಂಗಾಲ, ಬಿಹಾರ, ಓರಿಸಾ, ಅಯೋಧ್ಯೆಗಳು ರಘೂಜಿಯ ಅಧಿಕಾರಕ್ಷೇತ್ರವಾಗಿರಬೇಕೆಂದೂ ಗೊತ್ತುಪಡಿಸಲಾಯಿತು (೧೭೪೩).

**ರಾಜಪುತರು ಮರಾಠರ ವೈರಿಗಳಾದರು :—** ಕ್ರಿ. ಶ. ೧೭೪೩ ರಲ್ಲಿ ಜಯಪುರದ ರಾಜನು ಮೃತಪಟ್ಟನು. ಅವನಿಗೆ ಈಶ್ವರಸಿಂಹ, ಮಾಧವಸಿಂಹ ರೆಂಬ ಇಬ್ಬರು ಮಕ್ಕಳಿದ್ದರು. ಅವರಲ್ಲಿ ಪಟ್ಟಕ್ಕಾಗಿ ಕಲಹವೆದ್ದಿತು. ಮರಾಠರ ಸಹಾಯವನ್ನು ಕೇಳಲಾಯಿತು. ಶಿಂದೆ ಹೋಳಕರರು ಮೊದಲು ಹಿರಿಯ ಮಗನ ಪಕ್ಷವಹಿಸಿ ಸಹಾಯ ಮಾಡಿದರು. ಬಳಿಕ ಹೋಳಕರನು ಹಣ ದಾಸೆಗೆ ಬಲಿಬಿದ್ದು ಮಾಧವಸಿಂಹನನ್ನು ಎತ್ತಿಹಿಡಿದನು. ಮುಂದೆ ನಾನಾ ಸಾಹೇಬನು ಜಗಳವನ್ನು ಬಗೆಹರಿಸಲು ಜಯಪುರಕ್ಕೆ ಬಂದನು. ಅವನೂ ಮಾಧವಸಿಂಹನ ಪಕ್ಷವನ್ನೇ ವಹಿಸಿ, ಈಶ್ವರಸಿಂಹನನ್ನು ಭಾರಿ ವಿಪತ್ತಿಗೆ ಗುರಿ ಮಾಡಿದನು. ಇದರಿಂದ ರಾಜಪುತರು ಮರಾಠರ ವೈರಿಗಳಾದರು.

**ಶಾಹುವಿನ ಮರಣ; ಪೇಶವೆಗೆ ಸರ್ವಾಧಿಕಾರ :—** ಕ್ರಿ. ಶ. ೧೭೪೯ ರಲ್ಲಿ ಶಾಹುವು ಮರಣಹೊಂದಿದನು. ಅವನಿಗೆ ಮಕ್ಕಳಿರಲಿಲ್ಲ. ಅವನು ಮರಣ ಸಮಯದಲ್ಲಿ ಹೇಳಿದಮೇರೆಗೆ ನಾನಾಸಾಹೇಬನೂ ಇತರ ಮಂತ್ರಿಗಳೂ ತಾರಾಬಾಯಿಯ ಮೊಮ್ಮಗನಾದ ರಾಮರಾಜಾನಿಗೆ ಸಾತಾರೆಯಲ್ಲಿ ಪಟ್ಟಗಟ್ಟಿದರು. ಆದರೆ ನಾನಾಸಾಹೇಬನು—ಶಾಹುವಿನ ಇಚ್ಛೆಯಂತೆಯೇ—ರಾಮರಾಜಾನ ಪರವಾಗಿ ಎಲ್ಲ ಅಧಿಕಾರವನ್ನು ತನ್ನಲ್ಲಿಯೇ ಇಟ್ಟುಕೊಂಡು ಪುಣೆಗೆ ತೆರಳಿದನು. ಈ ಮುಂದೆ ಪುಣೆಯು ಪೇಶವೆಯರ ರಾಜಧಾನಿಯಾಯಿತು. ಪೇಶವೆಯು ಸರ್ವಾಧಿಕಾರಿಯಾದನು. ತನಗೇ ಸರ್ವಾಧಿಕಾರವು ದೊರೆಯಬೇಕೆಂದು ತಾರಾಬಾಯಿಯು ಹೂಡಿದ ಒಳಸಂಚುಗಳು ವಿಫಲವಾದವು. ಅವಳು ಸಾತಾರೆಯಲ್ಲಿ ವಾಸಿಸಿದಳು.

**ಪೇಶವೆಯೂ ನಿಜಾಮನೂ :—** ಕ್ರಿ. ಶ. ೧೭೪೮ ರಲ್ಲಿ ನಿಜಾಮನು ಉಲ್ಮುಲ್ಕನು ಮರಣಹೊಂದಿದನು. ಅವನ ಮಕ್ಕಳಲ್ಲಿ ಪಟ್ಟಕ್ಕಾಗಿ ಕಲಹ ನಡೆಯಿತು. ಈ ಒಳಜಗಳದಲ್ಲಿ ಫ್ರೆಂಚರ ಸಹಾಯದಿಂದ ಸಲಾಬತ ಜಂಗನು ಪಟ್ಟವೇರಿದನು. ಪೇಶವೆಯು ನಿಜಾಮನ ಹಿರಿಯ ಮಗನಾದ ಗಾಜಿ ಉದ್ದೀನನ ಪಕ್ಷವಹಿಸಿದನು. ಇದರ ಸಲುವಾಗಿ ಫ್ರೆಂಚ ಮತ್ತು ಮರಾಠರಲ್ಲಿ ಯುದ್ಧ ನಡೆಯಿತು. ಗಾಜಿ ಉದ್ದೀನನು ವಿಷಪ್ರಯೋಗದಿಂದ ಸತ್ತರೂ ಮರಾಠರ

ಒತ್ತಾಯದ ಮೇರೆಗೆ ಸಲಾಬತ ಜಂಗನು ಅವರಿಗೆ ತಾಪೀ, ಗೋದಾವರಿ ನದಿಗಳ ನಡುವಿನ ಪ್ರದೇಶವನ್ನು ಕೊಟ್ಟನು (೧೭೫೨). ಮುಂದೆ ಕ್ರಿ. ಶ. ೧೭೫೭ ರಲ್ಲಿ ನಿಜಾಮನು ಮರಾಠರಿಗೆ ಕಪ್ಪ–ಕಾಣಿಕೆ ಸಲ್ಲಿಸಲಿಲ್ಲ. **ಸಿಂದಖೇಡ**ದಲ್ಲಿ ಕಾಳಗವೆಸಗಿತು. ನಿಜಾಮನು ಸೋತು ೨೫ ಲಕ್ಷ ಉತ್ಪನ್ನದ ಸೀಮೆಯನ್ನು ಮರಾಠರಿಗೆ ಕೊಡಲೊಪ್ಪಿದನು. ಆದರೆ ಮುಂದೆ ಹಾರಿಕೆಯ ಉತ್ತರವಿತ್ತನು. ಆದದರಿಂದ ಕ್ರಿ. ಶ. ೧೭೬೦ ರಲ್ಲಿ ಪೇಶವೆಯು **ಸದಾಶಿವರಾಯ** (ಚಿಮಾಜಿಯ ಮಗ) ನನ್ನು ನಿಜಾಮನ ಮೇಲೆ ಏರಿಹೋಗಲು ಕಳುಹಿದನು. **ಉದ್ಗೀರ** ಎಂಬಲ್ಲಿ ಕಾಳಗವಾಯಿತು. ಇದರಲ್ಲಿ ನಿಜಾಮನು ಸಂಪೂರ್ಣವಾಗಿ ಸೋತು ಮರಾಠರಿಗೆ ಅಹಮದನಗರ, ದೌಲತಾಬಾದ, ಅಶೀರಗಡ, ಬರ್ಹಾಣಪುರ, ವಿಜಾಪುರ ಕೋಟೆಗಳನ್ನೂ, ೬೨ ಲಕ್ಷ ಉತ್ಪನ್ನದ ಸೀಮೆಯನ್ನೂ ಕೊಟ್ಟನು.

**ಕರ್ನಾಟಕದ ದಾಳಿ :**— ಕ್ರಿ. ಶ. ೧೭೫೬ ರಲ್ಲಿ ನಾನಾಸಾಹೇಬ ಮತ್ತು ಸದಾಶಿವರಾಯ ಇವರು ದಕ್ಷಿಣದಲ್ಲಿ ದಾಳಿ ಮಾಡಿ ಸವಣೂರ ನವಾಬನನ್ನು ಸೋಲಿಸಿದರು; ಕೃಷ್ಣಾ ತುಂಗಭದ್ರೆಗಳ ನಡುವಿನ ಸೀಮೆಯನ್ನು ಕೈವಶ ಮಾಡಿಕೊಂಡರು. ಬಳಿಕ ಮೈಸೂರನ್ನು ಮುತ್ತಿ ೩೨ ಲಕ್ಷ ರೂಪಾಯಿ ಕಪ್ಪಕಾಣಿಕೆಯನ್ನು ಪಡೆದರು. ಈ ಏರಾಟದಲ್ಲಿ ಕಡಪಾ ಕರ್ನೂಲುಗಳ ನವಾಬರೂ ಮರಾಠರಿಗೆ ಸಂಪೂರ್ಣವಾಗಿ ಸೋತರು.

**ಉತ್ತರ ಭಾರತದಲ್ಲಿ ಚಟುವಟಿಕೆಗಳು :**— ಉತ್ತರ ಭಾರತದಲ್ಲಿ ಶಿಂದೆ, ಹೋಳಕರರು ಮೊಗಲಬಾದಶಾಹನಿಗೆ ಅನುಕೂಲರಾಗಿದ್ದು ಚೌಥಾಯಿ ಸರದೇಶಮುಖಿಗಳನ್ನು ಎತ್ತುವ ಉಪಕ್ರಮವನ್ನು ಇಟ್ಟುಕೊಂಡಿದ್ದರು. ಅದೇ ವೇಳೆಗೆ ಅಯೋಧ್ಯೆಯ ನವಾಬನೂ ಮೊಗಲ ಬಾದಶಾಹನ ವಜೀರನೂ ಆದ ಸಫದರ ಜಂಗನಿಗೆ ರೋಹಿಲರು ತುಂಬ ತೊಂದರೆ ಕೊಡುತ್ತಿದ್ದರು. ಅವನು ಶಿಂದೆ ಹೋಳಕರರ ನೆರವು ಕೇಳಿದನು. ಅವರು ರೋಹಿಲರನ್ನು ಸಂಪೂರ್ಣವಾಗಿ ಸೋಲಿಸಿದರು (೧೭೫೦). ಇದಕ್ಕೆ ಪ್ರತಿಫಲವಾಗಿ ಮರಾಠರಿಗೆ ಗಂಗಾ, ಯಮುನಾ ನದಿಗಳ ನಡುವಿನ ಫಲವತ್ತಾದ ಪ್ರದೇಶವು ದೊರೆಯಿತು. ಮುಂದೆ ಎರಡು ವರುಷಗಳ ಬಳಿಕ ಬಾದಶಾಹನು ಮರಾಠರಿಗೆ ಮುಲ್ತಾನ, ಪಂಜಾಬ, ರಾಜಪುತಾನಾ ಮತ್ತು ರೋಹಿಲಖಂಡಗಳಲ್ಲಿ ಚೌಥಾಯಿ ವಸೂಲು ಮಾಡುವ ಅಧಿಕಾರವನ್ನು ಕೊಟ್ಟನು; ಮತ್ತು ಜಾಟ, ರೋಹಿಲ, ಅಫಗಾನ ಮುಂತಾದ

ಶತ್ರುಗಳಿಂದ ತನ್ನನ್ನು ಸಂರಕ್ಷಿಸುವ ಹೊಣೆಯನ್ನು ಮರಾಠರ ಮೇಲೆ ಹೊರಿಸಿದನು.

**ಅಹಮುದಶಾಹ ಅಬ್ದಾಲಿಯ ದಾಳಿಗಳು:—** ಅಹಮುದಶಾಹ ಅಬ್ದಾಲಿಯು ನಾದಿರಶಾಹನ ಅನಂತರ ಅಫಗಾನಿಸ್ಥಾನದಲ್ಲಿ ಆಗಿಹೋದ ಅರಸನು. ಕ್ರಿ. ಶ. ೧೭೪೮ ರಿಂದ ಭಾರತದಮೇಲೆ ದಾಳಿಗಳನ್ನು ಆರಂಭಿಸಿದನು. ತನ್ನ ಮೂರನೆಯ ದಾಳಿಯಲ್ಲಿ ಇವನು ಲಾಹೋರ, ಮುಲ್ತಾನ ಪ್ರಾಂತಗಳನ್ನು ಗೆದ್ದನು (೧೭೫೨). ಪುಣೆಗೆ ಈ ಸುದ್ದಿ ತಿಳಿದ ಕೂಡಲೆ ಬಾದಶಾಹನ ರಾಜ್ಯಸಂರಕ್ಷಣೆಗಾಗಿ ರಾಘೋಬನನ್ನು ಉತ್ತರಕ್ಕೆ ಕಳಿಸಲಾಯಿತು. ಅವನು ಮಾರ್ಗದಲ್ಲಿ ಭರತಪುರದ ಜಾಟರ ಕೋಟೆಯನ್ನು ಮುತ್ತಿ ಅವರನ್ನು ಹಣ್ಣಿಗೆ ತಂದನು. ಬಳಿಕ ಅವನು ದಿಲ್ಲಿಗೆ ಹೋದನು. ಅಲ್ಲಿ ಬಾದಶಾಹನೇ ಮರಾಠರ ವಿರುದ್ಧವಾಗಿ ಕಾರಸ್ಥಾನ ನಡೆಸಿದುದು ಅವನಿಗೆ ಕಂಡುಬಂದಿತು. ಆದ್ದರಿಂದ ರಾಘೋಬನು ಅವನನ್ನು ಪಟ್ಟದಿಂದ ನೂಕಿ **ಅಜೀಜುದ್ದೀನನನ್ನು** ದಿಲ್ಲಿಯ ಪಟ್ಟದಮೇಲೆ ಕುಳ್ಳಿರಿಸಿದನು (೧೭೫೪). ಬಳಿಕ ರಾಘೋಬನು ರೋಹಿಲಖಂಡದಲ್ಲಿಯೂ ಮರಾಠರ ಸತ್ತೆಯನ್ನು ಸ್ಥಾಪಿಸಿ ದಕ್ಷಿಣಕ್ಕೆ ಬಂದನು. ಕ್ರಿ. ಶ. ೧೭೫೬ ರಲ್ಲಿ ಲಾಹೋರ, ಮುಲ್ತಾನಗಳು ಮೊಗಲರ ಕೈವಶವಾದವು. ಕೂಡಲೆ, ಅಬ್ದಾಲಿಯು ಮತ್ತೊಮ್ಮೆ ಬಂದು ಅವುಗಳನ್ನು ತನ್ನ ವಶಕ್ಕೆ ತೆಗೆದುಕೊಂಡನು. ಬಳಿಕ ಅವನು ದಿಲ್ಲಿ, ಮಥುರೆ, ಆಗ್ರಾಗಳನ್ನು ಸುಲಿದು, ತನ್ನ ಮಗನಾದ ತಿಮೂರಶಾಹನನ್ನು ಲಾಹೋರದಲ್ಲಿರಿಸಿ ಕಾಬೂಲಿಗೆ ಹೋದನು. ತಿಮೂರಶಾಹನು ದುರ್ಬಲ ಸುಬೇದಾರ. ಅವನ ಆಡಳಿತವು ಕ್ರಮತಪ್ಪಿತು. ರಾಜ್ಯದಲ್ಲಿ ಪುಂಡಾಟವು ಬೆಳೆಯಿತು. ಶೀಖರು ದಂಗೆಯೆದ್ದರು. ಸಹಾಯಕ್ಕಾಗಿ ಮರಾಠರಿಗೆ ಅವನಿಂದ ಕರೆ ಹೋಯಿತು. ರಾಘೋಬನು ಪುಣೆಯಿಂದ ಬಂದು ದಿಲ್ಲಿಯನ್ನು ವಶಪಡಿಸಿಕೊಂಡನು. ಲಾಹೋರವನ್ನು ಆಕ್ರಮಿಸಿ ತಿಮೂರಶಾಹನನ್ನು ಅಲ್ಲಿಂದ ಹೊಡೆದೋಡಿಸಿದನು (೧೭೫೮). ಅಟಕ ಪಟ್ಟಣದ ವರೆಗೂ ಅಫಗಾನರನ್ನು ಬೆನ್ನಟ್ಟಲಾಯಿತು. ಅಟಕದ ಮೇಲೆ ಮರಾಠರ ಪತಾಕೆಯು ಹಾರತೊಡಗಿತು. ರಾಘೋಬನು ಪೇಶವೆಯ ಸರದಾರನೊಬ್ಬನನ್ನು ಲಾಹೋರದಲ್ಲಿಟ್ಟು ಪುಣೆಗೆ ಹೋದನು.

ಕ್ರಿ. ಶ. ೧೭೫೯ ರಲ್ಲಿ ಅಬ್ದಾಲಿಯು ಲಾಹೋರಿಗೆ ಬಂದು ಅಲ್ಲಿದ್ದ ಪೇಶವೆಯ ಸರದಾರನನ್ನು ಓಡಿಸಿದನು. ದತ್ತಾಜಿ ಶಿಂದೆಯು ಅವನನ್ನು ದಿಲ್ಲಿಯ

ಬಳಿ ಕಾಳಗದಲ್ಲಿ ಎದುರಿಸಿ ಸತ್ತನು. ದತ್ತಾಜಿಯಂಥ ಶೂರನು ಮಡಿದ ಸುದ್ದಿ ಯನ್ನು ಕೇಳಿ ನಾನಾಸಾಹೇಬನು ೨೦,೦೦೦ ಸೈನ್ಯದೊಡನೆ ಸದಾಶಿವರಾಯ ನನ್ನು ಅಬ್ದಾಲಿಯಮೇಲೆ ಕಳುಹಿದನು (೧೭೬೦). ಅವನೊಂದಿಗೆ ನಾನಾ ಸಾಹೇಬನ ೧೭ ವರುಷದ ಮಗ ವಿಶ್ವಾಸರಾಯ, ಬಳವಂತರಾವ ಮೇಹಂದಳೆ, ಸಮಶೇರಬಹಾದ್ದೂರ, ವಿಠ್ಠಲ ಶಿವದೇವ ವಿಂಚೂರಕರ, ತ್ರಿಂಬಕ ಪುರಂದರೆ, ಇಬ್ರಾಹೀಮಖಾನ ಗಾರದಿ ಇವರೇ ಮೊದಲಾದ ಸರದಾರರಿದ್ದರು. ಮಾರ್ಗ ದಲ್ಲಿ ಅವರನ್ನು ಮಲ್ಹಾರರಾವ ಹೋಳಕರ, ಜನಕೋಜಿ ಶಿಂದೆ, ದಾಮಾಜಿ ಗಾಯಕವಾಡ, ಯಶವಂತರಾವ ಪವಾರ, ಗೋವಿಂದಪಂತ ಬುಂದೇಲಾ, ಸುರಜಮಲ್ಲ ಜಾಟ ಇವರು ಬಲವಾದ ಸೈನ್ಯಗಳೊಂದಿಗೆ ಕೂಡಿದರು. ಇತ್ತ ರೋಹಿಲರ ನಜೀಬ ಖಾನ, ವಜೀರ ಸುಜಾಉದ್ದೌಲಾ ಇವರು ಅಬ್ದಾಲಿ ಯನ್ನು ಕೂಡಿಕೊಂಡರು. ಮರಾಠರ ಸೈನ್ಯವು ದಿಲ್ಲಿಯ ಬಳಿ ಹೋಗುತ್ತಲೇ ಅಬ್ದಾಲಿಯು ಉತ್ತರಕ್ಕೆ 'ಕುಂಜಪುರ'ಕ್ಕೆ ಹೋದನು. ದಿಲ್ಲಿಯು ಮರಾಠರ ವಶವಾಯಿತು. ಬಳಿಕ ಸದಾಶಿವರಾಯನು ಸೈನ್ಯದೊಂದಿಗೆ ಪಾನಿಪತಕ್ಕೆ ಹೋಗಿ ಅಲ್ಲಿಯೇ ಬೀಡುಬಿಟ್ಟನು. ಮರಾಠರ ಬಳಿಯಲ್ಲಿದ್ದ ಅನ್ನ ನೀರು, ಹಣಕಾಸು ತೀರುತ್ತಬಂದವು. ಅವು ಅವರಿಗೆ ಹೊರಗಿನಿಂದ ಬರದಂತೆ ಅಬ್ದಾಲಿಯು ವ್ಯವಸ್ಥೆ ಇಟ್ಟಿದ್ದನು. ಕೊನೆಗೆ ಮರಾಠಾ ಸರದಾರರು ಸದಾ ಶಿವರಾಯನಲ್ಲಿಗೆ ಹೋಗಿ ತಮಗೆ ಉಪವಾಸದಿಂದ ಸಾಯುವದಕ್ಕಿಂತ ರಣ ರಂಗದಲ್ಲಿ ಮಡಿಯಲಿಕ್ಕೆ ಅಪ್ಪಣೆ ಕೊಡಬೇಕೆಂದು ಕೇಳಿಕೊಂಡರು.

ಕ್ರಿ. ಶ. ೧೭೬೧ ಜಾನೇವರಿ ೧೪ ನೆಯ ದಿನಾಂಕದಲ್ಲಿ ನಸುಕಿನಲ್ಲಿಯೇ ಪಾಣಿಪತ್ತದ ಬಯಲಿನಲ್ಲಿ ಯುದ್ಧವು ಆರಂಭವಾಯಿತು.

**ಮರಾಠಾ ಸೈನ್ಯರಚನೆ:—** ಎಲ್ಲಕ್ಕೂ ಮುಂದೆ ೨೦೦ ದೊಡ್ಡ ತೋಪು ಖಾನೆ ಸಹಿತವಾಗಿ ಇಬ್ರಾಹಿಮಖಾನ ಗಾರದಿ; ಅವನ ಹಿಂದೆ, ಆನೆಗಳ ಮೇಲೆ ಮಧ್ಯದಲ್ಲಿ ವಿಶ್ವಾಸರಾಯ ಮತ್ತು ಸದಾಶಿವರಾಯ; ಅವರ ಬಲಪಕ್ಕಕ್ಕೆ ಶಿಂದೆ, ಹೋಳಕರರು, ಎಡಪಕ್ಕಕ್ಕೆ ಗಾಯಕವಾಡ ಮುಂತಾದವರು.

**ಕಾಳಗ:—** ಮಧ್ಯಾಹ್ನ ಎರಡು ಗಂಟೆಯವರೆಗೆ ಮರಾಠರ ತೋಪುಗಳು ಗರ್ಜಿಸಿದವು. ಸರದಾರರೂ ಸೈನಿಕರೂ ಉತ್ಸಾಹದಿಂದ ಕಾದಿದರು. ಆಗ ವಿಶ್ವಾಸ ರಾಯನು ಆನೆಯ ಮೇಲೆ ಕುಳಿತಲ್ಲಿಯೇ ಗುಂಡು ತಗಲಿ ಸತ್ತನು. ಕೂಡಲೆ ಸದಾಶಿವರಾಯನು ಗಾಬರಿಗೊಂಡು ಆನೆಯಿಂದ ಇಳಿದನು; ಕುದುರೆಯನ್ನೇರಿ

ಯುದ್ಧದಲ್ಲಿ ಒಳನುಗ್ಗಿದನು. ಮಲ್ಹಾರರಾಯನು ಸೈನ್ಯದೊಂದಿಗೆ ದಿಲ್ಲಿಗೆ ಓಡಿದನು. ಅಬ್ದಾಲಿಯು ಕಾದಿಟ್ಟ ಸೈನ್ಯದೊಂದಿಗೆ ಮರಾಠರ ಮೇಲೆ ಏರಿ ಬಿದ್ದನು. ಆ ನಿಕರದ ಕಾಳಗದಲ್ಲಿ ಸದಾಶಿವರಾಯ, ಜನಕೋಜಿ ಶಿಂದೆ,




ಭಾರತ — ೧೭೬೧ ರಲ್ಲಿ

ಇಬ್ರಾಹೀಮಖಾನ, ಸಮಶೇರ ಬಹಾದ್ದೂರ ಮುಂತಾದ ಶ್ರೇಷ್ಠ ಸರದಾರರು ಮಡಿದರು. ಅಫಗಾನರು ಮರಾಠಾ ಸೈನಿಕರನ್ನು ವಿಪರೀತವಾಗಿ ಕೊಲೆ ಮಾಡಿದರು. ಮರಾಠರು ಸಂಪೂರ್ಣವಾಗಿ ಸೋತರು (೧೭೬೧).

**ನಾನಾಸಾಹೇಬನ ಮರಣ (೧೭೬೧):—** ತಾನೂ ಯುದ್ಧಕ್ಕಾಗಿ ಹೊರಟಿದ್ದ ಪೇಶವೆಗೆ ಕಾಳಗದ ಪರಿಣಾಮದ ಸುದ್ದಿಯು ಮಾರ್ಗದಲ್ಲಿಯೇ ತಿಳಿಯಿತು. ಅವನು ಅತ್ಯಂತ ದುಃಖದಿಂದ ಪುಣೆಗೆ ಮರಳಿದನು. ಅದೇ ಕೊರಗಿನಿಂದ ಕೃಶವಾಗುತ್ತ ಮುಂದೆ ಆರು ತಿಂಗಳಲ್ಲಿಯೇ ಅವನು ಪರ್ವತಿಯಲ್ಲಿ ಮರಣ ಹೊಂದಿದನು.

### ಅಭ್ಯಸನಗಳು.

(೧) 'ಸರಂಜಾಮಿ ಪದ್ಧತಿ' ಎಂದರೇನು? ವಿವರಿಸಿರಿ.

(೨) ರಾಜಪುತರು ನಾನಾಸಾಹೇಬನ ಆಳಿಕೆಯಲ್ಲಿ ಮರಾಠರ ವೈರಿಗಳಾದರು. ಏಕೆ?

(೩) ಬಾಜೀರಾಯನು ಶ್ರೇಷ್ಠ ಪೇಶವೆ ಎನ್ನುವರು. ಏಕೆ?

(೪) ಬಾಳಾಜಿ ವಿಶ್ವನಾಥನು ಶಾಹುವಿನ ಪೇಶವೆಯಾಗುವವರೆಗೆ ಅವನ ಜೀವನಕತೆಯನ್ನು ಹೇಳಿರಿ (ಆತ್ಮವೃತ್ತಾಂತದ ರೂಪದಲ್ಲಿ).

## ೧೭ನೆಯ ಪ್ರಕರಣ

# ೧ ನೆಯ ಮಾಧವರಾಯ. (೧೭೬೧-೧೭೭೨)

## (ನಾಲ್ಕನೆಯ ಪೇಶವೆ)

ನಾನಾಸಾಹೇಬನ ಮರಣದ ಅನಂತರ ಅವನ ಎರಡನೆಯ ಮಗನಾದ ಮಾಧವರಾಯನಿಗೆ ಪೇಶವೆ ಅಧಿಕಾರವು ದೊರೆಯಿತು. ಆಗ ಅವನು ಕೇವಲ ೧೭ ವರುಷ ವಯಸ್ಸಿನವನು. ಆದರೇನು? ಪಾಣಿಪತದ ಕಾಳಗದಲ್ಲಿಯ ಅಪಜಯದಿಂದ ಮರಾಠರ ಕೀರ್ತಿಯು ಹಾನಿಗೊಂಡಿತ್ತಷ್ಟೆ. ಅದನ್ನು ತುಂಬಿಕೊಳ್ಳಲು ಆ ಚಿಕ್ಕ ಪೇಶವೆಯು ಆರಂಭದಲ್ಲಿಯೇ ನಿರ್ಧಾರ ಮಾಡಿದನು! ಅವನು ತೀರ ಚಿಕ್ಕ ವಯಸ್ಸಿನವನೆಂದು ಮೊದಲಿಗೆ ಅವನ ಕಕ್ಕನಾದ ರಘುನಾಥರಾಯನೇ ಕಾರಭಾರವನ್ನು ನಡೆಸಿದನು. ಆದರೆ ರಾಘೋಬನು ಸ್ವಾರ್ಥಿ, ಅಧಿಕಾರಲಾಲಸಿ. ಮೇಲಾಗಿ ಅವನಲ್ಲಿ ತಾನೇ ಪೇಶವೆಯಾಗುವ ಹಂಬಲವಿತ್ತು. ಇದಕ್ಕಾಗಿ ಅವನ ದುಷ್ಟ ಹೆಂಡತಿಯಾದ ಆನಂದೀಬಾಯಿಯು ಅವನಿಗೆ ಬೆಂಬಲವಿತ್ತಳು. ರಾಘೋಬನು ಮೊದಲಿಗೆ ಅಧಿಕಾರದಲ್ಲಿದ್ದ ಸರದಾರರನ್ನು ಬದಿಗೊತ್ತಿ ತನ್ನ ಪಕ್ಷದವರಿಗೆ ದೊಡ್ಡ ಹುದ್ದೆಗಳನ್ನು ಕೊಟ್ಟನು.

ಇದರಿಂದ ಹಳೆಯ ಸರದಾರರು ಸಿಟ್ಟಿಗೆದ್ದರು. ಅವರಲ್ಲಿ ಹಲವರು ನಿಜಾಮ ನನ್ನು ಹೋಗಿ ಕೂಡಿಕೊಂಡರು. ಸಾತಾರೆಯ ಪಟ್ಟಕ್ಕೆ ಅಸಮಾಡಿ ಜನಕೋಜಿ ಶಿಂದೆಯಂತಹ ವೀರ ಸರದಾರನೂ ನಿಜಾ ಮನ ಪಕ್ಷವನ್ನು ಸೇರಿದನು. ಕಕ್ಕನು ಅನುಸರಿ ಸಿದ ಧೋರಣೆಯು ಮಾಧವರಾಯನ ಮನಸ್ಸಿಗೆ ಸರಿದೋರಲಿಲ್ಲ. ಅಷ್ಟರಲ್ಲಿ ಮರಾಠರ ನೆರವಿ ನಿಂದ ಮೈಯುಬ್ಬಿದ ನಿಜಾಮನು ಮಾಧವ ರಾಯನ ಮೇಲೆ ದಂಡೆತ್ತಿ ಬಂದನು.



೧ ನೆಯ ಮಾಧವರಾಯ.

**ರಾಕ್ಷಸಭುವನದ ಕಾಳಗ** (೧೭೬೩) :— ನಿಜಾಮನ ಸೈನ್ಯವು ಔರಂಗಾಬಾದದ ಬಳಿ ಬೀಡುಬಿಟ್ಟಿರುವಾಗಲೇ ಮಾಧವರಾಯನೂ ರಾಘೋಬನೂ ಅದರ ಮೇಲೆ ಏರಿಹೋದರು. ರಾಕ್ಷಸಭುವನದಲ್ಲಿ (ಗೋದಾವರಿ ನದಿಯ ದಂಡೆಯ ಮೇಲೆ) ತುಮುಲ ಕಾಳಗವೆಸಗಿತು. ಪೇಶವೆಗೆ ಪ್ರಚಂಡ ವಿಜಯ ವಾಯಿತು. ನಿಜಾಮನು ಸೋತು ಒಪ್ಪಂದ ಮಾಡಿಕೊಂಡನು. ಬಳಿಕ ಮಾಧವರಾಯನು ತನ್ನ ಸರದಾರರಿಗೆ ಆಗಿನ ಪರಿಸ್ಥಿತಿಯಲ್ಲಿ ಒಕ್ಕಟ್ಟಿನ ಅವಶ್ಯ ಕತೆಯನ್ನು ತಿಳಿಸಿಹೇಳಿ ಅವರನ್ನು ಅಂಕಿತದಲ್ಲಿ ತಂದುಕೊಂಡನು. ಆಗಿನಿಂದ ತಾನೇ ರಾಜ್ಯಕಾರಭಾರ ಸಾಗಿಸಹತ್ತಿದನು.

**ದಕ್ಷಿಣದ ದಂಡಯಾತ್ರೆ** :— ಈ ಸುಮಾರಿಗೆ ಮೈಸೂರಿನಲ್ಲಿ ಮೊದ ಲಿಗೆ ದಂಡಿನ ಸಿಪಾಯಿಯಾಗಿ ದುಡಿದು, ಬರಬರುತ್ತ ಆ ರಾಜ್ಯದ ಸಿಂಹಾಸನ ವನ್ನೇ ಆಕ್ರಮಿಸಿದ **ಹೈದರ ಅಲಿಯು** ಪ್ರಬಲನಾಗಿ ನಿಂತಿದ್ದನು. ಕರ್ನಾಟಕ ದಲ್ಲಿ ಮರಾಠರ ಪ್ರದೇಶಗಳನ್ನು ಆಕ್ರಮಿಸಹತ್ತಿದನು. ಮಾಧವರಾಯನೇ ಸ್ವತಃ ಮೂರು ಸಲ ಅವನ ಮೇಲೆ ಏರಿ ಹೋದನು. ಮೊದಲನೆಯ ಸಲದ ದಂಡಯಾತ್ರೆಯಲ್ಲಿ ಹೈದರನು ಬಿದನೂರಿನ ಬಳಿಯಲ್ಲಿ ಸೋತು ಒಪ್ಪಂದ ಮಾಡಿಕೊಂಡನು (೧೭೬೪). ಮರಾಠರಿಗೆ ಕೃಷ್ಣಾ, ತುಂಗಭದ್ರಾನದಿಗಳ ನಡುವಿನ ಪ್ರದೇಶವೂ ೩೦ ಲಕ್ಷ ರೂಪಾಯಿಗಳ ಕಪ್ಪಕಾಣಿಕೆಯೂ ದೊರೆತವು. ಮತ್ತೆ ಹೈದರಅಲಿಯು ಪುಂಡಾಟಿಕೆಯನ್ನು ನಡೆಸಿದನು. ಮತ್ತೆ ಮಾಧವ ರಾಯನು ಅವನ ಮೇಲೆ ದಂಡೆತ್ತಿಹೋದನು. ಮರಾಠರು ಸಿರಾ, ಹೊಸ

ಕೋಟೆ, ಮದ್ಗಗಿರಿ ಕೋಟೆಗಳನ್ನು ವಶಪಡಿಸಿಕೊಂಡರು. ಇದೇ ಸಮಯಕ್ಕೆ ನಿಜಾಮನು ಮತ್ತು ಇಂಗ್ಲಿಷರು ಹೈದರನ ಉತ್ತರ, ದಕ್ಷಿಣ ಗಡಿಗಳನ್ನು ಪ್ರವೇಶಿಸುವದರಲ್ಲಿ ಇದ್ದರು. ಆದುದರಿಂದ ಅವನು ಮಾಧವರಾಯನೊಡನೆ ಒಪ್ಪಂದ ಮಾಡಿಕೊಂಡನು (೧೭೬೬). ಮರಾಠರಿಗೆ ತಾವು ಗೆದ್ದ ಪ್ರದೇಶಗಳು ದೊರೆತವಲ್ಲದೆ, ಯುದ್ಧದ ಖರ್ಚಿಗಾಗಿ ೩೦ ಲಕ್ಷ ರೂಪಾಯಿಗಳು ದೊರೆತವು. ಕೊನೆಯ ಸಲ (೧೭೬೯-೧೭೭೨) ಮತ್ತೊಮ್ಮೆ ಯುದ್ಧವಾಯಿತು. ಆಗ ಹೈದರನು ಮರಾಠರಿಗೆ ಮತ್ತೆ ಹೊಸ ಪ್ರದೇಶಗಳನ್ನು ಕೊಟ್ಟನಲ್ಲದೆ, ೧೪ ಲಕ್ಷ ರೂಪಾಯಿಗಳ ವಾರ್ಷಿಕ ಕಪ್ಪವನ್ನು ಕೊಡಲೂ ಒಪ್ಪಿಕೊಂಡನು. ಈ ಯುದ್ಧ ನಡೆದಾಗಲೇ ಮಾಧವರಾಯನು ಜಡ್ಡಿನಿಂದ ಪುಣೆಗೆ ಮರಳಿಬಂದನು (೧೭೭೦). ತ್ರಿಂಬಕಪಂತನು ಹೈದರನನ್ನು ಮರುವರುಷ ಸೋಲಿಸಿದನು.

**ರಘುನಾಥರಾಯನ ಬಂಧನ:—** ಮಾಧವರಾಯನ ಆಳಿಕೆಯ ಆರಂಭದಲ್ಲಿಯೇ ಕಕ್ಕ ಮಕ್ಕಳಲ್ಲಿ ಕಲಹವು ಆರಂಭವಾಯಿತಷ್ಟೆ. ದಿನಗಳು ಕಳೆದಂತೆ ಅದು ಬಲಿಯುತ್ತ ಸಾಗಿತು. ರಾಘೋಬನು ಅಮೃತರಾವ ಎಂಬ ಬಾಲಕನನ್ನು ದತ್ತಕ ಮಾಡಿಕೊಂಡು ಮರಾಠಾ ರಾಜ್ಯದ ಅರ್ಧ ಭಾಗವನ್ನು ಕೇಳಹತ್ತಿದನು! ಕೊನೆಗೆ ಅದಕ್ಕಾಗಿ ಮಾಧರಾಯನ ಮೇಲೆ ಯುದ್ಧ ಹೂಡಲೂ ಹಿಂಜರಿಯಲಿಲ್ಲ! ಮಾಧವರಾಯನು ಅಪಾರ ಸೈನ್ಯದೊಡನೆ ಅವನ ಮೇಲೆ ಏರಿ ಹೋಗಿ ಸೋಲಿಸಿ ಸೆರೆಹಿಡಿದನು. ಶನಿವಾರವಾಡೆಯಲ್ಲಿ ಅವನನ್ನು ಬಂಧನದಲ್ಲಿರಿಸಲಾಯಿತು (೧೭೬೯).

**ಉತ್ತರ ಭಾರತದಲ್ಲಿ ಮರಾಠಾ ಸತ್ತೆಯ ಪುನರುಜ್ಜೀವನ:—** ಇದರ ಸಲುವಾಗಿ ಪೇಶವೆಯು ವಿಸಾಜಿ ಕೃಷ್ಣ, ಮಹಾದಾಜಿ ಶಿಂದೆ, ತುಕೋಜಿ ಹೋಳಕರ, ಹರಿಪಂತ ಫಡಕೆ ಮುಂತಾದ ಸರದಾರರನ್ನು ಉತ್ತರಭಾರತದ ಮೇಲೆ ಏರಿ ಹೋಗಲು ಕಳುಹಿದನು. ಅವರ ಸಂಯುಕ್ತ ಸೈನ್ಯಗಳು ರಾಜಪುತಸ್ತಾನದಲ್ಲಿ ೧೦ ಲಕ್ಷ ರೂಪಾಯಿ ಚೌಥಾಯಿ ವಸೂಲು ಮಾಡಿದವು. ಜಾಟರಿಂದ ೬೫ ಲಕ್ಷ ರೂಪಾಯಿ ವಸೂಲು ಮಾಡಲಾಯಿತು. ಶಿಂದೆ, ಹೋಳಕರರು ರೋಹಿಲರನ್ನು ಹಣ್ಣಿಗೆ ತಂದರು. ಅಲಹಾಬಾದದಲ್ಲಿ ಇಂಗ್ಲಿಷರ ಪೋಷಣೆಯಲ್ಲಿದ್ದ ಶಾಹ ಆಲಮನನ್ನು ಮರಳಿ ದಿಲ್ಲಿಯ ಸಿಂಹಾಸನದ ಮೇಲೆ ಕುಳ್ಳಿರಿಸಿದರು (೧೭೭೧). ಇದರಿಂದ ಇಂಗ್ಲಿಷರು ಅವನಿಗೆ ಕೊಟ್ಟದ್ದ ಅಲಹಾ

ಬಾದ, ಕೋರಾ ಜಿಲ್ಹೆಗಳನ್ನು ಮರಳಿ ತೆಗೆದುಕೊಂಡರು. ಬಾದಶಾಹನಿಗೆ ದಿಲ್ಲಿಯೊಂದೇ ಉಳಿಯಿತು. ದಿಲ್ಲಿಯ ರಾಜ್ಯಸೂತ್ರವೂ ಮರಾಠರ ಕೈವಶವಾದಂತಾಯಿತು.

**ಮಾಧವರಾಯನ ಮರಣ ಮತ್ತು ಯೋಗ್ಯತೆ:—** ಮಾಧವರಾಯನು ತನ್ನ ೨೮ ನೆಯ ವಯಸ್ಸಿನಲ್ಲಿ ಕ್ಷಯರೋಗದಿಂದ ಕಾಲವಾದನು (೧೭೭೨). ಚಿಕ್ಕ ವಯಸ್ಸಿನಲ್ಲಿಯೇ ಪೇಶವೆಯಾಗಿ ರಾಜ್ಯದಲ್ಲಿಯ ಒಳಗಿನ ಮತ್ತು ಹೊರಗಿನ ವೈರಿಗಳನ್ನು ಸದೆಬಡೆದು ಮಹತ್ವದ ವಿಜಯ ಪಡೆದನು. ದೇಶಸೇವೆಗಾಗಿ ತೆರಪಿಲ್ಲದೆ ದುಡಿದು ದೇಹವನ್ನು ಸವೆಸಿದನು. ಅವನು ಜಾಣ ಮುತ್ಸದ್ದಿ, ಸಮರ್ಥ ಸೇನಾಪತಿ. ತನ್ನ ಅಲ್ಪಾವಧಿಯ ಆಯುಷ್ಯದಲ್ಲಿ ಅವನು ಮಾಡಿದ ಮಹತ್ಕಾರ್ಯಗಳನ್ನು ನೆನೆದರೆ, ಪೇಶವೆಯವರಲ್ಲಿ ಇವನೇ ಅತ್ಯಂತ ಶ್ರೇಷ್ಠನೆನ್ನಬಹುದು. ಇವನ ಕೈಕೆಳಗಿನ ನಾನಾಫಡನೀಸ, ಹರಿಪಂತ ಫಡಕೆ, ರಾಮಶಾಸ್ತ್ರಿ ಪ್ರಭುಣೆ ಇವರು ಅತ್ಯಂತ ಯೋಗ್ಯರೀತಿಯಿಂದ ಸ್ವಾಮಿಸೇವೆ ಸಲ್ಲಿಸಿ ಪ್ರಸಿದ್ಧಿಗೆ ಬಂದರು. ಮಲ್ಹಾರರಾವ ಹೋಳಕರನ ಸೊಸೆಯೂ ಖಂಡೇರಾಯನ ವಿಧವೆಯೂ ಆದ ಅಹಲ್ಯಾಬಾಯಿಯು ರಾಜ್ಯ ಕಾರಭಾರ ಕುಶಲತೆ, ದಾನ ಧರ್ಮ ಶೀಲತೆಗಳಿಗಾಗಿ ಪ್ರಸಿದ್ಧಿಗೆ ಬಂದಳು (೧೭೬೫-೧೭೯೬). ಮಾವನು ಮರಣಹೊಂದಿದ ಬಳಿಕ (೧೭೬೬) ತಾನೇ ಇಂದೂರಿನ ಆಳಿಕೆಯನ್ನು ವಹಿಸಿ ತನ್ನ ಕಾರ್ಯಕ್ಷಮತೆಯನ್ನು ವ್ಯಕ್ತಪಡಿಸಿದಳು.

## ಅಭ್ಯಸನಗಳು.

೧ ಮಾಧವರಾಯನು ತನ್ನ ಕಕ್ಕನಿಂದ ರಾಜ್ಯಸೂತ್ರಗಳನ್ನು ಕಸಿದುಕೊಂಡನು. ಏಕೆ ?

೨ ಮಾಧವರಾಯನು ಹೈದರನಮೇಲೆ ಕೈಕೊಂಡ ದಂಡಯಾತ್ರೆಯಲ್ಲಿ ಮರಾಠರಿಗೆ ಲಾಭಗಳಾದವು. ಅವು ಯಾವವು ?

೩ ಉತ್ತರ ಭಾರತದಲ್ಲಿ ಮರಾಠರ ಸತ್ತೆಯು ಮತ್ತೆ ನೆಲಸಿತು. ಇದಕ್ಕಾಗಿ ಮರಾಠರು ಕೈಕೊಂಡ ಕ್ರಮಗಳು ಯಾವವು ?

೪ ಮಾಧವರಾಯನ ಆಳಿಕೆಯಲ್ಲಿ ಸ್ವಾಮಿನಿಷ್ಠೆಯಿಂದ ದುಡಿದು ಪ್ರಸಿದ್ಧಿಗೆ ಬಂದ ಮರಾಠಾ ಸರದಾರರ ಹೆಸರು ಹೇಳಿರಿ.

### ೧೮ನೆಯ ಪ್ರಕರಣ

# ಮರಾಠರ ಅಳಿಗಾಲ ಮತ್ತು ಅವರ ಆಳಿಕೆಯಲ್ಲಿಯ ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಸ್ಥಿತಿಗಳು.

## ಮರಾಠರ ಅಳಿಗಾಲ (೧೭೭೨–೧೮೧೮)

೧ ನೆಯ ಮಾಧವರಾಯನ ಬಳಿಕ, ಮುಂದಿನ ೪೬ ವರುಷಗಳಲ್ಲಿ ನಾಲ್ಕು ಜನ ಪೇಶವೆಯಾಗಿಹೋದರು. ಅವರು ಅನುಕ್ರಮವಾಗಿ **ನಾರಾಯಣರಾಯ, ರಘುನಾಥರಾಯ (ರಾಘೋಬಾ), ಸವಾಯಿ ಮಾಧವರಾಯ** ಮತ್ತು **ಎರಡನೆಯ ಬಾಜೀರಾಯ.** ಅವರಲ್ಲಿ ಕೊನೆಯವನಾದ ಎರಡನೆಯ ಬಾಜೀರಾಯನ ಆಳಿಕೆಯಲ್ಲಿ ಇಂಗ್ಲಿಷರು ಅವನಿಂದ ಪೇಶವೆ ಅಧಿಕಾರವನ್ನು ಕಸಿದುಕೊಂಡು ಮರಾಠಾರಾಜ್ಯವನ್ನು ತಮ್ಮ ಕೈವಶ ಮಾಡಿಕೊಂಡರು. ಅದಕ್ಕೆ ಮುಂಬೈಪ್ರಾಂತವೆಂದು ಹೆಸರು ಕೊಟ್ಟರು. ಈ ರೀತಿಯಾಗಿ ಪೇಶವಾಯಿಯು ಅಂತ್ಯವಾಯಿತು. ಮೇಲೆ ಹೇಳಿದ ನಾಲ್ವರು ಪೇಶವೆಯರ ಅವಧಿಯ ಸಂಕ್ಷಿಪ್ತ ಚರಿತ್ರೆಯು ಕೆಳಗಿನಂತಿದೆ:

**ಪೇಶವೆ ನಾರಾಯಣರಾಯ (೧೭೭೨–೧೭೭೩) :—** ಇವನು ಒಂದನೆಯ ಮಾಧವರಾಯನ ತಮ್ಮ. ಮಾಧವರಾಯನಿಗೆ ಮಕ್ಕಳಿರಲಿಲ್ಲ. ಆದುದರಿಂದ ಅವನ ತರುವಾಯ ನಾರಾಯಣರಾಯನಿಗೇ ಪೇಶವೆ ಅಧಿಕಾರವು ದೊರೆಯಿತು. ಆಗ ಇವನ ವಯಸ್ಸು ೧೭ ವರುಷ. ಆದರೆ ಇವನು ಅವಿಚಾರಿ, ಅಜಾಗರೂಕ, ಆಡಳಿತದ ಜ್ಞಾನವಿಲ್ಲದವನು. ಮೇಲಾಗಿ, ಆಡಳಿತದಲ್ಲಿ ಯೋಗ್ಯ ಸಲಹೆಗಾರರ ಸಲಹೆಗೆ ಇವನು ಕಿವಿಗೊಡಲಿಲ್ಲ. ಆದುದರಿಂದ ನಾನಾ ಫಡನೀಸ, ಸಖಾರಾಮ ಬಾಪೂ ಮೊದಲಾದ ಪ್ರಮುಖ ಮುತ್ಸದ್ದಿಗಳು ಆಡಳಿತದಲ್ಲಿ ಆಸ್ಥೆ ವಹಿಸಲಿಲ್ಲ.



ನಾನಾ ಫಡನೀಸ

ನಾರಾಯಣರಾಯನು ತನ್ನ ಕಕ್ಕನಾದ ರಾಘೋಬನನ್ನು ಮತ್ತೆ ಶನಿವಾರ ವಾಡೆಯಲ್ಲಿ ಸೆರೆಯಿಟ್ಟನು. ಅಲ್ಲಿಂದಲೇ ರಾಘೋಬನೂ ಅವನ ಹೆಂಡತಿಯಾದ ಆನಂದೀಬಾಯಿಯೂ ಪೇಶವೆಯ ವಿರುದ್ಧವಾಗಿ ಒಳಸಂಚು ನಡೆಸಿದರು. ಆನಂದೀಬಾಯಿಯ ಕುತಂತ್ರದಿಂದ ಗಾರದಿ ಜನರ ಮುಖಂಡರು ಒಂದು ದಿನ ನಡುಹಗಲಿನಲ್ಲಿ ಶನಿವಾರ ವಾಡೆಯಲ್ಲಿಯೇ ನಾರಾಯಣರಾಯನನ್ನು ಕೊಲೆ ಮಾಡಿದರು (೧೭೭೩). ಆ ಸಮಯದಲ್ಲಿ ನಾರಾಯಣರಾಯನ ಹೆಂಡತಿಯಾದ ಗಂಗಾಬಾಯಿಯು ಬಸಿರಿದ್ದಳು.



ನಾರಾಯಣರಾಯನ ಕೊಲೆ

**ಪೇಶವೆ ರಘುನಾಥರಾಯ** (೧೭೭೩) :— ನಾರಾಯಣರಾಯನ ಕೊಲೆಯ ತರುವಾಯ ರಘುನಾಥರಾಯನಿಗೇ ಪೇಶವೆ ಅಧಿಕಾರವು ಪ್ರಾಪ್ತವಾಯಿತು. ಆದರೆ ಇತ್ತ ನ್ಯಾಯಾಲಯದಲ್ಲಿ ನಾರಾಯಣರಾಯನ ಕೊಲೆಯ ವಿಚಾರಣೆಯೂ ನಡೆಯಿತು. ನ್ಯಾಯಾಧೀಶನಾದ ಪ್ರಭುಣೆ ರಾಮಶಾಸ್ತ್ರಿಯು ರಘುನಾಥರಾಯನೇ ಕೊಲೆಪಾತಕಿಯೆಂದು ತೀರ್ಮಾನ ಕೊಟ್ಟನು. ನಾನಾ ಫಡನೀಸ, ಸಖಾರಾಮ ಬಾಪ್ಪೂ, ಹರಿಬಲ್ಲಾಳ ಫಡಕೆ ಮುಂತಾದ ೧೨ ಜನ ಪ್ರಮುಖ ಮುತ್ಸದ್ಧಿಗಳು ಒಟ್ಟುಗೂಡಿ ರಘುನಾಥರಾಯನನ್ನು ಪೇಶವೆ ಅಧಿಕಾರದಲ್ಲಿ ಉಳಿಸಕೂಡದೆಂದು ನಿರ್ಧಾರ ಮಾಡಿದರು. ಈ ೧೨ ಜನರಿಗೆ ಮರಾಠರ ಇತಿಹಾಸದಲ್ಲಿ ‘ಬಾರಾಭಾಯಿ’ ಎಂದು ಕರೆಯಲಾಗುತ್ತದೆ. ಇದೇ

ಸಮಯದಲ್ಲಿ ಪುಣೆಯಲ್ಲಿಯ ಪರಿಸ್ಥಿತಿಯನ್ನು ತಿಳಿದುಕೊಂಡು ನಿಜಾಮನೂ ಹೈದರಅಲಿಯೂ ಮರಾಠಾ ರಾಜ್ಯದಲ್ಲಿ ಏರಾಟಿಕೆ ನಡೆಸಿದರು. ರಘುನಾಥ ರಾಯನು ಕೂಡಲೆ ಅವರ ಮೇಲೆ ಏರಿಹೋಗಿ ಅವರನ್ನು ಪರಾಭವ ಗೊಳಿಸಿದನು. ಪೇಶವೆಯು ಈ ದಂಡಯಾತ್ರೆಯಲ್ಲಿ ತೊಡಗಿದಾಗ, ಇತ್ತ ಪುಣೆಯಲ್ಲಿ ನಾನಾಫಡ್ನೀಸನೇ ಮೊದಲಾದ ೧೨ ಜನ ಮಂತ್ರಿಗಳು ಮೊದಲಿಗೆ ಗಂಗಾಬಾಯಿಯ ಹೆಸರಿನಲ್ಲಿ ರಾಜ್ಯಭಾರವನ್ನು ನಡೆಸತೊಡಗಿದರು. ಮುಂದೆ ಅವಳಲ್ಲಿ ಜನಿಸಿದ ಗಂಡುಮಗುವಿಗೆ **ಸವಾಯಿ ಮಾಧವರಾಯ** ನೆಂದು ಹೆಸರಿಟ್ಟು, ಸಾತಾರೆಯ ಅರಸನಿಂದ ಆ ಕೂಸಿಗೇ ಪೇಶವೆ ಅಧಿಕಾರವನ್ನು ಕೊಡಿಸಿದರು. ರಾಜ್ಯಸೂತ್ರವನ್ನು ತಾವೇ ವಹಿಸಿದರು. ಇತ್ತ ಹೈದರ ಅಲಿಯ ಮೇಲೆ ಕೈಕೊಂಡ ದಂಡಯಾತ್ರೆಯಿಂದ ಮರಳಿ ಬರುವಾಗ ರಘುನಾಥರಾಯನಿಗೆ ಬಾರಾಭಾಯಿಗಳ ಕಾರಸ್ಥಾನದ ಸುದ್ದಿ ತಿಳಿದು ಬಂದಿತು. ಆಗ ಹೋಳಕರ, ಶಿಂದೆಯರ ಸಹಾಯ ಪಡೆಯಲು ಅವನು ಇಂದೂರಿಗೆ ಹೋದನು.

**ಪೇಶವೆ ಸವಾಯಿ ಮಾಧವರಾಯ** (೧೭೭೪–೧೭೯೫):— ಇವನು ೪೦ ದಿನದ ಕೂಸಿದ್ದಾಗಲೇ ಇವನಿಗೆ ಪೇಶವೆಯ ಅಧಿಕಾರ ದೊರೆಯಿತು. ಅಂದಿನಿಂದ ನಾನಾ ಫಡನೀಸನೇ ರಾಜ್ಯಕಾರಭಾರದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದನು. ಮಾಧವರಾಯನು ಅವನ ಹಿರಿತನದಲ್ಲಿ ಬೆಳೆದನು. ಅತ್ತ ಇಂದೂರಿಗೆ ಹೋದ ರಘುನಾಥರಾಯನಿಗೆ ಹೋಳಕರ, ಶಿಂದೆಯರ ಸಹಾಯ ಸಿಗಲಿಲ್ಲ. ಬಳಿಕ ಅವನು ಗುಜರಾತಕ್ಕೆ ಹೋದನು. ಅಲ್ಲಿ ತನಗೆ ಸಹಾಯ ಮಾಡಬೇಕೆಂದು ಇಂಗ್ಲಿಷರ ಬೆನ್ನು ಬಿದ್ದು ಅವರೊಂದಿಗೆ ಸುರತದಲ್ಲಿ ಒಪ್ಪಂದ ಮಾಡಿಕೊಂಡನು (೧೭೭೫). ಈ ಒಪ್ಪಂದದ ಒಂದು ಕರಾರಿನ ಮೇರೆಗೆ, ಇಂಗ್ಲಿಷರು ರಘುನಾಥರಾಯನಿಗೆ ಮರಳಿ ಪೇಶವೆ ಅಧಿಕಾರ ಕೊಡಿಸುವ ಹೊಣೆ ಹೊತ್ತರು. ಇದೇ ಇಂಗ್ಲಿಷ ಮತ್ತು ಮರಾಠರಲ್ಲಿ ಮೊದಲನೆಯ ಯುದ್ಧಕ್ಕೆ ಕಾರಣವಾಯಿತು. ಯುದ್ಧವು ೭ ವರುಷ ಸಾಗಿತು (೧೭೭೫–೧೭೮೨). ಆದರೂ ಕೊನೆಗೆ **ಸಾಲ್ಬಾಯಿ ಒಪ್ಪಂದ** (೧೭೮೨) ದ ಮೇರೆಗೆ, ಇಂಗ್ಲಿಷರು ರಘುನಾಥರಾಯನ ಪಕ್ಷವನ್ನು ಬಿಟ್ಟುಬಿಡಬೇಕಾಯಿತು. ರಘುನಾಥರಾಯನು ಪೇಶವೆಯಿಂದ ಪ್ರತಿವರುಷ ೩ ಲಕ್ಷ ರೂಪಾಯಿ ಉಂಬಳಿಯನ್ನಾಗಿ ಪಡೆದು ಪೇಶವೆಪದದ ಗೊಡವೆಯನ್ನು ಬಿಟ್ಟುಬಿಟ್ಟನು. ಮಾಧವ

ರಾಯನ ಆಳಿಕೆಯಲ್ಲಿ ನಾನಾ ಫಡನೀಸನ ಪ್ರಭಾವದಿಂದ ಮರಾಠರು ಟೀಪು ಸುಲ್ತಾನ (ಹೈದರಅಲಿಯ ಮಗ)ನ ಮೇಲೂ ನಿಜಾಮನ ಮೇಲೂ ಏರಿ ಹೋಗಿ ವಿಜಯಶಾಲಿಗಳಾದರು. ನಿಜಾಮನಮೇಲೆ ಹೂಡಿದ ಯುದ್ಧದಲ್ಲಿ ಖರ್ಡ್ಡ ಎಂಬಲ್ಲಿ ಮುಮ್ಮುಲ ಕಾಳಗವಾಯಿತು (೧೭೯೫). ನಿಜಾಮನು ಸಂಪೂರ್ಣ ವಾಗಿ ಸೋತು ಮರಾಠರು ಹಾಕಿದ ಕರಾರುಗಳಿಗೆ ಒಪ್ಪಿಕೊಳ್ಳಬೇಕಾಯಿತು. ಇದೇ ಮರಾಠಾ ಸರದಾರರೆಲ್ಲರೂ ಒಟ್ಟುಗೂಡಿ ಕೈಕೊಂಡ ಕೊನೆಯ ಯುದ್ಧವು. ಮಾಧವರಾಯನು ತನ್ನ ೨೧ ನೆಯ ವಯಸ್ಸಿನಲ್ಲಿ ಜ್ವರಪೀಡಿತ ನಾದಾಗ ಎಚ್ಚರತಪ್ಪಿ ಅರಮನೆಯ ಮೇಲುಪ್ಪರಿಗೆಯಿಂದ ಕೆಳಗೆ ಹಾರಿದನು. ಇದರಿಂದುಂಟಾದ ಗಾಯದಿಂದ ಮರಣ ಹೊಂದಿದನು (೧೭೯೫).

(ಕೊನೆಯ) ಪೇಶವೆ: ಎರಡನೆಯ ಬಾಜೀರಾಯ(೧೭೯೫-೧೮೧೮):— ಇವನು ಪೇಶವೆ ರಘುನಾಥರಾಯನ ಮಗ. ಇವನನ್ನು ನಾನಾ ಫಡನೀಸನು ಶಿವನೇರಿ ಕೋಟೆಯಲ್ಲಿ ಸೆರೆಯಲ್ಲಿಟ್ಟಿದ್ದನು. ಆದರೆ ಸವಾಯಿ ಮಾಧವರಾಯ ನಿಗೆ ಮಕ್ಕಳಿರಲಿಲ್ಲ ಆದುದರಿಂದ ನಾನಾ ಫಡನೀಸನು ಇವನಿಗೇ ಪೇಶವೆ ಅಧಿಕಾರ ಕೊಡಿಸಬೇಕಾಯಿತು. ಪೇಶವೆಯಾದಾಗ ಬಾಜೀರಾಯನು ೨೦ ವರುಷ ವಯಸ್ಸಿನವನು. ಇವನು ತನ್ನ ವೇಳೆಯನ್ನು ದೇವಪೂಜೆ, ಬ್ರಾಹ್ಮಣ ಭೋಜನ ಮತ್ತು ವಿಲಾಸಭೋಗಗಳಲ್ಲಿ ಕಳೆಯಹತ್ತಿದನು. ಆಡಳಿತದಲ್ಲಿ ಇವನಿಗೂ ನಾನಾ ಫಡನೀಸನಿಗೂ ಮತಭೇದಗಳು ಉಂಟಾಗತೊಡಗಿದವು. ದೌಲತರಾವ ಶಿಂದೆಯ ಸಹಾಯದಿಂದ ಇವನು ನಾನಾ ಫಡನೀಸನನ್ನು ಸೆರೆ ಯಲ್ಲಿಟ್ಟನು(೧೭೯೮). ಇದರಿಂದ ಆಡಳಿತವು ಸುಸೂತ್ರವಾಗಿ ಸಾಗದಾಯಿತು, ಜನರಲ್ಲಿ ಗಲಭೆಯುಂಟಾಯಿತು. ಆದುದರಿಂದ ಅವನನ್ನು ಬಂಧಮುಕ್ತ ಮಾಡಿದನು. ಆದರೆ ಮುಂದೆ ಸ್ವಲ್ಪೇ ಕಾಲದಲ್ಲಿ ನಾನಾ ಫಡನೀಸನು ಮರಣ ಹೊಂದಿದನು (೧೮೦೦). ಆಮೇಲೆಯಂತೂ ಬಾಜೀರಾಯನ ಅವಿವೇಕ ತನವು ಮತ್ತೂ ಬೆಳೆಯಿತು. ಯಶವಂತರಾವ ಹೋಳಕರನ ತಮ್ಮನಾದ ವಿಠೋಜಿ ಎಂಬವನನ್ನು ಆನೆಯ ಕಾಲಿಗೆ ಕೊಟ್ಟು ಕೊಲ್ಲಿಸಿದನು. ಯಶವಂತ ರಾಯನು ಸಿಟ್ಟಿಗೆದ್ದು ಪುಣೆಯ ಮೇಲೆ ಏರಿಬಂದನು. ಬಾಜೀರಾಯನು ಗಾಬರಿಯಾಗಿ ವಸಯಿಗೆ ಹೋಗಿ ಇಂಗ್ಲಿಷರನ್ನು ಆಶ್ರಯಿಸಿ ಅವರೊಂದಿಗೆ ಒಪ್ಪಂದ ಮಾಡಿಕೊಂಡನು (೧೮೦೨, ವಸಯಿಯ ಒಪ್ಪಂದ). ಅವರ ಸಹಾಯ ದಿಂದ ಮತ್ತೆ ಪೇಶವೆಯಾದನು. ಆದರೆ ಇವನು ಅವರ ಮಾಂಡಲಿಕನಾದುದ

ರಿಂದ ಮರಾಠಾ ರಾಜ್ಯವು ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡಂತಾಯಿತು. ಇಷ್ಟಾದ ಮೇಲೂ ಬಾಜೀರಾಯನು ಆಡಳಿತದಲ್ಲಿ ಅವಿವೇಕತೆಯನ್ನು ಬಿಡ ಲಿಲ್ಲ. ರಾಜ್ಯದಲ್ಲಿ ಪ್ರಮುಖ ಸರದಾರರ ವೈರವನ್ನು ಕಟ್ಟಿಕೊಂಡನು. ಕೊನೆಗೆ ಇಂಗ್ಲಿಷರ ಮೇಲೆ ಯುದ್ಧವನ್ನು ಹೂಡಿದನು (೧೮೧೮). ಆದರೆ ಅದರಲ್ಲಿ ಅವನು ಸೋತು ಅವರ ಕೈವಶವಾದನು. ಆಗ ಇಂಗ್ಲಿಷರು ಅವನ ರಾಜ್ಯ ವನ್ನು ತಾವೇ ತೆಗೆದುಕೊಂಡರು. ಬಾಜೀರಾಯನು ಅವರಿಂದ ಪ್ರತಿವರುಷ ಎಂಟು ಲಕ್ಷ ರೂಪಾಯಿ ಉಂಬಳಿ ಪಡೆದು ಬ್ರಹ್ಮಾವರ್ತದಲ್ಲಿ ಇರಹತ್ತಿದನು. ಈ ರೀತಿಯಾಗಿ ಪೇಶವಾಯಿಯು ಅಂತ್ಯಗೊಂಡಿತು. ಇದೇ ಅವಧಿಯಲ್ಲಿ ಇಂಗ್ಲಿಷರು ಭೋಸಲೆ, ಶಿಂದೆ, ಹೋಳಕರರೊಂದಿಗೆ ಯುದ್ಧ ನಡೆಸಿ ಅವರನ್ನೂ ತಮ್ಮ ಮಾಂಡಲಿಕರನ್ನಾಗಿ ಮಾಡಿಕೊಂಡರು. ಇತಿಹಾಸದಲ್ಲಿ ಈ ಯುದ್ಧ ಗಳು ಮರಾಠರ ಎರಡನೆಯ ಮತ್ತು ಮೂರನೆಯ 'ಯುದ್ಧಗಳೆಂದು ಕರೆಯಲ್ಪಡುತ್ತವೆ.

**ಶ್ರೀ ಚಿದಂಬರ ಮಹಾಸ್ವಾಮಿಗಳು** (೧೭೫೮-೧೮೧೭) :—

ಈ ಕಾಲದಲ್ಲಿ ತಮ್ಮ ಯೋಗಸಾಮರ್ಥ್ಯದಿಂದ ಜನರನ್ನು ಬೆರಗುಗೊಳಿಸಿದವರಲ್ಲಿ ಕರ್ನಾಟಕದ (ಮುರಗೋಡದ) ಶ್ರೀ ಚಿದಂಬರ ಸ್ವಾಮಿಗಳೂ ಒಬ್ಬರು. ಇವರು ಪೇಶವೆಯವರಿಗೆ ಮಾನ್ಯಗುರು ಗಳಾಗಿದ್ದರು. ತಮ್ಮ ಕಡೆಗೆ ಬಂದ ಎಲ್ಲರಿಗೂ ರಾಜಕೀಯ ಸಲಹೆಯನ್ನು ಕೊಡುತ್ತಿದ್ದರು. ಮೈಸೂರು, ಸಾಂಗಲಿ, ಮಿರಜ, 'ಜಮಖಂಡಿ. ಕೊಲ್ಹಾಪುರಗಳ ಅರಸರು ಇವರಿಂದ ರಾಜಕೀಯ ಸಲಹೆಗಳನ್ನು ಆಗಾಗ್ಗೆ ಪಡೆಯಲು ಇವರಲ್ಲಿ ಬರುತ್ತಿದ್ದರು. ಬಾಜೀರಾಯನೂ ಇವರ ದರ್ಶನ ಪಡೆದು ರಾಜಕೀಯ ಸಲಹೆ ಪಡೆದನು. ಇವರು ಸಮದೃಷ್ಟಿಯುಳ್ಳವರಾಗಿದ್ದರಾದ್ದರಿಂದ ಇವರ ಕಡೆಗೆ ಎಲ್ಲ ಪಂಥದವರೂ ಧರ್ಮದವರೂ ಬರುತ್ತಿದ್ದರು.



ಶ್ರೀ ಚಿದಂಬರ ಸ್ವಾಮಿ

ಇವರ ತೀಕ್ಷ್ಣ ಬುದ್ಧಿ, ವಿಶಾಲ ಮನಸ್ಸು, ಅಸಾಧಾರಣ ಯೋಗಸಾಮರ್ಥ್ಯ, ಜನಹಿತದೃಷ್ಟಿ ಇವುಗಳಿಂದಾಗಿ ಇವರು ಅವತಾರಪುರುಷರು ಎಂದು ಜನರು

ಅನ್ನುತ್ತಿದ್ದರು. ಇವರು ದೇವತಾ ವರಪ್ರಸಾದ ಪಡೆದ ಮಹನೀಯರೆಂದೂ ತಪಸ್ವಿಗಳೆಂದೂ ಸಾಧುವರ್ಯರೆಂದೂ ಜನರ ಭಾವನೆ ಇತ್ತು. ಸರದಾರ ಬಾಪು ಗೋಖಲೆ ಮುಂತಾದವರಿಗೂ ಇವರು ಪೂಜ್ಯರೆನಿಸಿದ್ದರು.

**ಮರಾಠರ ಅಳಿಗಾಲದ ಕಾರಣಗಳು :—**

ಮರಾಠರ ಸಾಮ್ರಾಜ್ಯದ ಕೊನೆಯು ಎರಡನೆಯ ಬಾಜೀರಾಯನ ಆಳಿಕೆಯಲ್ಲಿ-೧೮೧೮ ರಲ್ಲಿ-ಆಯಿತು. ಆದರೆ ಅದರ ಮೂಲ ಬೀಜವು ಒಂದು ನೂರು ವರುಷಗಳ ಮೊದಲೆ ಬಿತ್ತಲ್ಪಟ್ಟಿತ್ತು, ಎಂದು ಹೇಳಬಹುದು. ಯಾವುದೇ ಸಾಮ್ರಾಜ್ಯವು ಸುಸಂಘಟಿತವಾಗಿರಬೇಕಾದರೆ ಎರಡು ಮುಖ್ಯ ಮಾತುಗಳ ಕಡೆಗೆ ಲಕ್ಷ್ಯ ಹಾಕಬೇಕಾಗುವದು. ಮೊದಲನೆಯದು, ಕೇಂದ್ರವು ಕಾರ್ಯಕ್ಷಮತೆಯುಳ್ಳದ್ದಾಗಿರಬೇಕು, ಮತ್ತು ಅದರಲ್ಲಿ ರಾಜ್ಯದ ಎಲ್ಲ ಸೂತ್ರಗಳನ್ನು ಬಿಗಿಯಾಗಿ ಹಿಡಿಯುವ ಬಲವು ಇರಬೇಕು. ಎರಡನೆಯದು, ಬೇರೆ ಬೇರೆ ಭಾಗಗಳಲ್ಲಿ ಅಧಿಕಾರ ನಡೆಸುತ್ತಿರುವ ಅಧಿಕಾರಿಗಳು ಸಾಮ್ರಾಜ್ಯವನ್ನು ಇಡಿಯಾಗಿ ಇಟ್ಟುಕೊಳ್ಳಬೇಕೆಂಬ ಒಂದೇ ಧ್ಯೇಯವುಳ್ಳವರಾಗಿರಬೇಕು. ಈ ಎರಡೂ ಮಾತುಗಳ ಕಡೆಗೆ ಯಾರ ಲಕ್ಷ್ಯವೂ ಹೋಗಲಿಲ್ಲ, ಮತ್ತು ಲಕ್ಷ್ಯವು ಹೋಗಿದ್ದರೂ ಅದನ್ನು ಕಾರ್ಯತಃ ನಡೆಸಲಾಗಲಿಲ್ಲ, ಎಂಬುದೇ ಮರಾಠರ ಸಾಮ್ರಾಜ್ಯವು ಅಳಿಗಾಲಕ್ಕೆ ಬರಲು ಕಾರಣವೆಂದು ಕಂಡುಬರುವದು.

ಮರಾಠರ ಮೂಲಪುರುಷನಾದ ಶಿವಾಜಿಯು ತನ್ನ ಆಳಿಕೆಯಲ್ಲಿ ತನ್ನ ರಾಜ್ಯವನ್ನು ಸುಸಂಘಟಿತ ಹಾಗು ಸುವ್ಯವಸ್ಥಿತವಾಗಿ ಮಾಡಿದನು. ಆದರೆ ಅದೇ ಬಿಗುಹು ಸಂಭಾಜಿಯ ಆಳಿಕೆಯಲ್ಲಿ ಅವನ ವೈಯಕ್ತಿಕ ಗುಣಗಳಿಗಾಗಿ ಉಳಿಯಲಿಲ್ಲ. ರಾಜಾರಾಮ, ಶಾಹೂ ಅವರು ಹೆಸರಿಗೆ ರಾಜರಾಗಿದ್ದರು. ಶಾಹುವಂತೂ ಬೆನ್ನೆಲಬು ಕಳೆದುಕೊಂಡೇ ಮೊಗಲರ ವಶದಿಂದ ಹೊರಗೆ ಬಂದನು. ಹೀಗಾಗಿ ಶಿವಾಜಿಯ ನಂತರ ಸಾಮ್ರಾಜ್ಯದಲ್ಲಿ ಒಂದು ಬಗೆಯ ಸಡಿಲು ಹುಟ್ಟಿತು. ಆದರೆ ಅದು ಹೊರಗೆ ಕಾಣುತ್ತಿರಲಿಲ್ಲ; ಒಳಗಿಂದೊಳಗೆ ಉಳಿದು ಸಾಮ್ರಾಜ್ಯದ ಕೊನೆಯ ಗಳಿಗೆಯಲ್ಲಿ ದೊಡ್ಡದಾಗಿ ಹೊರಬಂದಿತು.

೧೭೨೦ ರಲ್ಲಿ ಬಾಳಾಜಿ ವಿಶ್ವನಾಥನು ಮರಣಹೊಂದಿದ ನಂತರ ಅವನ ಮಗ ೨೨ ವರುಷದ ತರುಣನಾದ ಬಾಜೀರಾಯನು ಪೇಶವೆ ಆದನು. ಇದು ಸಾಮ್ರಾಜ್ಯದ ಸರದಾರರ ಮನಸ್ಸಿಗೆ ಬರಲಿಲ್ಲ. ಆದರೆ ಇವನು [illegible]

ವಿರೋಧಿಸುವ ಧೈರ್ಯವು ಯಾರಿಗೂ ಆಗಲಿಲ್ಲ. ಬಾಜೀರಾಯನ —ಕ್ತಿ ಶಾಲಿಯಾಗಿದ್ದನು. ಆದುದರಿಂದ ಪರಂಪರೆಯಿಂದ ಬಂದ ಅಧಿ ರವನ್ನು ಕಾರ್ಯಕ್ಷಮತೆಯಿಂದ ನಿರ್ವಹಿಸಿದನು. ಆದರೆ ಸರದಾರರ ಮ ನಸ್ಸಿನಲ್ಲಿ ಅಸಮಾಧಾನವು ಒಳಗೊಳಗೇ ಉಳಿಯಿತು, ಎಂಬುದನ್ನು ಮರೆಯಲಾಗದು. ಏಕೆಂದರೆ, ಮುಂದೆ ಕಾರ್ಯಕ್ಷಮತೆ ಮತ್ತು ಸಾಮರ್ಥ್ಯವುಳ್ಳವರು ಪೇಶವೆಯ ಸ್ಥಾನಕ್ಕೆ ಬರಲಿಲ್ಲ; ಮತ್ತು ಆಗ ಸಾಮ್ರಾಜ್ಯದ ಸರದಾರರು ತಾವು ಸ್ವತಂತ್ರ ರೆಂಬ ಭಾವನೆಯನ್ನು ಬೆಳಿಸಿಕೊಂಡು ಬರುತ್ತಿದ್ದುದು ಕಂಡುಬಂತು. ಬಾಜೀ ರಾಯ, ನಾನಾಸಾಹೇಬ ಮತ್ತು ಒಂದನೆಯ ಮಾಧವರಾಯ ಇವರ ಆಳಿಕೆ ಯಲ್ಲಿ ಕೇಂದ್ರವು ಪ್ರಬಲವಾಗಿತ್ತು. ಇದನ್ನು ಸರದಾರರು ಅರಿತು ಸುಮ್ಮ ನಿದ್ದರು. ಉಳಿದ ಪೇಶ್ವೆಗಳ ಆಳಿಕೆಯಲ್ಲಿ ಅವರು ಸುಮ್ಮನಿರದೆ ತಮ್ಮದೇ ಆದ ರೀತಿಯಲ್ಲಿ ವರ್ತಿಸುತ್ತ ಬಂದರು. ಇದರಿಂದ ಮರಾಠರ ಅಳಿಗಾಲಕ್ಕೆ ಈ ಆಂತರಿಕ ವೈಮನಸ್ಯವೇ ಮೂಲಕಾರಣವೆಂದು ಹೇಳಬೇಕಾಗುವದು.

ಮರಾಠರ ಅಳಿಗಾಲಕ್ಕೆ ಈ ಕಾರಣದ ಹೊರತಾಗಿ ಇನ್ನೂ ಅನೇಕ ಕಾರಣಗಳು ಇದ್ದವು :— (೧) ಶಾಹುವು ಮೊಗಲರ ಪ್ರಭಾವದಲ್ಲಿ ಬೆಳೆದವ ನಾಗಿದ್ದನು. ಆದ್ದರಿಂದ ಅವನಲ್ಲಿ ಮರಾಠರ ರಾಜ್ಯವು ಒಂದನೆಯ ತರಗತಿ ಯದೆಂಬ ಭಾವನೆಯು ಮೂಡಲೇ ಇಲ್ಲ. (೨) ಪೇಶವೆಯರು ನಿಜಾಮ ನೊಡನೆ ಆಗಾಗ್ಗೆ ಯುದ್ಧಮಾಡಿ ಅವನನ್ನು ಮಣಿಸಿದರೂ ಅವನ ಶಕ್ತಿಯನ್ನು ಸಂಪೂರ್ಣವಾಗಿ ಸದೆಬಡಿಯಲಿಲ್ಲ. (೩) ಪೇಶವೆಯರ ಅಧಿಕಾರವು ಸರದಾರರಿಗೆ ಸರ್ವಸಮ್ಮತವೆಂದು ಎನಿಸಿರಲಿಲ್ಲ. ಪೇಶವೆಯರು ರಾಜ್ಯದ ಅಧಿಕಾರಿಗಳು ಎಂಬುದನ್ನು ಅರಗಿಸಿಕೊಳ್ಳುವದೂ ಸರದಾರರಿಗೆ ಸಾಧ್ಯವಾಗಲಿಲ್ಲ. (೪) ಪೇಶವೆಯರು ಆರ್ಥಿಕ ದೃಷ್ಟಿಯಿಂದ ಸಾಮ್ರಾಜ್ಯವನ್ನು ಸಬಲಗೊಳಿಸಿ ಸ್ಥಿರ ಸೈನ್ಯವನ್ನು ಇಟ್ಟುಕೊಳ್ಳಲು ಸಾಧ್ಯಮಾಡಿಕೊಳ್ಳಲಿಲ್ಲ. (೫) ಕಾಲಕ್ಕೆ ತಕ್ಕಂತೆ ಶಸ್ತ್ರಾಸ್ತ್ರಗಳ ಸಂಗ್ರಹ ಹಾಗೂ ಸೈನ್ಯ ಸಂಘಟನೆಯನ್ನು ಮಾಡಿ ಕೊಳ್ಳಲಿಲ್ಲ. ಆದುದರಿಂದ ಅವರಿಗೆ ಬ್ರಿಟಿಶರ ಶಿಸ್ತಿನ ಹೊಡೆತವನ್ನು ತಡೆದು ಕೊಳ್ಳಲಾಗಲಿಲ್ಲ. (೬) ಮಹಾರಾಷ್ಟ್ರದ ಮುತ್ಸದ್ಧಿಗಳೂ ಕರ್ತೃತ್ವಶಾಲಿಗಳೂ ಆದ ನಾನಾ ಫಡನೀಸ, ಮಹಾದಾಜಿ ಶಿಂದೆ, ಹೋಳಕರ, ಹರಿಪಂತ ಫಡಕೆ ಮುಂತಾದವರು ಕೊನೆಗಾಲದಲ್ಲಿ ಒಂದೆರಡು ವರುಷಗಳಲ್ಲಿ ತೀರಿಕೊಂಡರು. (೭) ಕೊನೆಯ ಕಾಲದಲ್ಲಿ ಅಧಿಕಾರದಲ್ಲಿದ್ದ ಎರಡನೆಯ ಬಾಜೀರಾಯ,

ಇದ್ದರು. ಇದ್ದ ದೌಲತರಾವ ಶಿಂದೆ ಇವರು ತಮ್ಮ ಹೇಡಿತನ ಹಾಗು ವೈಯಕ್ತಿಕ ರಕ್ಷಣೆಯ ಭ್ರಮೆ ಇವುಗಳ ಮೂಲಕ ಸಾರ್ವಜನಿಕ ಹಿತಸಂಬಂಧ ಗಳನ್ನು ಪರಕೀಯರಿಗೆ ಒತ್ತೆ ಹಾಕಿ ದೇಶದ್ರೋಹ ಮಾಡಿದರು. (೮) ಮುಖ್ಯ ವಾಗಿ ಬ್ರಿಟಿಶ ರಾಜನೀತಿಗೆ ಸಮನಾಗಿ ನಿಲ್ಲುವ ಯೋಗ್ಯತೆಯು ಪೇಶವೆಯರಲ್ಲಿ ಉಳಿಯದೇ ಹೋಯಿತು. ಆಂತರಿಕ ಶಕ್ತಿಯೂ ಕಳೆದುಹೋಯಿತು.

ಒಟ್ಟಿನಲ್ಲಿ, ಕೊನೆಯ ಕಾಲದಲ್ಲಿ ರಾಷ್ಟ್ರೀಯಭಾವನೆ, ಸಾರ್ವಜನಿಕ ಹಿತರಕ್ಷಣೆ ಇವು ಊರ್ಜಿತವಾಗಲಿಲ್ಲ. ಸ್ಥಾನಿಕ, ಪ್ರಾದೇಶಿಕ, ವೈಯಕ್ತಿಕ ಹಿತ ಸಂಬಂಧ ಇವುಗಳ ಕಡೆಗೆ ಮನಸ್ಸು ಮಾಡಿದ್ದರಿಂದ ಸಾಮ್ರಾಜ್ಯವನ್ನೂ ಸ್ವಾತಂತ್ರ್ಯವನ್ನೂ ಕಾಯ್ದಿಟ್ಟುಕೊಳ್ಳಲಾಗಲಿಲ್ಲ. ಇದೇ ಮರಾಠರ ಅಳಿಗಾಲದ ಇತಿಹಾಸದಿಂದ ಕಂಡುಬರುವ ಮಾತು.

**೨. ಮರಾಠರ ಕಾಲದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಸ್ಥಿತಿ :**

ಮರಾಠಾ ಸಾಮ್ರಾಜ್ಯದಿಂದ ಒಂದು ದೊಡ್ಡ ಕಾರ್ಯವು ಆಯಿತು. ಹಿಂದುಧರ್ಮವು ಪುನರುಜ್ಜೀವನಗೊಂಡಿತು. ಸಾಮ್ರಾಜ್ಯದ ಎಲ್ಲ ಭಾಗಗಳಲ್ಲಿ ಗುಡಿಗೋಪುರಗಳ ಜಿರ್ಣೋದ್ಧಾರವಾಯಿತು. ಯಾತ್ರಿಕರಿಗಾಗಿ ಅನುಕೂಲತೆ ಗಳು ಹೆಚ್ಚಿದವು. ವಿದ್ಯಾಸಂಸ್ಥೆಗಳಿಗೆ ಪೋಷಣೆಯು ದೊರಕಿತು. ಕೃಷಿ, ಕೈಗಾರಿಕೆ, ವ್ಯಾಪಾರಗಳು ಅಭಿವೃದ್ಧಿಗೊಂಡವು. ವ್ಯಾಪಾರಕ್ಕಾಗಿ ಒಂಟೆ ಗಳನ್ನೂ ಉಪಯೋಗಿಸಲಾಗುತ್ತಿತ್ತು. ಉದ್ಯೋಗಗಳಲ್ಲಿ ಕೃಷಿ ಮತ್ತು ನೇಕಾರಿಕೆ ಹೆಚ್ಚು ಊರ್ಜಿತ ಸ್ಥಿತಿಯಲ್ಲಿದ್ದವು. ಭಾಷೆ–ಸಾಹಿತ್ಯಗಳು ವಿಕಾಸ ಗೊಂಡವು.

ಮೊಗಲ ಸಾಮ್ರಾಜ್ಯವು ವಿಸ್ತಾರವಾಗಿ ಬೆಳೆದು ಅಳಿದುಹೋದುದು, ಮರಾಠರ ಸಾಮ್ರಾಜ್ಯವು ಆಯಾ ಸ್ಥಳಗಳಲ್ಲಿ ಹರಡಿದ್ದುದು ಇವು ಸಾಹಿತ್ಯ ಮತ್ತು ಕಲೆಯ ಮೇಲೆ ಪ್ರಭಾವ ಬೀರಿದವು. ಭಾರತಕ್ಕೆ ಒಂದು ರಾಷ್ಟ್ರಭಾಷೆ ರೂಪುಗೊಳ್ಳುತ್ತಲಿತ್ತು. ಅದು ಉರ್ದೂ–ಹಿಂದೀ ಎಂಬ ಹೆಸರಿನಿಂದ ಮುಂದೆ ಬರುತ್ತಲಿತ್ತು. ಭೂಷಣ ಮತ್ತು ಲಾಲ ಎಂಬ ಕವಿಗಳು ಶಿವಾಜಿ ಹಾಗೂ ಛತ್ರಸಾಲ ಇವರ ಕಾರ್ಯದ ಬಗೆಗೆ ಕಾವ್ಯಗಳನ್ನು ರಚಿಸಿದರು. ಮಹಾರಾಷ್ಟ್ರ ದಲ್ಲಿ 'ಪೋವಾಡಾ' ಲಾವಣಿಗಳು ಬೆಳೆಯತೊಡಗಿದವು. ಇವುಗಳಿಂದ ಜನ ಜಾಗೃತಿಗೆ ಹೆಚ್ಚು ಸಹಾಯವು ದೊರಕಿತು. ಆಗಿನ ಕಾಲದ ಹಳ್ಳಿಯ ಜೀವನ ವನ್ನು ಇವು ಚೆನ್ನಾಗಿ ಚಿತ್ರಿಸುತ್ತವೆ. 'ಬಖರ' ಗಳೆಂಬ ಐತಿಹಾಸಿಕ

ವೃತ್ತಾಂತಗಳು ಉತ್ತಮ ಗದ್ಯದಲ್ಲಿ ಬರೆಯಲ್ಪಟ್ಟವು. ಮತ್ತು ಪತ್ರಸಾಹಿತ್ಯವೂ ಹೇರಳವಾಗಿ ಬೆಳೆಯಿತು.

ಅನೇಕ ಯುದ್ಧ, ವಿಪ್ಲವ, ಕ್ರಾಂತಿಗಳು ಆಗಾಗ್ಗೆ ಜರುಗಿ ಜನತೆಗೆ ತುಸು ತೊಂದರೆಯಾಯಿತು. ಆದಾಗ್ಯೂ ಒಟ್ಟಿನಲ್ಲಿ, ಕೃಷಿ ಮತ್ತು ವ್ಯಾಪಾರಗಳು ಊರ್ಜಿತಾವಸ್ಥೆಯಲ್ಲಿದ್ದುದರಿಂದ ಜನತೆಯು ಸುಖಿಯಾಗಿತ್ತು. ಬ್ರಿಟಿಶರು ಆಗಿನ ಕೈಗಾರಿಕೆಗಳ ಕೌಶಲ್ಯವನ್ನು ಕಂಡು ಬೆರಗಾಗಿದ್ದರು. ಈ ಕೈಗಾರಿಕೆಗಳನ್ನು ಬೆಳೆಯಗೊಟ್ಟರೆ ತಮ್ಮ ಇರುವಿಕೆಗೇ ಏಟು ಬೀಳುವದೆಂದು ಕುಶಲ ವಿಶ್ವಕರ್ಮರನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಪರಂಪರಾಪ್ರಿಯತೆಯ ಮೂಲಕ ಹೊಸ ಜ್ಞಾನ-ಸಂಪತ್ತನ್ನು ಬೆಳೆಸಿಕೊಳ್ಳಬೇಕೆಂಬ ಲವಲವಿಕೆ ಆಗಿನ ಕಾಲದಲ್ಲಿ ಇದ್ದಿಲ್ಲ. ಇದು ಸಾಮ್ರಾಜ್ಯದ ಆಳಿಗಾಲಕ್ಕೂ ನಮ ಪೂರ್ವಜರ ಜ್ಞಾನಭಾಂಡಾರವನ್ನು ಉಳಿಸಿಕೊಳ್ಳುವದಕ್ಕೂ ಕಾರಣವಾಯಿತು.

ಆಗಿನ ಕಾಲದ ಲಾವಣಿ ಮತ್ತು ಅಭಂಗಗಳನ್ನು ಪರಿಶೀಲಿಸಿ ನೋಡಿದರೆ ಆಗಿನ ಸಾಮಾಜಿಕ, ಸಾಂಸ್ಕೃತಿಕ ಪರಿಸ್ಥಿತಿಯ ಕಲ್ಪನೆ ಬರುವದು. ಸಂತ ತುಕಾರಾಮರ ಅಭಂಗಗಳಿಂದ ನಮಗೆ ಆಗಿನ ಕಾಲದಲ್ಲಿ ಪುರಾಣಿಕ, ಕತೆಗಾರ, ಕವಿ, ಸಂತ, ಗುರು, ಬ್ರಾಹ್ಮಣ, ಪಂಡಿತ, ಗೋಸಾವಿ, ಭವಿಷ್ಯವಾದಿ, ಜಂಗಮ, ಶಾಕ್ತ ಇತ್ಯಾದಿ ವೃತ್ತಿ ವ್ಯವಸಾಯಿಗಳ ಸಾಮಾಜಿಕ ವರ್ಗವೇ ಬೆಳೆದುಬಂದಿತ್ತೆಂಬುದು ಗೊತ್ತಾಗುತ್ತದೆ.

ಹುತುತು, ಗಿಲ್ಲಿ-ದಾಂಡು, ಕೋಲಾಟ ಮುಂತಾದ ಹೆಸರಿನ ಆಟಗಳೂ ಆಗ ಪ್ರಚಲಿತವಿದ್ದವು. ಇದೇ ಕಾಲದಲ್ಲಿ ಕರ್ನಾಟಕದಿಂದ ಮಹಾರಾಷ್ಟ್ರಕ್ಕೆ ಯಕ್ಷಗಾನಗಳು, ದೊಡ್ಡಾಟಗಳು, ದಶಾವತಾರದ ಆಟಗಳು ಹೋದುವು. ಹೋಳೀಹುಣ್ಣಿಮೆಯ ಕಾಲದಲ್ಲಿ 'ತಮಾಶಾ' ಗಳು ಆಗುತ್ತಿದ್ದವು. ಅವುಗಳಲ್ಲಿ ನಾಚು-ಗಾಯನ, ಪ್ರಶ್ನೋತ್ತರ ಮಾಲಿಕಾ, ಒಗಟುಗಳ ಮಂಡನೆ-ಖಂಡನೆಗಳು ನಡೆಯುತ್ತಿದ್ದವು, ಮತ್ತು ಅವುಗಳಿಂದ ಒಳ್ಳೇ ಮನೋರಂಜನೆಯಾಗುತ್ತಿತ್ತು.

ವ್ಯವಹಾರದಲ್ಲಿ ನಾಣ್ಯಗಳು ಪ್ರಚಲಿತವಿದ್ದರೂ ಹುಂಡಿಯ ವ್ಯವಹಾರವೂ ಬಳಕೆಯಲ್ಲಿತ್ತು.

ಜನರು ಒಕ್ಕಲುತನವನ್ನೇ ಅವಲಂಬಿಸಿದ್ದರು. ಆದ್ದರಿಂದ ಹೊಲದ

ಪ್ರವೃತ್ತಿಯೂ ಅವರಲ್ಲಿ ಹೆಚ್ಚಾಗಿತ್ತು. ಆದುದರಿಂದ ಆಗಿನ ಕಾಲದ ಸಮಾಜದವರು ಧರ್ಮ-ಕರ್ಮಗಳ ಕಡೆಗೆ ಹೆಚ್ಚು ಲಕ್ಷ್ಯ ಪೂರೈಸಿದರೇ ಹೊರತು ರಾಜಕೀಯದ ಕಡೆಗೆ ಲಕ್ಷ್ಯ ಹಾಕಲಿಲ್ಲ. ಮರಾಠರು ಸಾಮ್ರಾಜ್ಯವನ್ನು ಕಟ್ಟಿದರೂ ಅದನ್ನು ಸ್ಥಿರವಾಗಿರಿಸಲು ಬೇಕಾಗುವ ವಿದ್ಯೆ-ಸಂಸ್ಕೃತಿಗಳನ್ನು ಜನತೆಯಲ್ಲಿ ಬೆಳೆಸಲಿಲ್ಲ; ತರಬೇತುಶಾಲೆಗಳ ಹಾಗೂ ಶಿಕ್ಷಣಕೇಂದ್ರಗಳ ವ್ಯವಸ್ಥೆಯನ್ನು ಮಾಡಲಿಲ್ಲ.

## ಅಭ್ಯಸನಗಳು

೧. ಕೆಳಗಿನ ವಾಕ್ಯಗಳಲ್ಲಿ ತೆರವಿರುವ ಸ್ಥಳಗಳನ್ನು ಯೋಗ್ಯ ಶಬ್ದಗಳಿಂದ ತುಂಬಿರಿ:

ಅ. ........................ ಯ ಕುತಂತ್ರದಿಂದ ಪೇಶವೆ ನಾರಾಯಣರಾಯನ ಕೊಲೆಯು ಸಂಭವಿಸಿತು.

ಆ. ಸುರತದ ಒಪ್ಪಂದ (೧೭೭೫) ದ ಮೇರೆಗೆ, ...................... ರಘುನಾಥ ರಾಯನಿಗೆ ಮರಳಿ ಪೇಶವೆ ಅಧಿಕಾರವನ್ನು ದೊರಕಿಸಿಕೊಡುವ ಹೊಣೆಯನ್ನು ಹೊತ್ತರು.

ಇ. ನಾನಾಫಡನೀಸನು ಕ್ರಿ. ಶ. .................... ರಲ್ಲಿ ಮರಣ ಹೊಂದಿದನು.

೨. ಕೆಳಗೆ ಕೆಲವು ಹೇಳಿಕೆಗಳನ್ನು ಕೊಡಲಾಗಿದೆ. ಅವು ಸರಿಯೋ ತಪ್ಪೋ ಎಂಬುದನ್ನು ಪ್ರತಿಯೊಂದು ಹೇಳಿಕೆಯ ಕೊನೆಯಲ್ಲಿರುವ ಕಂಸಗಳಲ್ಲಿ ಬರೆಯಿರಿ :—

ಅ. ಪೇಶವೆ ೧ನೆಯ ಮಾಧವರಾಯನ ತರುವಾಯ ಒಟ್ಟು ನಾಲ್ವರು ಪೇಶವೆಯರಾಗಿ ಹೋದರು. (          )

ಆ. ವಸಯಿಯ ಒಪ್ಪಂದ (೧೮೦೨) ದಿಂದ ಇಂಗ್ಲಿಷರು ರಘುನಾಥರಾಯನ ಪಕ್ಷವನ್ನು ಬಿಟ್ಟುಬಿಟ್ಟರು. (          )

ಇ. ಸವಾಯಿ ಮಾಧವರಾಯನ ಆಳಿಕೆಯಲ್ಲಿ ನಾನಾ ಫಡನೀಸನೇ ಸರ್ವಾಧಿಕಾರಿಯಾಗಿದ್ದನು. (          )

ಈ. ಎರಡನೆಯ ಬಾಜೀರಾಯನು ಮರಾಠಾ ಸರದಾರರ ಪ್ರೀತಿಯನ್ನು ಗಳಿಸಿ ಕಾರಭಾರ ಸಾಗಿಸಿದನು. (          )

೩. ಚಿಕ್ಕ ಟಿಪ್ಪಣಿ ಬರೆಯಿರಿ :—

[ಅ] ೧ನೆಯ ಮಾಧವರಾಯ [ಆ] 'ಬಾರಾಭಾಯಿ' [ಇ] ಶ್ರೀ ಚಿದಂಬರ ಮಹಾಸ್ವಾಮಿಗಳು.